ಸಚಿತ್ರ

# ಶ್ರೀವೇಂಕಟೇಶ ಮಾಹಾತ್ಮ್ಯೆ





ವೇ. ತಿ. ಗಳಗನಾಥ

**ಗಳಗನಾಥ ಸುರಸ ಗ್ರಂಥಮಾಲೆ**



**ರಹಸ್ಯಾಂತಗನತೆ**

**ಸಚಿತ್ರ**

# ಶ್ರೀ ವೇಂಕಟೇಶ ಮಾಹಾತ್ಮ್ಯ



ಇವನ್ನು ಕ್ರಮವಾಗಿ

**ವೇಂಕಟೇಶ ತಿರಕೋ ಕುಲಕರಣಿ,** ಗಳಗನಾಥ,

ಪೇನ. ಅ॥ ಮಾಸ್ತರ, ಟ್ರೇ. ಕಾ. ಧಾರವಾಡ,

ಹಾಗು

**ವ್ಹೆ. ಶ್ರೀನಿವಾಸ ನರಸಿಂಹ ಕಾಟೋಟಿ,**

ಇವರು

ಬರೆದರು, ಹಾಗು ಭಾಷಾಂತರಿಸಿದರು

ಎರಡನೆಯ ಆವೃತ್ತಿ ೨೦೦೦ ಪ್ರತಿಗಳು

**1932**

**ಬೆಲೆ ೧ ರೂ.**

ಇದನ್ನು ಖಂಡೋ ರಾಮಚಂದ್ರ ಭಿಸೆ ಇವರು ಧಾರವಾಡ
ಕರ್ನಾಟಕ ಪ್ರಿಂಟಿಂಗ ವರ್ಕ್ಸದಲ್ಲಿ ಮುದ್ರಿಸಿದರು.
ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ
ಇವರು ಹಾವೇರಿಯ ಸದ್ಗುರು ಆಫೀಸಿನಲ್ಲಿ
ಪ್ರಸಿದ್ಧ ಮಾಡಿದರು

## ಪ್ರಕೃತ-ಪುರಾಣ-ರಹಸ್ಯಾಂತರ್ಗತವಾದ

# ಪ್ರಸ್ತಾವನೆಯು

### ೨ನೆಯ ಆವೃತ್ತಿ

ಶ್ರೀ ವೆಂಕಟೇಶಮಾಹಾತ್ಮ್ಯವನ್ನು ಪ್ರತಿವರ್ಷ ನವರಾತ್ರಿಯಲ್ಲಿ ಕೇಳುವ ಪ್ರಸಂಗವಿರುವದರಿಂದ, ಅದೊಂದು ನಿತ್ಯದ ವ್ಯಾವಹಾರಿಕ-ವಿಷಯವೆಂದು ತಿಳಿದು ಆ ಪುರಾಣಗಳನ್ನು ಹೇಳುವವರೂ ಕೇಳುವವರೂ ಕೂಡಿಯೇ ಅದನ್ನೇ ಲಕ್ಷಿಸುವದುಂಟು. ಅದರಲ್ಲಿ ಆ ಪುರಾಣವನ್ನು ಹೇಳುವದಕ್ಕೆ ವಿದ್ವಾಂಸರು ಸಿಗುವದು ಕಡಿಮೆ, ಸಾಂಪ್ರದಾಯವು ಮುಗ್ಗದಂತೆ ಸರ್ವಸಾಧಾರಣ ಜನರು ಹೇಗಾದರೂ ಪುರಾಣ ಹೇಳಿ ಕೆಲಸ ಸಾಗಿಸಿಕೊಂಡು ಹೋಗುವದೇ ಬಹಳ. ಅಂಥವರು ಪುರಾಣದ ರಹಸ್ಯವನ್ನು ಹೇಗೆ ಒಡೆದು ಹೇಳಬೇಕು ? ಅದರಂತೆ, ಪುರಾಣ ಕೇಳುವದರಲ್ಲಿ ಭಾವಿಕರಲ್ಲದವರು-"ಕೇಳತಕ್ಕದ್ದೇನದೆಯೆಂಬ ಔದಾಸೀನ್ಯಭಾವದಿಂದಾಗಲಿ," ತಮಗೆ ಕೆಲಸದಲ್ಲಿ ಕೂಡುವದಿಲ್ಲೆಂಬ ನೆವದಿಂದಾಗಲಿ, "ವೆಂಕಟಪತಿಯು ನಮ್ಮ ಕುಲಸ್ವಾಮಿಯಲ್ಲೆಂಬ ನಿರರ್ಥಕ ಕಾರಣದಿಂದಾಗಲಿ, ಮೂಲತಃ ಪುರಾಣ ಕೇಳಲಿಕ್ಕೇ ಹೋಗುವದಿಲ್ಲ. ಅಪ್ಪಿ ತಪ್ಪಿ ಹೋದರೆ, ಅಂದಿಷ್ಟು ಇಂದಿಷ್ಟು ಹೇಗಾದರೂ ಬೇಸರದಿಂದ ಕೇಳುವರು. ಅಂದಬಳಿಕ ರಹಸ್ಯವಿಚಾರದ ಕಡೆಗೆ ಅವರ ಮನಸ್ಸು ಹೇಗೆ ಹರಿಯಬೇಕು ? ಅದರಂತೆಯೇ, ಭಾವಿಕರಾದವರು, ತಾವು ಪ್ರತಿವರ್ಷ ಪುರಾಣ ಕೇಳುತ್ತೇವೆಂಬ ತೃಪ್ತಿಯಿಂದಾಗಲಿ, "ನಮಗೆಲ್ಲ ಗೊತ್ತಿದೆಯೆಂಬ ಅಭಿಮಾನದಿಂದಾಗಲಿ ಪುರಾಣದ ರಹಸ್ಯದ ಕಡೆಗೆ ಲಕ್ಷಕೊಡದೆ, ಕೇವಲ ಕುಲಸ್ವಾಮಿಯ ಮಾಹಾತ್ಮ್ಯವೆಂಬ ಮೂಢ ಭಾವನೆಯಿಂದ ಪುರಾಣವನ್ನು ಕೇಳುವರು. ಇವೆರಡಕ್ಕೂ ಈ ಲೇಖಕನ ಅನುಭವವೇ ಸಾಕ್ಷಿಯು. ಆತನು ಇಷ್ಟು ದಿವಸಗಳಾದರೂ ವೇಂಕಟೇಶಮಾಹಾತ್ಮ್ಯವನ್ನು ಸಾದ್ಯಂತವಾಗಿ ಕೇಳಿದ್ದೇ ಇಲ್ಲ; ಆದರೂ ಅಲ್ಲಿಷ್ಟು ಇಲ್ಲಿಷ್ಟು ಕೇಳಿ ಪುರಾಣವು ಬಹಳ ನೆಟ್ಟಗದೆಯೆಂದು ಮಾತ್ರ ತಿಳಿದುಕೊಂಡಿದ್ದನು.

ಈ ತಿಳುವಳಿಕೆಯಿಂದ ಲೇಖಕನು ಶ್ರದ್ಧೆಯುಳ್ಳವನಾಗಿ ವೇಂಕಟೇಶ ಮಾಹಾತ್ಮ್ಯವನ್ನು ಯಥಾಮತಿ ಕನ್ನಡದಲ್ಲಿ ಭಾಷಾಂತರಿಸಿ ತನ್ನ ಕುಲಸ್ವಾಮಿಯ

ಸೇವೆಯನ್ನು ಮಾಡಿ ಜನ್ಮ ಸಾರ್ಥಕ ಮಾಡಿಕೊಳ್ಳಬೇಕೆಂದು, ಈಗ ಎಷ್ಟೋ ವರ್ಷಗಳಿಂದ ಯೋಚಿಸುತ್ತಿದ್ದನು; ಆದರೆ ಅಷ್ಟು ಪುಣ್ಯವನ್ನು ಆತನು ಮಾಡಿದಂತೆ ತೋರಲಿಲ್ಲ. ಆತನ ಈ ಮನೋದಯವನ್ನು ಪೂರ್ಣಮಾಡುವದಕ್ಕಾಗಿಯೋ ಅನ್ನುವಂತೆ ವೇ. ರಾ. ರಾ. ಶ್ರೀನಿವಾಸ ನರಸಿಂಹಾಚಾರ್ಯ ಕಾಟೋಟಿ ಸ್ಕೂಲಮಾಸ್ತರ ಬಾಲೆಹೊಸೂರ ಇವರು, ಬಹು ಭಕ್ತಿಯಿಂದ ಆ ಪುರಾಣವನ್ನು ಅಕ್ಷರಶಃ ಕನ್ನಡದಲ್ಲಿ ಭಾಷಾಂತರಿಸಿ, ಅದರ ಸುಂದರವಾದ ಹಸ್ತಲಿಖಿತ ಪ್ರತಿಯನ್ನು ನನ್ನ ಕಡೆಗೆ ಕಳಿಸಿದರು; ಆದರೆ ಕೆಲಸದಲ್ಲಿ ಅದನ್ನು ಓದಿ ನೋಡುವದು ಕೂಡ ಆಗಲಿಲ್ಲ. ಆದರೆ ಮುಂದೆ ಓದಿ ನೋಡುವ ಆ ಕೆಲಸವನ್ನು ಲೇಖಕನ ಪ್ರಿಯಮಿತ್ರರಾದ ಕೈ. ವಾ. ವಲ್ಲಭರಾವ ಶಟ್ಟಿ ಇವರು ಆಸ್ಥೆಯಿಂದ ಮಾಡಿ, ಕನ್ನಡಿಗರ ಮೇಲೆ, ವಿಶೇಷವಾಗಿ ವೇಂಕಟೇಶನ ಭಕ್ತರಮೇಲೆ ಮಹದುಪಕಾರ ಮಾಡಿದರೆಂದು ಹೇಳಬೇಕಾಗುವದು; ಯಾಕಂದರೆ, ಅವರು ಪೆಟ್ಟಿನ ಮೇಲೆ ಪೆಟ್ಟು ಎರಡು ಸಾರೆ ನಮ್ಮ ಆಚಾರ್ಯರವರ ಹಸ್ತಲಿಖಿತ ಪ್ರತಿಯನ್ನು ಓದಿ ಉತ್ತಮಾಭಿಪ್ರಾಯವನ್ನು ಕೊಡದಿದ್ದರೆ, ಈ ಕನ್ನಡ ವೇಂಕಟೇಶ ಮಹಾತ್ಮ್ಯವು ಮುದ್ರಿಸಿ ಸಿದ್ಧವಾಗುತ್ತಿದ್ದಿಲ್ಲ! ನಮ್ಮ ಆಚಾರ್ಯರು ಮಾಡಿದ ಉತ್ತಮ ಕೆಲಸದ ಅನುಭವವು ಮುದ್ರಿಸತಕ್ಕ ವಿಷಯವನ್ನು ತಿದ್ದುವಾಗ ಈ ಲೇಖಕನಿಗೂ ಆಯಿತು. ಆಚಾರ್ಯರು ಭಾಷಾಂತರದ ಕೆಲಸದಲ್ಲಿ ತೋರಿಸಿದ ಭಕ್ತಿಯೂ, ಪಟ್ಟಶ್ರಮವೂ ವರ್ಣನೀಯವಾಗಿರುತ್ತವೆ.

ಶ್ರೀ ವೇಂಕಟೇಶಮಾಹಾತ್ಮ್ಯವು ಅತ್ಯಂತ ರಸಭರಿತವೂ, ರಹಸ್ಯಪೂರ್ಣವೂ ಬೋಧಪ್ರದವೂ, ಸನ್ಮಾರ್ಗದರ್ಶಕವೂ, ಮಂದಮತಿಗಳಿಗೂ ತಿಳಿಯುವಷ್ಟು ಸುಲಭರಚನೆಯುಳ್ಳದ್ದೂ, ಪ್ರಾಸಾದಿಕವೂ ಆಗಿರುತ್ತದೆ. ಅದರಲ್ಲಿ ಶೃಂಗಾರ-ಕರುಣಾದ್ಭುತರಸಗಳು ತುಂಬಿ ತುಳುಕುತ್ತಿರುವವು. ಇವಲ್ಲದೆ ಬೀಭತ್ಸ, ರೌದ್ರ ಭಯಾನಕ ಮೊದಲಾದ ರಸಗಳನ್ನಾದರೂ ಅದರಲ್ಲಿ ಕಾಣಬಹುದು. ಇಡಿಯ ಪುರಾಣದಲ್ಲಿ ಕೃತ್ರಿಮ ವರ್ಣನವೇ ಇಲ್ಲ. ಸ್ವಾಭಾವಿಕವೂ, ಯಥಾರ್ಥವೂ, ಸತ್ಯವೂ ಆದ ವರ್ಣನದಿಂದ ಪುರಾಣವು ಹೃದಯಂಗಮವಾಗಿರುತ್ತದೆ ಈ ಮಾತನ್ನು ಮುಖ್ಯವಾಗಿ ಶ್ರೀನಿವಾಸನ ವಿವಾಹ ಪ್ರಸಂಗದಿಂದ ರಸಿಕರಾದವರು ಮನಗಾಣಬಹುದು. ಕುಟುಂಬವತ್ಸಲರಾದವರು ಪರಮ ಮಂಗಲಪ್ರದವಾದ ಈ ಪುರಾಣವನ್ನು ರಹಸ್ಯವರಿತು ಓದಿಯೇ ತೀರಬೇಕೆಂದು ಆಗ್ರಹದಿಂದ ಹೇಳ

ಬಹುದು. ಇದು ಒಂದು ಉತ್ತಮ ಕಾದಂಬರಿಯಂತೆ ಓದುವವರ ಮನೋರಂಜನೆ ವನ್ನು ಮಾಡಿ, ಅವರ ಅಭೀಷ್ಟವನ್ನು ಪೂರ್ತಿಯಿಸುತ್ತದೆಂಬದರಲ್ಲಿ ಸಂಶಯವಿಲ್ಲ. ಈ ಪುರಾಣದಿಂದ ಭಕ್ತಿಯು ಪರಿಪೋಷಣವೂ, ಅಭಿವೃದ್ಧಿಯೂ ತಪ್ಪದೆ ಆಗು ತ್ತವೆ. ಇಡಿಯ ಪುರಾಣದಲ್ಲಿ ರಸಹೀನವಾದ ಭಾಗವನ್ನು ಕಾಣುವ ಹಾಗಿಲ್ಲ; ಆದರೂ, ಕುಂತಲಾ-ಮಾಧವರ ವೃತ್ತಾಂತ, ಶ್ರೀನಿವಾಸನ ಮೃಗಯಾ ಪ್ರಸಂಗ ಪದ್ಮಾವತೀ-ಶ್ರೀನಿವಾಸರ ಸಂದರ್ಶನಯೋಗ, ಬಕುಲಾವತಿಯನ್ನು ಸ್ವಕಾರ್ಯ ಸಾಧನಕ್ಕಾಗಿ ಶ್ರೀನಿವಾಸನು ಉತ್ತೇಜನಗೊಳಿಸಿದ ವಿಷಯ, ಭಗವಂತನು ಕೊರ ವಂಜಿಯಾಗಿ ನಟಿಸಿದ ಬಗ್ಗೆ, ವಿವಾಹಮಹೋತ್ಸವ, ತೊಂಡಮಾನರಾಜನ ಪೂರ್ವಜನ್ಮವೃತ್ತಾಂತ, ಕೂರ್ಮನೆಂಬ ಬ್ರಾಹ್ಮಣನ ಆಶ್ಚರ್ಯಕರವಾದ ಚರಿತ್ರ ಮೊದಲಾದ ಸಂಗತಿಗಳು ಅತ್ಯಂತ ರಸಭರಿತವಾಗಿರುವವೆಂದು ಬುದ್ಧಿಪೂರ್ವಕ ಹೇಳದೆ ಇರಲಾರೆವು.

ವೈದಿಕಧರ್ಮದ ರಹಸ್ಯವನ್ನು ತಿಳಿಯುವದಕ್ಕೆ ಶ್ರುತಿ-ಸ್ಮೃತಿ-ಪುರಾಣ ಗಳು ಅಧಿಕಾರಭೇದದಿಂದ ಸಹಾಯಕಾರಿಗಳಾಗಿರುವವಷ್ಟೇ! ಇವುಗಳಲ್ಲಿ ಪುರಾಣ ಗಳು ಮಂದಮತಿಗಳಿಗೂ ಕೂಡ ಧರ್ಮದರಹಸ್ಯವನ್ನು ತಿಳಿಸಿಕೊಡುವವು; ಆದರೆ ಜ್ಞಾನಿಗಳ ಮುಖದಿಂದ ಪುರಾಣವನ್ನು ಕೇಳದಿದ್ದರೆ, ಪುರಾಣಶ್ರವಣದಿಂದ ಒಂದುಬಗೆಯ ಭ್ರಾಂತಿಯು ಉತ್ಪನ್ನವಾಗಿ ಮನುಷ್ಯರಲ್ಲಿ ದುರಭಿಮಾನವು ಹೆಚ್ಚುವ ಸಂಭವವಿರುತ್ತದೆ. ಹದಿನೆಂಟು ಮುಖ್ಯ ಪುರಾಣಗಳಲ್ಲಿಯೂ, ಬೇರೆ ಅಸಂಖ್ಯ ಉಪಪುರಾಣಗಳಲ್ಲಿಯೂ ಬ್ರಹ್ಮ-ವಿಷ್ಣು-ಶಿವ-ಶಕ್ತಿ ಮೊದಲಾದ ದೇವತೆಗಳ ಸರ್ವೋತ್ತಮತ್ವವನ್ನು ಪ್ರತಿಪಾದಿಸಿರುವದಲ್ಲದೆ, ಒಂದಕ್ಕೊಂದು ವಿರುದ್ಧವಾದ, ಹಾಗು ಹೊಂದಿಕೆ ಇಲ್ಲದ ಸಂಗತಿಗಳು ಅವುಗಳಲ್ಲಿ ಪ್ರತಿಪಾದಿಸ ಲ್ಪಟ್ಟಿರುತ್ತವೆ! ಆದ್ದರಿಂದ ಪುರಾಣಗಳನ್ನು ಓದುವವರಿಗೆ ಹುಚ್ಚು ಹಿಡಿದಂತಾಗಿ, ದೇವರಲ್ಲಿ ಸರ್ವೋತ್ತಮನಾರು? ಯಾರನ್ನು ನಂಬಬೇಕು? ಯಾವಪುರಾಣದಲ್ಲಿಯ ಮಾತು ಸತ್ಯವಾದದ್ದು? ಒಬ್ಬ ವ್ಯಾಸರೇ ಎಲ್ಲ ಪುರಾಣಗಳನ್ನು ರಚಿಸಿದ್ದ ಪಕ್ಷ ದಲ್ಲಿ ಒಂದಕ್ಕೊಂದು ವಿರುದ್ಧವಾದ ಸಂಗತಿಗಳನ್ನು ಹೀಗೆ ಯಾವ ಉದ್ದೇಶದಿಂದ ಅವರು ಪ್ರತಿಪಾದಿಸಿದರು? ಅವರು ಒಂದೇ ಪುರಾಣವನ್ನು ರಚಿಸಿದ್ದರೆ ನೆಟ್ಟ ಗಾಗುತ್ತಿದ್ದಿಲ್ಲವೆ? ಎಂಬಿವೇ ಮೊದಲಾದ ವಿಚಾರಗಳು ಜಿಜ್ಞಾಸುಗಳ ಮನಸ್ಸಿ ನಲ್ಲಿ ಹುಟ್ಟುವ ಸಂಭವವಿರುತ್ತದೆ. ಊಟದ ಹಲವು ಪದಾರ್ಥಗಳಲ್ಲಿ ರುಚಿ

ಭೇದವೂ, ರೂಪಭೇದವೂ ತೋರುತ್ತಿದ್ದರೂ, ಅವುಗಳಿಂದುಂಟಾಗುವ ತೃಪ್ತಿಯು ಒಂದೇಯಾಗಿರುವಂತೆ, ವಿಚಿತ್ರತೆಯನ್ನು ಪ್ರಕಟಿಸುವ ಹಲವು ಪುರಾಣಗಳನ್ನು ವ್ಯಾಸರು ಬರೆದಿದ್ದರೂ, ಅವುಗಳಲ್ಲಿಯ ರಹಸ್ಯವು ಒಂದೇ ಇರುತ್ತದೆ. ಊಟಕ್ಕೆ ಬರಿಯ ಅನ್ನವನ್ನೊಂದು ಮಾಡಿದ್ದರೆ ಸಾಕಾಗುತ್ತಿತ್ತೆಂದು ಹೇಳುವವನ ಮಾತು, ಆರೋಗ್ಯದೃಷ್ಟಿಯಿಂದ ಹಾಸ್ಯಾಸ್ಪದವಷ್ಟೇ ಅಲ್ಲ. ಸ್ವಾರಸ್ಯದದೃಷ್ಟಿಯಿಂದಲೂ ಅಸಮಂಜಸವಾಗಿ ತೋರುವಂತೆ, ಒಂದೇ ಪುರಾಣವಿದ್ದರೆ ಸಾಕಾಗಿತ್ತೆಂದು ಹೇಳುವವರ ಮಾತಿನ ಗತಿಯಾದರೂ ಆಗುವದು. ಅನಂತ ಪುರಾಣಗಳಿರುವದರಿಂದಲೇ ವೈದಿಕಧರ್ಮದ ಸನಾತನತ್ವವು ಒಡೆದು ಕಾಣುತ್ತದೆಂಬದರಲ್ಲಿ ಸಂಶಯವಿಲ್ಲ. ತ್ರಿವಿಧ ಜನರು ಇರುವವರೆಗೆ, ಅಥವಾ "ಭಿನ್ನರುಚಿರ್ಹಿಲೋಕಃ" ಎಂಬ ಮಾತು ಸತ್ಯವಾಗಿರುವವರೆಗೆ ಜ್ಞಾನಾಮೃತದ ಭೋಜನಕ್ಕಾಗಿ ಹಲವು ಪುರಾಣರೂಪಭಕ್ಷ್ಯ ಭೋಜ್ಯಗಳು ಭೋಕ್ತಾರರ ಸವಿಯೂಟಕ್ಕಾಗಿ ಸಿದ್ಧವಾಗಿರಲೇಬೇಕು! ಆದರೆ ಉಣ್ಣುವವರು ತಮಗೆ ಸೇರುವ ಪದಾರ್ಥಗಳನ್ನು ಉಂಡು ತೃಪ್ತಿಯನ್ನು ಪಡೆಯದೆ, ಅಜೀರ್ಣದೋಷವುಳ್ಳವರಂತೆ ಊಟದ ಪದಾರ್ಥಗಳನ್ನೆಲ್ಲ ಹಳಿಯುತ್ತ ಪರಸ್ಪರ ಕಲಹವನ್ನು ಮಾತ್ರ ಬೆಳಿಸಬಾರದು. ಹಾಗೆ ಕಲಹ ಬೆಳಸುವವರಿಗೆ ಜ್ಞಾನಾಮೃತಭೋಜನವನ್ನು ಮಾಡಲಿಕ್ಕೆ ಹಸಿವೆಯೇ ಆಗಿಲ್ಲೆಂದು ತಿಳಿಯಬೇಕಾಗುವದು. ಹಸಿದವರಿಗೆ ಊಟದ ಪದಾರ್ಥಗಳು ಉಪಯುಕ್ತವಾಗಿರುವಂತೆ, ಈಶ್ವರ ಜ್ಞಾನಲಾಲಸರಿಗೆ ಮಾತ್ರ ಪುರಾಣಗಳು ಉಪಯುಕ್ತವಾಗಿರುವವು. ಅಂಥವರು ಸತ್ಸಮಾಗಮದಿಂದ ಪುರಾಣರಹಸ್ಯವನ್ನರಿತು ಧನ್ಯರಾಗತಕ್ಕದ್ದು.

ಪ್ರಿಯವಾಚಕರೇ, ಎಲ್ಲ ಪುರಾಣಗಳ ರಹಸ್ಯದ ದಿಗ್ದರ್ಶನಮಾಡುವದು ಪ್ರಕೃತ ವಿಷಯವಾಗಿರದೆ, ಶ್ರೀ ವೇಂಕಟೇಶಮಾಹಾತ್ಮ್ಯದ ರಹಸ್ಯವನ್ನಷ್ಟು ಯಥಾಮತಿ ಬರೆಯುವದು ಅವಶ್ಯವಾಗಿರುತ್ತದೆ. ವೇಂಕಟೇಶಮಾಹಾತ್ಮ್ಯವನ್ನು ಓದುತ್ತ ಹೋದಂತೆ, ಶ್ರೀ ಲಕ್ಷ್ಮೀಪತಿಯ ಚರಿತ್ರದಲ್ಲಿ ನನಗೆ ಅತ್ಯಂತ ಶ್ರದ್ಧೆಯು ಉತ್ಪನ್ನವಾಯಿತು. ಆ ಶ್ರದ್ಧೆಯೇ ಈ ರಹಸ್ಯ ಬರೆಯಲಿಕ್ಕೆ ನನ್ನಲ್ಲಿ ಸ್ಫೂರ್ತಿಯನ್ನುಂಟು ಮಾಡಿತೆಂದು ಹೇಳಬಹುದು! ಆದರೆ ಶ್ರೀ ಲಕ್ಷ್ಮೀಪತಿಯ ಚರಿತ್ರದ ರಹಸ್ಯವನ್ನು ಶ್ರೀ ಲಕ್ಷ್ಮೀಪತಿಯೇ ಬಲ್ಲನಲ್ಲದೆ, ಅದನ್ನು ಅನ್ಯರು ತಿಳಿಯುವರೆಂದು ಹೇಳುವದು ದುರಭಿಮಾನದ ಮಾತಾಗಿರುವದು; ಆದರೂ ಒಬ್ಬ

ದುರಭಿಮಾನಿಯು ಮಾಡುವ ಶ್ರೀ ಲಕ್ಷ್ಮೀಪತಿಯ ಇದೊಂದು ಬಗೆಯ ಸ್ತೋತ್ರ ವೆಂದು ತಿಳಿದು, ಹೇಳವನು ಆಕಾಶಕ್ಕೆ ಹಾರುವಂತೆ, ಆ ಶ್ರೀನಿವಾಸನ ಮಹಾತ್ಮ್ಯದ ರಹಸ್ಯವನ್ನು ಬರೆಯಲು ಶ್ರೀ ಗುರುಸ್ಮರಣದಿಂದ ಯಥಾಮತಿ ನಾನು ಯತ್ನಿಸಿರುವೆನು. ಈ ರಹಸ್ಯವು ಸಾಂಗೋಪಾಂಗವಾಗಿ ವಿವರಿಸಲ್ಪಟ್ಟಿದ್ದೆಂದು ತಿಳಿಯಬಾರದು; ಲೇಖಕನ ಮನಸ್ಸಿನಲ್ಲಿ ಬಂದ ವಿಚಾರಗಳೆಲ್ಲ ಈ ರಹಸ್ಯದಲ್ಲಿ ಉಲ್ಲೇಖಿಸಲ್ಪಟ್ಟಿರುತ್ತವೆಂತಲೂ ಭಾವಿಸಲಾಗದು. ಬರೆಯುವ ಕಾಲಕ್ಕೆ ಶ್ರೀ ಗುರುವು ಪ್ರೇರೇಪಿಸಿದ ಒಂದೆರಡು ಮಾತುಗಳನ್ನು ಮಾತ್ರ, ಬರೆಯಲಿಕ್ಕೆ ಬಂದ ಹಾಗೆ ಇದರಲ್ಲಿ ಸಂಕ್ಷೇಪದಿಂದ ಬರೆದಿರುತ್ತದೆ. ಆ ಮಾತುಗಳಲ್ಲಿ ಮುಖ್ಯವಾದವುಗಳು ಯಾವವೆಂದರೆ – ಶ್ರೀ ವೇಂಕಟೇಶಮಾಹಾತ್ಮ್ಯದಲ್ಲಿ ವರ್ಣಿಸಲ್ಪಟ್ಟಿದ್ದ ವಿಷಯದಲ್ಲಿಯು–(೧) ಅಸಂಗತ ಸಂಗತಿಗಳ ವಿಚಾರ, (೨) ಐಹಿಕ ಸುಖಸಾಧನದ ಸುಂದರಮಾರ್ಗ. (೩) ಪಾರಮಾರ್ಥಿಕ ಪ್ರಯೋಜನದ ದಿಗ್ದರ್ಶನ. (೪) ಈ ಪುರಾಣವು ವ್ಯಾಸನಿರ್ಮಿತವಾದದ್ದೋ ? (೫) ದೇವರ ಸರ್ವೋತ್ತಮತ್ವದ ದೃಷ್ಟಿಯಿಂದ ಹುಟ್ಟಬಹುದಾದ ವೈಷಮ್ಯಾದಿ ದೋಷಗಳು. (೬) ಉಪಸಂಹಾರ ಎಂಬ ಈ ಆರು ಮಾತುಗಳ ಸಂಬಂಧದಿಂದ ಅವಕಾಶವಿದ್ದ ಮಟ್ಟಿಗೆ ಮುಂದೆ ಕ್ರಮವಾಗಿ ವಿವರಿಸಿರುತ್ತದೆ.

೧ **ಅಸಂಗತ ಸಂಗತಿಗಳ ವಿಚಾರ**–ಈ ಪುರಾಣದೊಳಗಿನ ಅಸಂಗತ ಸಂಗತಿಗಳಿಂದ ಭಾವಿಕರಲ್ಲದವರ ಪುರಾಣದ ಮೇಲಿನ ವಿಶ್ವಾಸವು ಹಾರುವ ಸಂಭವವಿರುತ್ತದೆಂದು ಕೆಲವರು ಹೇಳಬಹುದು; ಆದರೆ ಇಂಥ ಅವಿಶ್ವಾಸಿಗಳು ಪುರಾಣಶ್ರವಣಪಠನಗಳಿಗೆ ಅನಧಿಕಾರಿಗಳೆಂದು ದುಃಖದಿಂದ ಹೇಳಬೇಕಾಗುವದು. ಶೇಷನಿಂದ ಸುತ್ತಲ್ಪಟ್ಟಿದ್ದ ಆನಂದಾದ್ರಿಯನ್ನು ವಾಯುವು ಕಿತ್ತು ಒಗೆಯಲು, ಅದು ೨೧೦೦೦ ಯೋಜನದ ಮೇಲೆ ಹಾರಿ ಬಿದ್ದಿತೆಂಬದೂ ಭಗವಂತನು ಸಹಸ್ರಾವಧಿವರ್ಷ ಹುತ್ತದಲ್ಲಿ ಗುಪ್ತರೀತಿಯಿಂದ ವಾಸಿಸಿದನೆಂಬದೂ, ಬ್ರಹ್ಮನು ಧೇನು ರೂಪವನ್ನು–ರುದ್ರನು ಕರುವಿನ ರೂಪವನ್ನು ತಾಳಿದರೆಂಬದೂ, ಶ್ರೀನಿವಾಸನು ಮುಪ್ಪಿನ ಕೊರವಂಜಿಯಾದನೆಂಬದೂ, ವಸುದಾನನು ಚಂದ್ರ ಲೋಕಕ್ಕೆ ಹೋದನೆಂಬದೂ, ಬ್ರಹ್ಮಾದಿದೇವತೆಗಳು ಶ್ರೀನಿವಾಸನ ವಿವಾಹಕ್ಕೋಸ್ಕರ ಪ್ರತ್ಯಕ್ಷ ಭೂಲೋಕಕ್ಕೆ ಬಂದರೆಂಬದೂ, ಸ್ವಾಮಿಪುಷ್ಕರಣಿಯೇ ಮೊದಲಾದ ತೀರ್ಥಗಳಲ್ಲಿ ಅಗ್ನಿಯು ಅನ್ನ ಮೊದಲಾದ ಪದಾರ್ಥಗಳನ್ನು ಮಾಡಿದ

ನೆಂಬದೂ, ಶ್ರೀನಿವಾಸನು ಹೂತ್ಕಾರದಿಂದ ಶುಕಾಶ್ರಮದಲ್ಲಿ ಎಲ್ಲ ಬ್ರಾಹ್ಮಣರನ್ನು ತೃಪ್ತಿಗೊಳಿಸಿದನೆಂಬದೂ, ಕೂರ್ಮನ ಹೆಂಡಿರುಮಕ್ಕಳ ಅಸ್ಥಿಗಳನ್ನು ಒಟ್ಟು ಗೂಡಿಸಿ ತೀರ್ಥಪ್ರೋಕ್ಷಣದಿಂದ ವೇಂಕಟೇಶನು ಅವರನ್ನು ಎಬ್ಬಿಸಿದನೆಂಬದೂ ನಮಗೆ ಅಸಂಭವವಾಗಿ ತೋರುವದು ನಿಜವು; ಆದರೆ ಮಹಾಜ್ಞಾನಿಗಳೂ, ಜಗತ್ಕಲ್ಯಾಣೇಚ್ಛುಗಳೂ ಆದ ವ್ಯಾಸರಂಥ ಮಹಾತ್ಮರು, ಜನರ ಸಂಶಯಕ್ಕೆ ಕಾರಣವಾದ ಇಂಥ ವಿಷಯಗಳನ್ನು ಪುರಾಣಗಳಲ್ಲಿ ಯಾಕೆ ಸೇರಿಸಿದರೆಂಬದು ವಿಚಾರಮಾಡತಕ್ಕ ಮಾತಾಗಿದೆ. ನಮಗಿಂತ ವ್ಯಾಸರು ಅಜ್ಞಾನಿಗಳೆಂದು ಹೇಳ ಬಹುದೋ? ಅಂದಬಳಿಕ ನಮ್ಮ ಮನಸ್ಸಿಗೆ ಸಹ ತ್ಯಾಜ್ಯವೆಂದು ತೋರುವ ವಿಷಯಗಳನ್ನು ಮೂಢರಂತೆ ಪುರಾಣಗಳಲ್ಲಿ ಅವರು ಯಾಕೆ ಸೇರಿಸಿರಬಹುದು?

ಪುರಾಣಗಳಲ್ಲಿ ವಿಚಾರಕ್ಕೆ ಸಮ್ಮತವಾದ ಸಂಗತಿಗಳು ಇರುತ್ತಿದ್ದರೂ, ಅವು ಭಕ್ತಿಯ ಕವಚದಿಂದ ಆಚ್ಛಾದಿತವಾಗಿರುವದರಿಂದ, ಭಕ್ತಿಯುಳ್ಳವರೇ ಅವು ಗಳ ರಹಸ್ಯವನ್ನು ಅರಿಯಬಹುದು. ವಿಚಾರಗ್ರಾಹ್ಯವಾದ ಐಹಿಕ ವಿಷಯಜ್ಞಾ ನಕ್ಕಿಂತ, ವಿಚಾರಾತೀತವಾದ ಪಾರಮಾರ್ಥಿಕ ವಿಷಯಜ್ಞಾನವೇ ಶ್ರೇಷ್ಠವೆಂದು ಹೇಳುವದರಕಡೆಗೆ ಪುರಾಣಗಳ ಒಲವು ವಿಶೇಷವಾಗಿರುತ್ತದೆ. ಅಂದಬಳಿಕ ವಿಚಾರಾತೀತವಾದ ಪಾರಮಾರ್ಥಿಕ ವಿಷಯಜ್ಞಾನವನ್ನು ಸತ್ಪುರುಷರ ಬೋಧ ದಿಂದಲೂ, ಅವರ ಕೃಪೆಯಿಂದಲೂ ಪಡೆಯ ಬೇಕಾಗುವದರಿಂದ, ಪುರಾಣ ಶ್ರವಣ ಮಾಡುವವರಲ್ಲಿ ದೃಢವಾದ ಭಕ್ತಿಯು ಬೇಕಾಗುತ್ತದೆ. ಪುರಾಣದೊಳ ಗಿನ ಹಲವು ಸಂಗತಿಗಳು ಅಶಕ್ಯವಾಗಿ ತೋರಿದರೂ, ಆ ಅಶಕ್ಯತೆಯನ್ನು ಶಕ್ಯ ವೆಂದು ಭಾವಿಸುವಷ್ಟು ದೃಢಭಕ್ತಿಯುಳ್ಳವರೂ, ಅಥವಾ ಅಶಕ್ಯತೆಯ ರಹಸ್ಯ ವನ್ನು ತಿಳಕೊಂಡು ಆನಂದಪಡುವಷ್ಟು ಯೋಗ್ಯತೆಯುಳ್ಳವರೂ ಮಾತ್ರ ಪುರಾ ಣಗಳನ್ನು ಓದಲಿಕ್ಕೆ ಅಧಿಕಾರಿಗಳಾಗುವರು. ಒಟ್ಟಿಗೆ, ಪುರಾಣ ಕೇಳುವವರಲ್ಲಿ ಪುರಾಣಗಳ ವಿಷಯವಾಗಿ ದೃಢಶ್ರದ್ಧೆಯು ಬೇಕು. ಆ ಶ್ರದ್ಧೆಯು ಅಂಧವಾ ದದ್ದು, ಮೂಢವಾದದ್ದು ಇದ್ದರೂ ಬಾಧಕವಿಲ್ಲ; ಆದರೆ ಅವಿಶ್ವಾಸವು ಮಾತ್ರ ಪುರಾಣ ಶ್ರವಣಕ್ಕೆ ಕೇವಲ ನಿಷೇಧವಾಗಿರುವದು. ವಿಶ್ವವನ್ನು ರಚಿಸಲು ಸಮ ರ್ಥನಾದ ಭಗವಂತನು, ಕೃಷ್ಣಾವತಾರದಲ್ಲಿ ಗೋವರ್ಧನ ಪರ್ವತವನ್ನೆತ್ತಿದನೆಂದು ಹೇಳುವದರಲ್ಲಿ ಅಶಕ್ಯತೆಯೂ, ಮೋಸವೂ ಏನಿರುವದು? ದೇವರು ಒಂದು ಗುಡ್ಡ ವನ್ನು ಎತ್ತಲಿಕ್ಕೆ ಅಸಮರ್ಥನೆಂದು ಶಂಕಿಸುವ ನಾವು, ದೇವರು ಸೃಷ್ಟಿ–ಸ್ಥಿತಿ–

ಲಯುಗಳ ಕರ್ತೃವೆಂದು ನಂಬುವ ಮಾತು ಕೇವಲ ಔಪಚಾರಿಕವಲ್ಲವೇ ? ಅಂಥ ಅವಿಶ್ವಾಸದ ನಂಬಿಗೆಗೆ ಮಹತ್ವವಾದರೂ ಏನಿರುವದು ? ಕವಿಕುಲಗುರುವಾದ ಕಾಲಿದಾಸನು ನವರಸಪೂರ್ಣವಾದ ಮಹಾ-ಮಹಾ ಕಾವ್ಯಗಳನ್ನು ರಚಿಸಲು ಸಮರ್ಥನೆಂದು ನಂಬಿರುವವರು, "ಕಾಲಿದಾಸನು ವಸಂತ ಋತುವನ್ನು ಬಹಳ ಚನ್ನಾಗಿ ವರ್ಣಿಸಿರುವನು" ಎಂದು ಯಾರಾದರೂ ಹೇಳಿದರೆ ಅವಿಶ್ವಾಸಪಡಬ ಹುದೋ ? ಅದರಂತೆ ದಾನಶೂರನಾದ ಕರ್ಣನು ಒಬ್ಬ ಸಚ್ಛೀಲ ಬ್ರಾಹ್ಮಣನ ಮಗನ ಉಪನಯುನಕ್ಕೆ ಸಹಾಯು ಮಾಡಿದನೆಂಬ ಮಾತೂ, ಅಜಾತ ಶತ್ರುವಾದ ಧರ್ಮರಾಜನು ಒಂದು ಕೂಸಿನ ದ್ರೋಹವನ್ನು ಕ್ಷಮಿಸಿದನೆಂಬ ಮಾತೂ ಅವಿಶ್ವಾ ಸಕ್ಕೆ ಕಾರಣವಾಗಬಹುದೋ ? ಹಾಗೆ ಅವಿಶ್ವಾಸಕ್ಕೆ ಕಾರಣವಾದರೆ, ಕಾಲಿದಾಸ ಕರ್ಣ-ಧರ್ಮರಾಜ ಇವರ ಅಲೌಕಿಕ ಯೋಗ್ಯತೆಯ ವಿಷಯುದ ನಮ್ಮ ನಂಬಿಗೆ ಯಲ್ಲಿ ಅರ್ಥವೇನು ಇದ್ದಂತಾಗುವದು ? ಅದರಂತೆ, ಇಚ್ಛಾ ಮಾತ್ರದಿಂದ ವಿಶ್ವ ವನ್ನು ರಚಿಸುವ ದೇವರ ಅವತಾರಗಳ, ಹಾಗು ದೇವರ ಕೃಪೆಗೆ ಪಾತ್ರರಾದ ಭಕ್ತರ ಸಣ್ಣ-ಪುಟ್ಟ ಅಲೌಕಿಕ ಕೃತಿಗಳನ್ನು ನಂಬಲಾರದವರಲ್ಲಿ, ನಿಜವಾದ ಆಸ್ತಿಕತ್ವವು ಇರುತ್ತದೆಂದು ಹೇಗೆ ತಿಳಿಯಬೇಕು ? ಪುರಾಣಗಳು ಕೇವಲ ಆಸ್ತಿ ಕರ ಸಲುವಾಗಿಯೇ ಇರುವದರಿಂದ, ಪುರಾಣ ರಚಿಸಿದ ಮಹಾತ್ಮರು, ಮನು ಷ್ಯನ ಆಸ್ತಿಕತ್ವವನ್ನು ಪರೀಕ್ಷಿಸುವದಕ್ಕಾಗಿ ದೇವರ, ಹಾಗು ಆತನ ಭಕ್ತರ ವಿಷಯುದ ಅಲೌಕಿಕ ಕೃತಿಗಳನ್ನು ಅಲ್ಲಲ್ಲಿ ವರ್ಣಿಸಿರುವರು.

ನಿಜವಾದ ಆಸ್ತಿಕರು ಈಶ್ವರನ ಅಗಾಧ ಕೃತಿಗಳನ್ನು ತಟ್ಟನೆ ಹೇಗೆ ನಂಬುತ್ತಾರೆಂಬ ಬಗ್ಗೆ ಒಂದು ಸಣ್ಣ ಉದಾಹರಣವನ್ನು ಇಲ್ಲಿ ಕೊಡಬಹುದು. ಒಮ್ಮೆ ನಾರದರು, ಕೃಷ್ಣನ ಮೇಲಿದ್ದ ದುರ್ಯೋಧನನ ವಿಶ್ವಾಸವನ್ನು ಪರೀಕ್ಷಿ ಸುವದಕ್ಕಾಗಿ ಆತನ ಸಭೆಗೆ ಹೋಗಿ ಆತನಿಂದ ಸನ್ಮಾನಿತರಾಗಿ ಕುಳಿತುಕೊಂಡು, ಆ ಕೌರವನನ್ನು ಕುರಿತು— " ದುರ್ಯೋಧನಾ, ನಾವು ತ್ರಿಲೋಕವನ್ನು ಸಂಚರಿಸುತ್ತ ದ್ವಾರಕಾಪಟ್ಟಣಕ್ಕೆ ಹೋಗಿದ್ದೆವು; ಅಲ್ಲಿ ಕೃಷ್ಣನ ಹಲವು ಸೋಜಿಗದ ಕೃತಿಗಳನ್ನು ನೋಡಿದೆವು. ಅವುಗಳಲ್ಲಿ ಒಂದನ್ನು ನಿನ್ನ ಮುಂದೆ ಹೇಳುತ್ತೇವೆ, ವಿಶ್ವಾಸಪೂರ್ವಕವಾಗಿ ಕೇಳು— " ಒಂದು ಸೂಜಿಯು ರಂಧ್ರ ದೊಳಗಿಂದ ಆನೆ-ಕುದುರೆ-ರಥ-ಕಾಲಾಳು ಇವುಗಳಿಂದ ಕೂಡಿದ ಮಹಾ

ಸೈನ್ಯವು ಹೋದದ್ದನ್ನು ಕಣ್ಣುಮುಟ್ಟ ನೋಡಿದೆವು, ಏನಾಶ್ಚರ್ಯವಿದು" ಎಂದು ನುಡಿಯಲು, ಅದಕ್ಕೆ ದುರ್ಯೋಧನನು ನಕ್ಕು—"ಮುನಿಗಳೇ, ಸುಳ್ಳುಹೇಳುವ ವಿಷಯದಲ್ಲಿ ನೀವು ಮಹಾ ಗಟ್ಟಿಗರೆಂದು ಪ್ರಸಿದ್ಧವದೆ. ಸೂಜಿಯ ರಂಧ್ರದೊಳಗಿಂದ ಎಲ್ಲಿಯಾದರೂ ಚತುರಂಗ ಸೈನ್ಯವು ಹೋಗುವದುಂಟೆ ? ಇಂಥ ಸುಳ್ಳು ಮಾತನ್ನು ನಾನು ಹೇಗೆ ನಂಬುವೆನು, ಈ ಸಭೆಯೊಳಗಿನ ಜನರಾದರೂ ಹೇಗೆ ನಂಬುವರು ?" ಎಂದು ಕೇಳಲು, ನಾರದರು—"ಬಿಡು, ಬಿಡು ! ಸಾರ್ವಭೌಮನೇ, ನನ್ನ ಮಾತಿಗೆ ಅಷ್ಟೊಂದು ಮಹತ್ವ ಕೊಡಬೇಡ; ಸುಮ್ಮನೆ ನಿನ್ನ ಮನಸ್ಸನ್ನು ಪರೀಕ್ಷಿಸಬೇಕೆಂದು ಹೇಳಿದೆನು," ಎಂದು ನುಡಿದು, ಆತನ ಅನುಜ್ಞೆಯಿಂದ ಧರ್ಮರಾಜನ ಸಭೆಗೆ ಬಂದರು. ಆಗ ಧರ್ಮರಾಜನು ಆ ಸುರಮುನಿಯನ್ನು ಸತ್ಕರಿಸಿ ವಿನಯದಿಂದ—"ಮಹಾತ್ಮರೇ, ತಾವು ತ್ರಿಲೋಕಗಳನ್ನು ಸಂಚರಿಸುವ ಮುನಿಗಳಾದುದರಿಂದ, ಏನಾದರೂ ಭಗವಲ್ಲೀಲೆಗಳನ್ನು ನೋಡಿದ್ದರೆ ಹೇಳುವ ಕೃಪೆಮಾಡಬೇಕು," ಎಂದು ಬೇಡಿಕೊಳ್ಳಲು, ನಾರದರು ಆತನ ಮುಂದೆ ತಮ್ಮ ಸೂಜಿಯ ರಂಧ್ರದ ಕಥೆಯನ್ನು ಮತ್ತಿಷ್ಟು ಉಪ್ಪುಕಾರಹಚ್ಚಿ ಪರಮಾಶ್ಚರ್ಯಪಟ್ಟವರಂತೆ ಹೇಳಿದರು. ಅದನ್ನು ಕೇಳಿ ಧರ್ಮರಾಜನು ಸಂತೋಷಪಟ್ಟು ನಕ್ಕು ವಿನಯದಿಂದ— "ಸ್ವಾಮಿ ಸುರಮುನಿಗಳೇ, ಇದೇನು ಆಶ್ಚರ್ಯವೆಂದು ಹೇಳಿದಿರಿ ? ಭಗವದಿಚ್ಛೆಯಿಂದ ವಿಶ್ವಕ್ಕೆ ಸೂಜಿಯ ರಂಧ್ರದೊಳಗಿಂದ ಹಾದು ಹೋಗಬಹುದಾಗಿರಲು, ಕ್ಷುದ್ರವಾದ ಚತುರಂಗಬಲವು ಅದರಲ್ಲಿ ಹಾದುಹೋದದ್ದೇನಾಶ್ಚರ್ಯವು ?" ಎಂದು ನುಡಿದನು. ಅದನ್ನು ಕೇಳಿದ ಕೂಡಲೆ ನಾರದರು ಎದ್ದು ಧರ್ಮರಾಜನನ್ನು ಅಪ್ಪಿಕೊಂಡು— "ಅಜಾತಶತ್ರುವೇ, ನೀನು ಪರಮ ಧನ್ಯನು ಕಂಡೆಯಾ ! ನಿನ್ನ ದೃಢವಿಶ್ವಾಸದಿಂದಲೇ ಭಗವಂತನು "ಮಮಪ್ರಾಣಾಹಿ ಪಾಂಡವಾಃ" ಎಂದು ಹೇಳುತ್ತಿರುವನು. ದುರ್ಯೋಧನನಲ್ಲಿ ಅವಕೃಪೆಯನ್ನೂ, ನಿನ್ನಲ್ಲಿ ಕೃಪೆಯನ್ನೂ ಮಾಡಲಿಕ್ಕೆ ಭಗವಂತನಿಗೆ ಏನು ಕಾರಣವಿರಬಹುದೆಂಬದನ್ನು ಪರೀಕ್ಷಿಸುವದಕ್ಕಾಗಿಯೇ, ಈ ಮಾತುಗಳನ್ನು ನಿಮ್ಮಿಬ್ಬರ ಮುಂದೆ ಹೇಳಿ ನೋಡಿದೆನು. "ಯೇ ಯಥಾಮಾಂ ಪ್ರಪದ್ಯಂತೆ ತಾಂ ಸ್ತಥೈವ ಭಜಾಮ್ಯಹಂ" ಎಂಬ ತನ್ನ ಉಕ್ತಿಯಂತೆ ಭಗವಂತನು, ದುರಭಿಮಾನಿಯೂ ಅವಿಶ್ವಾಸಿಯೂ ಆದ ದುರ್ಯೋಧನನ ಮೇಲೆ ಅವಕೃಪೆಯನ್ನೂ, ಅನನ್ಯಗತಿಕನಾಗಿ ತನ್ನನ್ನು

ನಂಬಿದ ನಿನ್ನ ಮೇಲೆ ಕೃಪೆಯನ್ನೂ ಮಾಡುವದರ ಗುಟ್ಟು ನನಗೆ ಗೊತ್ತಾಯಿತು, " ಎಂದು ಹೇಳಿ ಮುನಿಗಳು ಲೋಕಾಂತರಕ್ಕೆ ತೆರಳಿದರು.

ಈ ಕಥೆಯ ರಹಸ್ಯದ ವಿಚಾರವನ್ನು ಆಸ್ತಿಕರೂ, ನಾಸ್ತಿಕರೂ ಕೂಡಿಯೇ ಮಾಡತಕ್ಕದ್ದು. ಪುರಾಣದೊಳಗಿನ ಅಲೌಕಿಕ ಕೃತಿಗಳು ಪ್ರತ್ಯಕ್ಷ ಆಗಿರಲಿ–ಆಗದಿರಲಿ, ನಾವು ಆ ಕ್ಷುದ್ರ ಕೃತಿಗಳಿಗೆ ಮಹತ್ವಕೊಡದೆ ಈಶ್ವರನ ಅಗಾಧ ಸಾಮರ್ಥ್ಯದ ಕಡೆಗೆ ಲಕ್ಷಕೊಡಬೇಕು. ದೇವರು ಭಕ್ತಿಗೆ ಒಲಿಯುತಕ್ಕವನಾದ್ದರಿಂದ, ಕೇವಲ ಭಕ್ತಿಯ ಅಭಿವೃದ್ಧಿಗಾಗಿಯೇ ಪುರಾಣಗಳ ರಚನೆಯಿರುತ್ತದೆ. ಆ ಭಕ್ತಿಯ ಪರೀಕ್ಷೆಗಾಗಿಯೇ ಪುರಾಣಗಳಲ್ಲಿ ಅಮಾನುಷ ಕೃತಿಗಳೆಂಬ ಒರೆಗಲ್ಲುಗಳು ಅಲ್ಲಲ್ಲಿ ಇರಿಸಲ್ಪಟ್ಟಿರುತ್ತವೆ. ಧರ್ಮರಾಜನಂತೆ ಆಸ್ತಿಕರಾದವರು ಅವನ್ನು ಕೇಳಿ ರೋಮಾಂಚಿತರಾಗಿ ಆನಂದದಿಂದ ತಲೆದೂಗದೆಯಿರರು! ಅವರೇ ಪುರಾಣದ ರಹಸ್ಯಾನಂದದ ಸಂಪೂರ್ಣ ಭೋಕ್ತಾರರು, ಅವರೇ ಅನನ್ಯಭಕ್ತಿಯಿಂದ ಈಶ್ವರಸ್ವರೂಪವನ್ನು ತಿಳಿಯಲು ಸಮರ್ಥರು! ಪ್ರಿಯವಾಚಕರೇ, ಮನುಷ್ಯನ ಕ್ಷುದ್ರವೃತ್ತಿಯನ್ನು ಎಷ್ಟೆಂತ ವರ್ಣಿಸಬೇಕು? ಈಶ್ವರನು ಸರ್ವತ್ರದಲ್ಲಿರುವನೆಂದು ಹೇಳುವ ತಾವು, ಭಗವಂತನು ಹುತ್ತಿನಲ್ಲಿದ್ದನೆಂಬ ಮಾತನ್ನು ನಂಬಲಿಕ್ಕೆ ಹಿಂದೆ–ಮುಂದೆ ನೋಡುತ್ತೇವೆ. “ ಅಣೋರಣೀಯಾನ್ ಮಹತೋಮಹೀಯಾನ್ ” “ ಸ್ವಭೂಮಿಜ್ಞ್ನ ಸರ್ವತಃಸ್ಪೃತ್ವಾತ್ಯತಿಷ್ಠದ್ದಶಾಂಗುಲಂ” ಎಂಬ ವೇದವಾಕ್ಯಗಳನ್ನು, ಅಂದರೆ “ ದೇವರು ಸಣ್ಣದರಲ್ಲಿ ತೀರಸಣ್ಣವನು, ದೊಡ್ಡದರಲ್ಲಿ ತೀರ ದೊಡ್ಡವನು, ” “ ದೇವರು ವಿಶ್ವವನ್ನು ತುಂಬಿ ಇನ್ನೂ ಹತ್ತು ಬೆರಳು, ಅಂದರೆ ಅಮರ್ಯಾದಿತನಾಗಿ ಉಳಿದಿರುವನು, ” ಎಂಬ ಉದಾತ್ತವಿಚಾರದ ವಾಕ್ಯಗಳನ್ನು ಬಾಯಿಂದ ನುಡಿಯುವೆವು; ಆದರೆ ದೇವರು ಹುತ್ತದಲ್ಲಿ ಹೇಗೆ ಕುಳಿತುಕೊಳ್ಳುತ್ತಿದ್ದನು, ಹೇಗೆ ಏಳುತ್ತಿದ್ದನು, ಹೇಗೆ ಮಲಗುತ್ತಿದ್ದನು? ಬ್ರಹ್ಮಾದಿ ದೇವತೆಗಳು ಭೂಲೋಕಕ್ಕೆ ಹೇಗೆ ಬಂದರು, ಎಂಬ ಶಂಕೆಗಳಿಂದ ನಮ್ಮ ಮನಸ್ಸು ಚಂಚಲವಾಗದೆ ಯಿರುವದಿಲ್ಲ!! ಅದರಂತೆ, ಎಂಬತ್ತುನಾಲ್ಕುಲಕ್ಷ ಜೀವರಾಶಿಗಳನ್ನು ನಿರ್ಮಿಸಲು ಸಮರ್ಥನಾದ ದೇವರು, ಸ್ವತಃ ಕೊರವಂಜಿಯ ವೇಷವನ್ನು ಧರಿಸಿದನೆಂಬ ಮಾತನ್ನು ಬ್ರಹ್ಮರುದ್ರರೂಪಿಯಾದ ಅದೇ ಭಗವಂತನು, ಕ್ರಮವಾಗಿ ಆಕಳುಕರುಗಳಾದನೆಂಬ ಮಾತನ್ನು ಅವಿ

ಶ್ವಾಸಿಸುವೆವು! ಯೋಗಸಾಮರ್ಥ್ಯವನ್ನು ಕೇಳಿಯಾದರೂ ಗೊತ್ತಿದ್ದವರು, ವಸುದಾನನು ಲೋಕಾಂತರಕ್ಕೆ ಹೋದನೆಂಬದನ್ನು ಶಂಕಿಸಬಹುದೊ? ಸರ್ವರ ಹೃದಯದಲ್ಲಿ ವಾಸಿಸುವ ವಿಶ್ವಭೋಕ್ತೃವಾದ ಪರಮಾತ್ಮನು, ಶುಕರ ಆಶ್ರಮದಲ್ಲಿ ಉಂಡು ತೃಪ್ತನಾಗಿ ಇಚ್ಛಾಮಾತ್ರದಿಂದ ಘೂತ್ಕಾರವನ್ನುಂಟುಮಾಡಿ, ತೇಗಿ ತನ್ನ ಪರಿವಾರವನ್ನೇ ತೃಪ್ತಿಗೊಳಿಸಿದ್ದನ್ನು ಅಶಕ್ಯವೆಂದು ಅವಿಶ್ವಾಸಪಡಬಹುದೋ? ಇಚ್ಛಾಮಾತ್ರದಿಂದ ಸೃಷ್ಟಿಯನ್ನೇ ಕ್ಷಣಮಾತ್ರದಲ್ಲಿ ರಚಿಸಲು ಸಮರ್ಥನಾದ ದೇವರು, ಕೂರ್ಮಬ್ರಾಹ್ಮಣನ ಹೆಂಡಿರು–ಮಕ್ಕಳ ಅಸ್ಥಿಗಳನ್ನು ಪಾಂಡುತೀರ್ಥದ ಜಲದಿಂದ ಪ್ರೋಕ್ಷಿಸಿ ಸಜೀವಗೊಳಿಸಿದ್ದು ಅಶಕ್ಯವಾಗಬಹುದೋ? ಸರ್ವಭಕ್ಷಕನಾದ ಅಗ್ನಿಯು ಸಂಪೂರ್ಣ ರಸಜ್ಞನಾಗಿರಲು, ತನ್ನ ಅಗಾಧ ಸಾಮರ್ಥ್ಯದಿಂದ ತೀರ್ಥಗಳಲ್ಲಿ ಪಾಕಮಾಡಬೇಕೆಂದು ಇಚ್ಛಿಸಿದರೆ, ಅಶಕ್ಯವಾಗಬಹುದೋ? ಒಟ್ಟಿಗೆ, ಭಗವಂತನ, ಹಾಗು ಭಗವದ್ಭಕ್ತರ ವಿಷಯವಾಗಿ ಪುರಾಣಗಳಲ್ಲಿ ವರ್ಣಿಸಿರುವ ಅಗಾಧ ಕೃತಿಗಳ ವಿಷಯದಲ್ಲಿ ಅವು ಆಗಿರಬಹುದೋ–ಆಗಿರಲಿಕ್ಕಿಲ್ಲವೋ ಎಂದು ಸಂಶಯ ಪಡುವದಕ್ಕಿಂತ, ಮೇಲೆ ಧರ್ಮರಾಜನು ನಾರದರಿಗೆ ಕೊಟ್ಟಿರುವ ಉತ್ತರದ ರಹಸ್ಯವನ್ನರಿತು, ಈಶ್ವರೇಚ್ಛೆಗೆ ಯಾವದೂ ಅಶಕ್ಯವಲ್ಲೆಂದು ನಂಬಿ, ದೃಢಭಕ್ತಿಯನ್ನು ತಾಳುವದು ನಿಃಸಂಶಯವಾಗಿ ಹಿತಕರವಾಗಿರುತ್ತದೆ. ಭಗವಂತನೂ, ಆತನ ಕೃಪೆಗೆ ಪಾತ್ರರಾದ ಭಗವದ್ಭಕ್ತರೂ ಬೇಕಾದದ್ದನ್ನು ಮಾಡಲು ಸಮರ್ಥರೆಂಬ ಸಿದ್ಧಾಂತದ ದೃಢೀಕರಣಕ್ಕಾಗಿಯೇ, ಬಹುತರ ಯಾವತ್ತು ಧರ್ಮಗಳ ಪುರಾಣಗ್ರಂಥಗಳಲ್ಲಿ ಅದ್ಭುತ ಕಾರ್ಯಗಳ ಉಲ್ಲೇಖವಿರುತ್ತದೆಂದು ಹೇಳಬಹುದು; ಮತ್ತು ಅಂಥ ಸಂಗತಿಗಳ ಅನುಭವವು ಈಗಲೂ ಭಾವಿಕರಿಗೆ ಆಗುವ ಸಂಭವವಿರುವದು.

ಬಾಹ್ಯವ್ಯವಹಾರಗಳಲ್ಲಿ ತೊಡಗಿ ಚಂಚಲವಾಗಿದ್ದ ಮನಸ್ಸನ್ನು ಈಶ್ವರ ವಿಷಯಕವಾದ ಶ್ರದ್ಧೆಯಿಂದ ಜಗ್ಗಿಕೊಂಡು ಈಶ್ವರನಲ್ಲಿ ದೃಢವಿಶ್ವಾಸವನ್ನುಂಟು ಮಾಡಿಕೊಳ್ಳುವದು ಪಾರಮಾರ್ಥಿಕದೃಷ್ಟಿಯಿಂದ ಬಹು ಹಿತಕರವಾಗಿರುತ್ತದೆ. ಬೆಂಕಿಯಲ್ಲಿ ಹಾರಿಕೊಳ್ಳೆಂದಕೂಡಲೆ ಹಾರಿಕೊಂಡು ಬಿಡುವವನೇ ದೃಢಶ್ರದ್ಧೆಯುಳ್ಳ ಭಕ್ತನು. ಆತನಲ್ಲಿ ಶಕ್ಯಾಶಕ್ಯದ, ಕರ್ತವ್ಯಾಕರ್ತವ್ಯದ, ಯೋಗ್ಯಾಯೋಗ್ಯದ ವಿಚಾರವಿರುವದಿಲ್ಲ. ತನ್ನ ಭಕ್ತಿಗೆ ಮೂಲಾಧಾರವಾಗಿರುವವರ ಆಜ್ಞೆಯನ್ನು ಪಾಲಿಸುವದು ಆತನ ಶ್ರೇಷ್ಠಧರ್ಮವಾಗಿರುವದು. ಹಲವು ಕಡೆಗೆ

ಮನಸ್ಸನ್ನು ಹರಿಯಗೊಡದಿರುವ ಈ ದೃಢಭಕ್ತಿಯೂ ಶಾಂತಿಯು ಶ್ರೇಷ್ಠ ಸಾಧನ ವಾಗಿರುವದು. ಸ್ವಂತದ ವಿಚಾರದಿಂದ ನಿಜವಾದ ಶಾಂತಿಯು ದೊರೆಯದು. ಕಾನು–ತನ್ನವಿಚಾರ–ತನ್ನ ಆಚಾರ–ತನ್ನ ಆಚಾರದಫಲ ಇವುಗಳಿಂದ ಶಾಶ್ವತ ವಾದ ಶಾಂತಿಯು ದೊರೆಯಲಾರದು; ಮತ್ತು ಅವುಗಳಿಂದ ಕರ್ತವ್ಯದ ಪರಿ ಸಮಾಪ್ತಿಯೂ ಆಗಲಾರದು; ಅಂದರೆ ಮನುಷ್ಯನು ತನ್ನಪ್ರಯತ್ನದಿಂದ ಸಂಪೂರ್ಣ ಜ್ಞಾನವನ್ನು ಪಡೆಯಲಾರನೆಂಬರ್ಥವು; ಯಾಕಂದರೆ ತನಗಿಂತ ತನ್ನ ವಿಚಾರದ ಯೋಗ್ಯತೆಯು ಕಡಿಮೆ; ಅದರಂತೆ ವಿಚಾರಕ್ಕಿಂತ ಆಚಾರದ ಯೋಗ್ಯತೆಯೂ, ಆಚಾರಕ್ಕಿಂತ ಆಚಾರಪ್ರಾಪ್ತಫಲದ ಯೋಗ್ಯತೆಯೂ ಕಡಿಮೆಕಡಿಮೆಯಾಗುತ್ತ ಹೋಗುವವು. ಅಂದಬಳಿಕ ನಾವು ಸಂಪಾದಿಸಿದ ಫಲವು ನಮ್ಮಿಂದ ತೀರ ಕ್ಷುದ್ರ ವಾಗಿರಲು, ಅದರಿಂದ ನಾವು ಶಾಶ್ವತಶಾಂತಿಯನ್ನು ಪಡೆಯುವ ಬಗೆಹೇಗೆ? ಹಿಂದಕ್ಕೆ ಬ್ರಹ್ಮಋಷಿಯಾಗಲು ಯತ್ನಿಸಿದ ವಿಶ್ವಾಮಿತ್ರನ ನಿರಾಶೆಯನ್ನೂ, ಈಗ ದಿನದಿನಕ್ಕೆ ಸುಧಾರಿಸುತ್ತ ನಡೆದಿರುವೆವೆಂದು ತಿಳಿದಿರುವ ಪಾಶ್ಚಿಮಾತ್ಯರ ಅಸಂ ತುಷ್ಟತೆಯನ್ನೂ ಇದಕ್ಕೆ ಉದಾಹರಣವಾಗಿ ಕೊಡಬಹುದು. ವಿಶ್ವಾಮಿತ್ರನು ಹೊಸಸೃಷ್ಟಿಯನ್ನೇ ಮಾಡಿದರೂ ಶಾಂತನಾಗಲಿಲ್ಲ. ಆತನ ಶಾಂತಿಗೆ ವಶಿಷ್ಠರ ಅನುಗ್ರಹವೇ ಬೇಕಾಯಿತು. ಬಾಲಕರು ಗುರುಹಿರಿಯರ ಸಾಮರ್ಥ್ಯವನ್ನು ಅಂಧ ಶ್ರದ್ಧೆಯಿಂದ ನಂಬಿ ಅವರಿಗೆ ವಿಧೇಯರಾಗುವದು ಹಿತಕರ ವಾಗಿರಲು, ಸೃಷ್ಟಿ ಯೊಳಗಿನ ತೀರ ಕ್ಷುದ್ರಕಣವಾಗಿರುವ ಮನುಷ್ಯಪ್ರಾಣಿಯು, ಜಗತ್ಪಿತನೂ,— ಜಗದ್ಗುರುವೂ–ವಾಚಾಮಗೋಚರಚರಿತ್ರನೂ–ಸರ್ವತಂತ್ರ ಸ್ವತಂತ್ರನೂ ಆದ ದೇವರವಿಷಯುವಾಗಿ, ತಾಳಿದರೆ ಅಂಧಶ್ರದ್ಧೆಯನ್ನೇ ತಾಳಬಹುದಲ್ಲದೆ, ಆ ಭಗ ವಂತನ ಕೃಪೆಯಾಗುವವರೆಗೆ ಆತನವಿಷಯುದ ಪ್ರಬುದ್ಧಶ್ರದ್ಧೆಯನ್ನು ತಾಳುವದು ಶಕ್ಯವೇ ಅಲ್ಲವು. ಶ್ರದ್ಧೆಯ ಅಂಧತ್ವವೆಂದರೆ, ಈಶ್ವರನನ್ನು ಬಿಟ್ಟು ಉಳಿದವುಗಳ ವಿಷಯದ ಅಂಧತ್ವವು; ಅಂದರೆ, ದೇವರ ಹೊರತು ಆತನಿಗೆ ಬೇರೆ ಏನೂ ಕಾಣಿಸ ದಿರುವದು. ಆದ್ದರಿಂದ ನಿಜವಾದ ಶಾಂತಿಯನ್ನು ಪಡೆಯಲಿಚ್ಛಿಸುವವರು ದೇವರ ವಿಷಯುವಾಗಿಯೂ, ಆತನ ಕೃಪೆಗೆ ಪಾತ್ರರಾದ ಭಕ್ತರ ವಿಷಯವಾಗಿಯೂ ಅಂಧಶ್ರದ್ಧೆಯನ್ನು ತಾಳಬೇಕಾಗುವದು. ಈ ಅಂಧ ಶ್ರದ್ಧೆಯ ದೃಢೀಕರಣವು ಎಷ್ಟರಮಟ್ಟಿಗೆ ಆಗಿರುವದೆಂಬದನ್ನು ಪರೀಕ್ಷಿಸುವದಕ್ಕಾಗಿಯೇ ಪುರಾಣಗಳಲ್ಲಿ ಅಮಾನುಷಕೃತ್ಯಗಳು ಉಲ್ಲೇಖಿಸಲ್ಪಟ್ಟಿರುತ್ತವೆಂದು ಕಟ್ಟಕಡೆಯಲ್ಲಿ ಇನ್ನೊಮ್ಮೆ ನಾವು ಹೇಳಿಬಿಡುವೆವು.

೨. **ಐಹಿಕ ಸುಖಸಾಧನದ ಸುಂದರಮಾರ್ಗ:**—ಪುರಾಣಗಳ ವಿಷಯವಾಗಿ ಪೂರ್ಣಶ್ರದ್ಧೆಯುಳ್ಳವರು, ಅವುಗಳಲ್ಲಿ ವರ್ಣಿಸಿರುವ ಐಹಿಕ-ಪಾರಮಾರ್ಥಿಕ ಸುಖಸಾಧನದ ಸುಂದರ ಮಾರ್ಗಗಳ ರಹಸ್ಯವನ್ನು ಅರಿತುಕೊಳ್ಳಬಹುದು. ಪ್ರಕೃತದ ವೇಂಕಟೇಶ ಮಾಹಾತ್ಮ್ಯದಿಂದ ಐಹಿಕ ಸುಖಸಾಧನದ ರಹಸ್ಯಗಳೇನು ಗೊತ್ತಾಗುವವೆಂಬದನ್ನು ಮೊದಲು ವಿಚಾರಿಸುವಾ. ಐಹಿಕ ಸುಖವು ಪ್ರಾಪ್ತವಾಗಲಿಕ್ಕೆ:— ಗುರುಹಿರಿಯರಲ್ಲಿಯೂ ದೇವರಲ್ಲಿಯೂ ಭಕ್ತಿ, ಸೌಜನ್ಯದ ನಡತೆ, ತಾರತಮ್ಯಜ್ಞಾನ, ಸರಳತನ, ಕಾರ್ಯದಕ್ಷತೆ, ಕಾರ್ಯಸಾಧನಕೌಶಲ್ಯ, ಲೋಕಸಂಗ್ರಹ, ಲೋಕಾದರ, ಇವು ಅವಶ್ಯವಾಗಿರುವವು. ಸಂಸಾರಿಕರು ಇವುಗಳನ್ನು ಹೇಗೆ ಸಂಪಾದಿಸಬೇಕೆಂಬವನ್ನು ಪ್ರತ್ಯಕ್ಷ ಶ್ರೀನಿವಾಸನ ಸುಂದರವಾದ ಚರಿತ್ರನಿಂದ ಕಂಡುಕೊಳ್ಳಬಹುದು. ಭೃಗುಋಷಿಗಳು ಕಾಲಿನಿಂದ ಒದ್ದಾಗ ಭಗವಂತನು ಶಾಂತಿಯನ್ನು ತಾಳಿ, ಆ ಋಷಿಯ ಕಾಲು ಒತ್ತಿ ಆತನನ್ನು ಸಮಾಧಾನಪಡಿಸಿದ್ದು ಸಾಧಾರಣ ಗುರುಭಕ್ತಿಯಲ್ಲ. ಅದರಂತೆ ತನ್ನ ತಾಯಿಯನ್ನು ಕೇಳದೆ ಬೇಟೆಗೆ ಬಂದದ್ದರಿಂದ, ಪದ್ಮಾವತಿಯ ಗೆಳತಿಯರಿಂದ ತಾನು ಸೋತೆನೆಂದು ಶ್ರೀನಿವಾಸನು ಭಾವಿಸಿದ್ದೂ, ತನ್ನ ಅವತಾರಕ್ರಮದಿಂದ ಹಿರಿಯರಾದ ವರಾಹ-ರಾಮ-ಕೃಷ್ಣರನ್ನು ನಮಿಸಿದ್ದೂ, ಕಪಿಲೇಶ್ವರನನ್ನೂ-ಶುಕಾಚಾರ್ಯರನ್ನೂ ವಂದಿಸಿದ್ದೂ, ಲಗ್ನದಲ್ಲಿ ಎಣ್ಣೆಹಚ್ಚಿಕೊಳ್ಳುವಂಥ ಸಣ್ಣ ಕೆಲಸದಲ್ಲಿ ಕೂಡ ಸಪ್ತಋಷಿಗಳನ್ನು ವಂದಿಸಿ ಗುರುಗಳಾದ ವಶಿಷ್ಠರ ಅನುಮತಿಯನ್ನು ಪಡೆದದ್ದೂ ಇವು ಗುರುಹಿರಿಯರ, ಹಾಗು ದೇವರ ವಿಷಯದಲ್ಲಿದ್ದ ಶ್ರೀನಿವಾಸನಿಗಿದ್ದ ಭಕ್ತಿಯನ್ನು ವ್ಯಕ್ತಗೊಳಿಸುತ್ತವೆ. ಅದರಂತೆ, ಬ್ರಹ್ಮಾದಿ ದೇವತೆಗಳನ್ನು ತನ್ನ ಲಗ್ನಕ್ಕೆ ಆದರದಿಂದ ಬರಮಾಡಿಕೊಂಡದ್ದೂ, ಪ್ರತ್ಯಕ್ಷ ತನ್ನ ಹೆಂಡತಿಯಾದ ಲಕ್ಷ್ಮೀದೇವಿಯನ್ನು ತನ್ನ ಲಗ್ನಕ್ಕೆ ಉಪಾಯಾಂತರದಿಂದ ಕರೆಸಿ ಆಕೆಯನ್ನು ಸಮಾಧಾನಪಡಿಸಲಿಕ್ಕೆಂದು ತಾನೇ ಆಕೆಯನ್ನು ಎದುರುಗೊಳ್ಳಹೋದದ್ದೂ, ಇವೇ ಮೊದಲಾದವು ಭಗವಂತನ ಸೌಜನ್ಯದ ನಡತೆಯನ್ನು ವ್ಯಕ್ತಮಾಡುತ್ತವೆ. ಈ ಪುರಾಣದಲ್ಲಿ ವೈಷ್ಣವತಾರತಮ್ಯವು ಬಹು ಚನ್ನಾಗಿ ಕಾಯ್ದುಕೊಳ್ಳಲ್ಪಟ್ಟದೆ. ಬ್ರಹ್ಮನು ವಿಷ್ಣುವಿನ ಮಗನು, ಶಂಕರನು ವಿಷ್ಣುವಿನ ಮೊಮ್ಮಗನು, ಶೇಷನಿಗಿಂತ ವಾಯುವಿನ ಯೋಗ್ಯತೆ ಹೆಚ್ಚು, ಭೃಗುಋಷಿಯು ಬಂದಾಗ ವಿಷ್ಣುವು ನಿದ್ರಾಸಕ್ತನಾಗಿದ್ದನು, ಬ್ರಹ್ಮನು ಗರ್ವಿಷ್ಠನಾಗಿದ್ದನು,

ಶಂಕರನು ಪಾರ್ವತಿಯೊಡನೆ ಕ್ರೀಡಾಸಕ್ತನಾಗಿದ್ದನು, ಅವರವರ ಯೋಗ್ಯತೆಯಂತೆ ಶ್ರೀನಿವಾಸನು ತನ್ನ ಲಗ್ನದಲ್ಲಿ ದೇವತೆಗಳಿಗೆ ಕೆಲಸಗಳನ್ನು ನಿಯಮಿಸಿ ದನು ಎಂಬಿವೇ ಮೊದಲಾದ ಸಂಗತಿಗಳು ತಾರತಮ್ಯದರ್ಶಕಗಳಾಗಿರುತ್ತವೆ. ಇದರಂತೆ ಶ್ರೀನಿವಾಸನ ಆಚರಣೆಯಲ್ಲಿ ಕಂಡುಬಂದಷ್ಟು ಸರಳತನವನ್ನು ಮತ್ತೊಂದು ಕಡೆಯಲ್ಲಿ ಕಾಣುವದು ಅಪರೂಪವು. ಆತನು ಚೋಳರಾಜನನ್ನು ನಿಷ್ಕಾರಣ ಶಪಿಸಿದ ತನ್ನ ತಪ್ಪನ್ನು, ಚೋಳರಾಜನ ಮುಂದೆ ಒಪ್ಪಿಕೊಂಡು ಅದರ ಪ್ರಾಯಶ್ಚಿತ್ತಕ್ಕಾಗಿ ತನ್ನನ್ನೇ ಶಪಿಸಿಕೊಂಡನು. ಆತನು ತನ್ನ ಹೀನತನವನ್ನೂ, ಬಡತನವನ್ನೂ ಎಲ್ಲಿಯೂ ಯಾರಮುಂದೆಯೂ ಬಚ್ಚಿಕೊಂಡಿರುವದಿಲ್ಲ. ನಿರಭಿಮಾನದಿಂದ ಲಗ್ನದ ಎಲ್ಲ ವೆಚ್ಚವನ್ನು ಆಕಾಶರಾಜನಮೇಲೆ ಹಾಕಿದ್ದಲ್ಲದೆ, ತನಗೆ ಬೇಕಾದದ್ದನ್ನು ಸ್ಪಷ್ಟವಾಗಿ ಕೇಳಿ ಮಾವನ ಕೈಯಿಂದ ಇಸುಕೊಂಡಿರುವನು. ವಸುದಾನ-ತೋಂಡಮಾನರಲ್ಲಿ ಉಂಟಾಗಿದ್ದ ಕಲಹವನ್ನು ತೀರಿಸಿದ್ದಕ್ಕಾಗಿ ಅವರ ರಾಜ್ಯದ ೧।೧೬ ಭಾಗವನ್ನು ತಾನೇ ಕೇಳಿ ಉಚಿತವಾಗಿ ಪಡೆದನು. ಒಟ್ಟಿಗೆ, ಶ್ರೀನಿವಾಸನು ತನಗೆ ಬೇಕಾದದ್ದನ್ನು ಸ್ಪಷ್ಟವಾಗಿಕೇಳಿ, ಬೀಗರಿಂದಾಗಬಹುದಾದ ಪ್ರಯೋಜನಗಳನ್ನು ಪಡೆದು, ಪರಸ್ಪರ ಪ್ರೇಮವನ್ನು ವೃದ್ಧಿಗೊಳಿಸಿರುವನಲ್ಲದೆ, ದುರಭಿಮಾನದಿಂದ ಒಣಡೌಲುಮಾಡಿ ಹಿಂದಿನಿಂದ ಬೀಗರನ್ನು ಆಡಿಕೊಂಡು ಜಗಳಾಡುವ ನೀಚತನಕ್ಕೆ ಹೋಗಿರುವದಿಲ್ಲ. ಇದರಂತೆ ಆತನು ಬಕುಲಾವತಿಯನ್ನು ಸ್ವಕಾರ್ಯಕ್ಕಾಗಿ ಉತ್ತೇಜನಗೊಳಿಸಿದ್ದೂ, ಆಕೆಯಿಂದ ಕಾರ್ಯವಾಗಲಿಕ್ಕಿಲ್ಲೆಂದು ತಾನು ಕೊರವಂಜಿಯಾಗಿ ಹೋದದ್ದೂ. ವಿಶ್ವಕರ್ಮನ ಮೇಲೆಯೂ ಅಗ್ನಿಯ ಮೇಲೆಯೂ ಸಿಟ್ಟು ಆದ ಹಾಗೆ ತೋರಿಸಿ ಅವರಲ್ಲಿ ಕರ್ತವ್ಯಜಾಗ್ರತಿಯನ್ನುಂಟುಮಾಡಿದ್ದೂ, ಮೊಮ್ಮಗನಾದ ಶಂಕರನು ಹೇಳಿದ ಮಾತನ್ನು ಹುಡುಗನೆಂದು ದುರ್ಲಕ್ಷಿಸದೆ ಅದಕ್ಕೆ ಒಪ್ಪಿಕೊಂಡು ಕುಬೇರನಲ್ಲಿ ಸಾಲಮಾಡಿದ್ದೂ, ತನ್ನ ಲಗ್ನಕಾರ್ಯದಲ್ಲಿ ಪರಿಶ್ರಮಮಾಡಿದ ಶುಕಾಚಾರ್ಯರಿಗೆ ಸದ್ಗತಿಯಾಗುವದೆಂದು ಹೇಳಿದ್ದೂ, ಲಕ್ಷ್ಮಿಯೇ ಮೊದಲಾದವರನ್ನು ತನ್ನ ಲಗ್ನಕ್ಕಾಗಿ ಅನುಕೂಲ ಮಾಡಿಕೊಂಡದ್ದೂ, ಬೀಗನಾದ ವಸುದಾನನೂ— ಮಾವನಾದ ತೋಂಡಮಾನನೂ ಯುದ್ಧದಲ್ಲಿ ತಮಗೆ ಸಹಾಯಮಾಡಬೇಕೆಂದು ಕೇಳಿಕೊಳ್ಳಲಿಕ್ಕೆ ಬಂದಾಗ ತಾನು ವಸುದಾನನ ಕಡೆಗೆ ಆಗಿ, ತನ್ನ ಚಕ್ರವನ್ನು ತೋಂಡಮಾನನಿಗೆ ಕೊಟ್ಟದ್ದೂ, ಲಕ್ಷ್ಮೀದೇವಿಯನ್ನು ಒಲಿಸಿಕೊಳ್ಳುವಾಗ ಬೇನೆಯ ಸೋಗು ಹಾಕಿದ್ದೂ

ಇವೇ ಮೊದಲಾದ ಸಂಗತಿಗಳು ಶ್ರೀನಿವಾಸನ ಕಾರ್ಯದಕ್ಷತೆಯನ್ನೂ-ಕಾರ್ಯ ಸಾಧನ ಕೌಶಲ್ಯವನ್ನೂ ತೋರಿಸುತ್ತವೆ. ಹಾಗೆಯೇ, ಅವರವರ ಯೋಗ್ಯತೆ ಯಂತೆ ಕೊಡಬಹುದಾದ ಗೌರವವನ್ನು ಶ್ರೀನಿವಾಸನು ಅವರವರಿಗೆ ಕೊಟ್ಟಿದ್ದ ರಿಂದ ಆತನ ಸಲುವಾಗಿ ಲೋಕಸಂಗ್ರಹವೂ-ಲೋಕಾದರವೂ ಉತ್ಪನ್ನವಾದವು. ಶ್ರೀನಿವಾಸನ ಲಗ್ನ ಸಮಾರಂಭದಲ್ಲಿ ಯಾವತ್ತು ದೇವತೆಗಳು ಸಂತೋಷದಿಂದ ತಮ್ಮ ತಮ್ಮ ಕೆಲಸಗಳನ್ನು ಮಾಡಿದರು. ಬಹಳವೇಕೆ, ತಾನು ಪದ್ಮಾವತಿಯ ಪಾಣಿಗ್ರಹಣ ಮಾಡುವದು ಅವಶ್ಯವೆಂದು ಶ್ರೀನಿವಾಸನು ಜನ್ಮಾಂತರಕಥನದಿಂದ ಲಕ್ಷ್ಮೀದೇವಿಯನ್ನು ಒಡಂಬಡಿಸಿ, ಲಗ್ನಕ್ಕೆ ಆಕೆಯ ಒಪ್ಪಿಗೆಯನ್ನು ಪಡೆದದ್ದಲ್ಲದೆ ಲಕ್ಷ್ಮೀದೇವಿಯನ್ನೇ ತನ್ನ ವಿವಾಹಕಾರ್ಯದಲ್ಲಿ ಮುಂದಾಳುವಾಗಮಾಡಿದನು. ಇದರಿಂದ ಎರಡನೆಯ ಸಂಬಂಧದ ಲಗ್ನದಲ್ಲಿ ಮೊದಲನೆಯ ಹೆಂಡತಿಯಿಂದಾಗಬಹುದಾಗಿದ್ದ ರಸಕಸಿಯು ಸಹ ಶ್ರೀನಿವಾಸನ ಲಗ್ನದಲ್ಲಿ ಆಗಲಿಲ್ಲ. ಶುಕಾಶ್ರಮದಲ್ಲಿ ಯಾವತ್ತು ಋಷಿಗಳು, " ತಮ್ಮನ್ನು ಬಿಟ್ಟು ಶ್ರೀನಿವಾಸನು ಸಕುಟುಂಬ ಭೋಜನಮಾಡಿದನೆ"ಂದು ಸಿಟ್ಟಾಗಿರಲು, ಶ್ರೀನಿವಾಸನು ಅವರನ್ನು ನಿರಾಕರಿಸದೆ, ತನ್ನ ತೇಗಿನಿಂದ ಅವರನ್ನು ತೃಪ್ತಿಗೊಳಿಸಿ ಅವರನ್ನು ಸಂತೋಷ ಪಡಿಸಿದನು. ಸಂಜೆಯ ಲಗ್ನವಿಟ್ಟಿದ್ದರಿಂದ ಬ್ರಾಹ್ಮಣರು ಹಸಿಯುವರೆಂದು ತಿಳಿದು, ಸಕಾಲಕ್ಕೆ ಭೋಜನಮಾಡಿಸಬೇಕೆಂದು ತೋಂಡಮಾನನಿಗೆ ಹೇಳಿ, ಲಗ್ನದ ಪೂರ್ವದಲ್ಲಿಯೇ ಸಕಾಲಕ್ಕೆ ಬ್ರಾಹ್ಮಣಭೋಜನ ಮಾಡಿಸಿ ಅವರ ಆದರವನ್ನು ಸಂಪಾದಿಸಿದನು. ಒಟ್ಟಿಗೆ, ಶ್ರೀನಿವಾಸನು ಸರಳತನ-ಅಕೃತ್ರಿಮಪ್ರೇಮ-ಸವಿನುಡಿ ಇವುಗಳಿಂದ ಬೀಗರ ಪ್ರೇಮವನ್ನೂ, ಯೋಗ್ಯವಾದ ಆದರೋಪಚಾರ-ಗೌರವದ ನಡತೆ ಇವುಗಳಿಂದ ದೇವತೆಗಳ ಪ್ರೇಮವನ್ನೂ ಸಂಪಾದಿಸಿದನು. ಹೀಗೆ ಲಗ್ನದಲ್ಲಿ ಯಾವ ಬಗೆಯ ಕಲಹಕ್ಕೂ ಆಸ್ಪದವು ದೊರೆಯದಂತೆ ಶ್ರೀನಿವಾಸನು ಆಸಕ್ತಿಯಿಂದ ವ್ಯವಸ್ಥೆಮಾಡಿದನೆಂದಬಳಿಕ, ಇದಕ್ಕೂ ಹೆಚ್ಚಿನ ಲೋಕಸಂಗ್ರಹ-ಲೋಕಾದರಣೆಗಳೇನಿರಬೇಕು ! ಮೇಲೆ ವರ್ಣಿಸಿರುವ ಪ್ರತಿಯೊಂದು ಲೌಕಿಕ ಪ್ರಸಂಗವು ಶ್ರೀ ವೇಂಕಟೇಶಮಾಹಾತ್ಮ್ಯದಲ್ಲಿ ಚಿತ್ತವೇಧಕವಾಗಿ ವರ್ಣಿಸಲ್ಪಟ್ಟಿರುವದಲ್ಲದೆ, ಆ ವರ್ಣನಗಳು ಬಹು ಪ್ರಾಸಾದಿಕವಾಗಿರುತ್ತವೆಂಬದನ್ನು ವಾಚಕರು ಮುಂದಿನ ಸಮಗ್ರ ಪುರಾಣವನ್ನು ಓದಿ ಮನಗಾಣಬಹುದು.

೩. **ಪಾರಮಾರ್ಥಿಕ ಪ್ರಯೋಜನದ ದಿಗ್ದರ್ಶನ—** ಹೀಗೆ ವೇಂಕಟೇಶಮಾಹಾತ್ಮ್ಯದಲ್ಲಿ ಆಧುನಿಕ ಕಾಲಕ್ಕನುಸರಿಸಿದ ಪರಿಶುದ್ಧ ಲೌಕಿಕ ವ್ಯವಹಾರವು ಮಾತ್ರ ಭಗವಂತನಿಂದ ತೋರಿಸಲ್ಪಟ್ಟಿರುವದಲ್ಲದೆ, ಪಾರಮಾರ್ಥಿಕ ವಿಷಯವಿವೇಚನೆಯು ವಿಶೇಷವಾಗಿ ಅದರಲ್ಲಿಲ್ಲವೆಂದು ಕೆಲವರು ಹೇಳಬಹುದು; ಆದರೆ ಈ ಮಾತು ಒಪ್ಪತಕ್ಕದ್ದಲ್ಲ. ನಿಜವಾದ ಲೌಕಿಕಕ್ಕೂ, ನಿಜವಾದ ಪಾರಮಾರ್ಥಿಕಕ್ಕೂ ಭೇದವಿಲ್ಲೆಂಬ ದೊಡ್ಡವರ ಸಿದ್ಧಾಂತದ ನಿಜತ್ವವನ್ನು ಈ ವೇಂಕಟೇಶ ಮಾಹಾತ್ಮ್ಯದಲ್ಲಿ ಕಾಣಬಹುದೆಂದು ನಮಗೆ ತೋರುತ್ತದೆ. ಮುಖ್ಯವಾಗಿ ಈಶ್ವರಾನುಗ್ರಹಕ್ಕೆ ಪಾತ್ರವಾಗುವದು, ಪುರಾಣದಿಂದಾಗುವ ಆಧ್ಯಾತ್ಮಿಕ ಪ್ರಯೋಜನವೆಂದು ನಾವು ತಿಳಿಯುತ್ತೇವೆ. ಈ ಪ್ರಯೋಜನವು ವೇಂಕಟೇಶ ಮಾಹಾತ್ಮ್ಯದಿಂದ ನಿಶ್ಚಯವಾಗಿ ಸಾಧಿಸುವದು. "ಸ್ವಕರ್ಮ ಸೂತ್ರಗ್ರಥಿತೋಹಿ ಲೋಕಃ" ಎಂಬ ಉಕ್ತಿಯಂತೆ, ಈ ಲೋಕವು ಕರ್ಮಬದ್ಧವಾಗಿರುತ್ತದೆಂಬದರಲ್ಲಿ ಸಂಶಯವಿಲ್ಲ. ಈಶ್ವರನ ಗೊಡವಿಗೆ ಹೋಗದೆ ತಮ್ಮ ಕರ್ಮದಿಂದಲೇ ಪ್ರಗತಿಯನ್ನು ಹೊಂದಬಹುದೆಂಬ ಸಿದ್ಧಾಂತದಂತೆ ನಡೆಯುತ್ತಿರುವ ಈಗಿನ ಕಾಲದಲ್ಲಿ, ತಾಪದಾಯಕವಾದ ಲೌಕಿಕ ಸುಧಾರಣೆಯು ಎಷ್ಟು ಒತ್ತರದಿಂದ ಆಗುತ್ತ ನಡೆದಿರುವದೆಂಬದನ್ನು ಪಾಶ್ಚಾತ್ಯ ರಾಷ್ಟ್ರಗಳಲ್ಲಾಗಿರುವ ಸುಧಾರಣೆಗಳಿಂದ ಮನಗಾಣಬಹುದು. ಅಂಥ ಸುಧಾರಣೆಯಿಂದ ಶಾಂತಿಗೆ ಕಾರಣವಾದ ಪಾರಮಾರ್ಥಿಕ ಹಿತವು ಸಾಧಿಸಲಾರದು. "ತನ್ನ ಕರ್ಮ ತನಗೆ ಬಿಡದು" ಎಂಬ ಸಿದ್ಧಾಂತವನ್ನು ವೇಂಕಟೇಶಮಾಹಾತ್ಮ್ಯದಲ್ಲಿ ವರ್ಣಿಸಿರುವ, ಆಕಾಶರಾಜ—ತೋಂಡಮಾನರಾಜ—ಪದ್ಮಾವತಿ ಇವರ ಜನ್ಮಾಂತರ ವೃತ್ತಾಂತ, ಚೋಳರಾಜ—ಶ್ರೀನಿವಾಸರಿಗೊದಗಿದ ಶಾಪಪ್ರಸಂಗ ಇವುಗಳನ್ನು ವಿಚಾರಿಸಿದರೆ ಗೊತ್ತಾಗುವದು. ಆಕಾಶರಾಜನು ಪೂರ್ವಜನ್ಮದಲ್ಲಿ ಮಾಧವನೆಂಬ ಸುಶೀಲ ಬ್ರಾಹ್ಮಣನಾಗಿದ್ದನು. ಮಾಧವನು ಸತ್ಕುಲಪ್ರಸೂತನೂ, ಸತ್ಕರ್ಮನಿರತನೂ ಆಗಿದ್ದರೂ ಆತನಿಗೆ ಸತ್ಸಮಾಗಮದ ಯೋಗವು ಒದಗಿ ಜ್ಞಾನವು ಪ್ರಾಪ್ತವಾಗದೆಯಿದ್ದದ್ದರಿಂದ, ಪ್ರಾರಬ್ಧಕರ್ಮಕ್ಕನುಸರಿಸಿ ಆತನಿಗೆ ಕುಂತಲೆಯೆಂಬ ಚಾಂಡಾಲಸ್ತ್ರೀಯ ಸಮಾಗಮ—ಪಾಪವು ಘಟಿಸಿತು. ಇಂಥ ದೋಷಿಯಾದ ಮಾಧವನ ವಾಸನಾಕ್ಷಯವಾಗದಿರುವಾಗ ಆತನ ಪ್ರೀತಿಪಾತ್ರಳಾದ ಕುಂತಲೆಯು ಮರಣಹೊಂದಲು, ಮಾಧವನಲ್ಲಿ ಅಭಾವ ವೈರಾಗ್ಯವು ಉತ್ಪನ್ನವಾಗಿ ಆತನು ಪಶ್ಚಾತ್ತಾಪಕ್ಕೆ ಒಳ

ಗಾದನು. ಈ ಸ್ಥಿತಿಯಲ್ಲಿ ಗಿರಿಯ ಯಾತ್ರೆಗೆ ಹೋಗುವ ಸಜ್ಜನರ ಸಮಾಗಮವು ಆತನಿಗೆ ಆಗಲು, ಆ ಪತಿತನಾದ ಮಾಧವನು ವೇಂಕಟಗಿರಿಗೆ ಹೋಗಿ ಸತ್ಸಮಾಗಮದ ಯೋಗದಿಂದ ಪಿತೃಗಳಿಗೆ ಪೃತ್ಪಿಂಡದಾನವನ್ನು ಮಾಡಿದನು. ಆ ಕ್ಷೇತ್ರಗಮನದ ಪುಣ್ಯಪ್ರಭಾವದಿಂದ ಮಾಧವನ ಪಾಪವು ವಮನವಾಗಿ ಹೋಗಲು, ಆತನು ದೇಹವನ್ನು ಬಿಟ್ಟನು. ಆತನು ಹೀಗೆ ಪರಿಶುದ್ಧನಾದರೂ ಆತನ ಭೋಗವಾಸನೆ ಕ್ಷಯವಾಗದ್ದರಿಂದಲೂ, ಸತ್ಸಮಾಗಮದ ಯೋಗದಿಂದ ಪ್ರಾಪ್ತವಾದ ಮಹಾಕ್ಷೇತ್ರವಾಸದ ಪುಣ್ಯವು ಲಭಿಸಿದ್ದರಿಂದಲೂ ಭಗವದನುಗ್ರಹಕ್ಕೆ ಪಾತ್ರವಾದ ಆಕಾಶರಾಜನ ಜನ್ಮವು ಆ ಮಾಧವನಿಗೆ ಪ್ರಾಪ್ತವಾಯಿತು. ಭೋಗತೃಪ್ತಿಗೆ ಅರಸನಾಗಿ ಹುಟ್ಟುವದು ಯೋಗ್ಯವಷ್ಟೇ ? ಆದರೂ ಶ್ರೇಷ್ಠವಾದ ಬ್ರಾಹ್ಮಣವರ್ಣದಲ್ಲಿ ದುಷ್ಕರ್ಮವು ಘಟಿಸಿದ್ದರಿಂದ ಮಾಧವನು ಕ್ಷತ್ರಿಯ ಜನ್ಮವನ್ನು ಧರಿಸಬೇಕಾಯಿತು. ಇದರಂತೆ, ಶೂದ್ರನಾಗಿದ ರಂಗದಾಸನು ವೈಖಾನಸರೆಂಬ ಸತ್ಪುರುಷರ ಸಮಾಗಮ ಪ್ರಭಾವದಿಂದ ಮುಕ್ತನಾಗುವ ಪ್ರಸಂಗದಲ್ಲಿ, ಆತನು ಗಂಧರ್ವಸ್ತ್ರೀಯರ ಜಲಕ್ರೀಡೆಗೆ ಮೋಹಿತನಾಗಿ ರೇತಸ್ಖಲನ ದೋಷವನ್ನು ಹೊಂದಿದ್ದರಿಂದ ಸತ್ಪುರುಷರ ಕ್ಷೋಭಕ್ಕೆ ಗುರಿಯಾದನು; ಆದರೆ ಭಗವಂತನು ಕ್ಷಮಿಸಿ ಆ ಶೂದ್ರನನ್ನು ಅನುಗ್ರಹಿಸಿದ್ದರಿಂದ ರಂಗದಾಸನು ತನ್ನ ವಾಸನೆಯಂತೆ ಶ್ರೇಷ್ಠಭೋಗವನ್ನು ಹೊಂದುವದಕ್ಕಾಗಿ ಆಕಾಶರಾಜನ ತಮ್ಮನಾಗಿ ಹುಟ್ಟಿ ತೋಂಡಮಾನನೆಂಬ ಹೆಸರನ್ನು ಪಡೆದನು. ಹೀಗೆ ರಂಗದಾಸನು ತೋಂಡಮಾನನಾಗಿ ಹುಟ್ಟಿ ಪೂರ್ವಜನ್ಮದ ವಾಸನೆಯಿಂದ ಬಹುಜನ ಸ್ತ್ರೀಯರ ಭೋಗವನ್ನು ಪಡೆದನು. ಅದರಂತೆ ವೇದವತಿಯು, ಲೋಕಮಾತೆಯಾದ ಜಾನಕಿಯ ರಾವಣಗೃಹವಾಸದ ಕಷ್ಟವನ್ನು ದೂರಮಾಡಿ ಭಗವತ್ಕೃಪೆಗೆ ಪಾತ್ರಳಾದ್ದರಿಂದ, ಭಗವಂತನ ಪಾಣಿಗ್ರಹಣಕ್ಕೆ ಯೋಗ್ಯಳಾಗಿ ಪದ್ಮಾವತಿಯ ರೂಪದಿಂದ ಆಕಾಶರಾಜನ ಹೊಟ್ಟೆಯಲ್ಲಿ ಅವತರಿಸಿದಳು. ಈ ಸಂಗತಿಗಳಿಂದ ಜನ್ಮಾಂತರದ ವಿಷಯವಾಗಿ ಭಾವಿಕರಾದ ವಾಚಕರ ಮನಸ್ಸಿನಲ್ಲಿ ವಿಶ್ವಾಸವು ಉತ್ಪನ್ನವಾಗಿ, ಸತ್ಕರ್ಮಗಳ ಯೋಗದಿಂದ ತಮ್ಮ ಉತ್ಕರ್ಷವನ್ನು ಜನ್ಮಾಂತರದಲ್ಲಿಯಾದರೂ ಮಾಡಿಕೊಂಡೇವೆಂಬ ಉದಾತ್ತ ಭಾವನೆಯು ಅವರಲ್ಲಿ ಉತ್ಪನ್ನವಾಗದೆಯಿರಲಿಕ್ಕಿಲ್ಲ. ಚೋಳರಾಜನು ಈಶ್ವರೀಕ್ಷೋಭಕ್ಕೆ ಪ್ರತ್ಯಕ್ಷವಲ್ಲದಿದ್ದರೂ ಪರ್ಯಾಯದಿಂದಲಾದರೂ ಕಾರಣನಾದ್ದರಿಂದ, ಆತನು ಭಗವಂತನ ಶಾಪದಿಂದ ಪಿಶಾಚ

ಜನ್ಮವನ್ನು ತಾಳಬೇಕಾಯಿತು. ಅದರಂತೆ ಭಗವಂತನು ಸಿಟ್ಟಿನಲ್ಲಿ ಚೋಳರಾಜ ನನ್ನು ಶಪಿಸಿದ ಪಶ್ಚಾತ್ತಾಪದಿಂದ ಆ ಪಿಶಾಚನೊಡನೆ ತಾನು ಕಷ್ಟಕ್ಕೆ ಗುರಿ ಯಾಗುವಂತೆ, ತನ್ನನ್ನು ತಾನೇ ಶಪಿಸಿಕೊಳ್ಳಬೇಕಾಯಿತು. ಇವೆಲ್ಲ ಸಂಗತಿಗಳ ರಹಸ್ಯವನ್ನು ವಿಚಾರಿಸಿದರೆ, ಕರ್ಮದ ಸುಂಕವು ಎಷ್ಟು ಬಾಧಿಸುತ್ತದೆಂಬದು ವಾಚಕರ ಮನಸ್ಸಿನಲ್ಲಿ ಬಿಂಬಿಸಬಹುದಾಗಿದೆ. ಕರ್ಮದ ಕ್ಷಯವನ್ನು ಭೋಗ ದಿಂದ ಪಡೆಯುವದು ಶಕ್ಯವಲ್ಲ; ಯಾಕಂದರೆ ಒಂದು ಕರ್ಮದ ಫಲವನ್ನು ಭೋಗಿಸುವಾಗ ಹೊಸ ಕರ್ಮಗಳನ್ನು ಮಾಡಬೇಕಾಗುತ್ತದೆ; ಆದ್ದರಿಂದ ಕರ್ಮ ಕ್ಷಯಕ್ಕೆ ಸತ್ಸಮಾಗಮ ಮಾಡಿ ಈಶ್ವರಾನುಗ್ರಹದಿಂದ ನೈಷ್ಕರ್ಮ್ಯಸಿದ್ಧಿಯನ್ನು ಪಡೆದು, ಸ್ವರೂಪಜ್ಞಾನ ಪಡೆಯುವದು ಅವಶ್ಯವಾಗಿರುವದು. ಇದಕ್ಕೆ ತೋಂಡ ಮಾನನು ಭೀಮಕುಲಾಲನೆಂಬ ಸತ್ಪುರುಷನ ಸಮಾಗಮದಿಂದ ಈಶ್ವರಾನುಗ್ರಹ ವನ್ನು ಪಡೆದು ಮತ್ತೊಂದು ಜನ್ಮದಲ್ಲಿ ಮುಕ್ತಿಯನ್ನು ಪಡೆದದ್ದು ಉದಾಹರಣ ವಾಗಿರುವದು. ಕುಂಬಾರನಾದ ಭೀಮನು ಶ್ರೀನಿವಾಸನ ಮೇಲಿನ ಭಕ್ತಿಯಿಂದ ಅದೇ ಜನ್ಮದಲ್ಲಿಯೇ ವೈಕುಂಠವನ್ನು ಪಡೆದನು; ಆದರೆ ಶ್ರೀನಿವಾಸನೊಡನೆ ಬೀಗತನವನ್ನು ಮಾಡಿ ಅತಿ ಪರಿಚಯವನ್ನು ಪಡೆದಿದ್ದ ತೋಂಡಮಾನನು, ಶ್ರೀನಿವಾಸನ ಸ್ವರೂಪವನ್ನು ತಿಳಿದು ಆತನಲ್ಲಿ ದೃಢಭಕ್ತಿಯುಳ್ಳವನಾಗಿ ಅಭಿಮಾನ ವನ್ನು ಕಳಕೊಳ್ಳದ್ದರಿಂದ, ಶ್ರೀನಿವಾಸನ ಕೃಪೆಯಿಂದ ಪುನರ್ಜನ್ಮವನ್ನು ಪಡೆದು ಜನ್ಮಾಂತರದಲ್ಲಿ ವೈಕುಂಠವನ್ನು ಪಡೆಯಬೇಕಾಯಿತು. ಯಾವ ವಾಸನೆಯಿಂದ ಜನ್ಮವನ್ನು ತಾಳಿರುವರೋ ಆ ವಾಸನಾ ತೃಪ್ತಿಯಲ್ಲದೆ ಬೇರೆ ಮಹತ್ವದ ಫಲವು ಆ ಜನ್ಮದಲ್ಲಿ ಲಭಿಸಲಾರದು. ಈ ಮಾತು ವೇಂಕಟೇಶಮಾಹಾತ್ಮ್ಯದೊಳಗಿನ ಪುನರ್ಜನ್ಮಗಳ ವೃತ್ತಾಂತಗಳ ಪರಿಶೀಲನದಿಂದ ಗೊತ್ತಾಗುವಂತೆ ಅದೆ. ಈಶ್ವರ ಭಾವನಾಯುಕ್ತ ಕರ್ಮದಿಂದ ಮೋಕ್ಷಸಾಧನವೂ, ವಿಷಯ ಭಾವನಾಯುಕ್ತ ಕರ್ಮದಿಂದ ಬಂಧನವೂ ಉಂಟಾಗುತ್ತವೆಂಬ ಮಾತು ವಿಚಾರವಂತರ, ಹಾಗು ಭಾವಿಕರ ಮನದಟ್ಟಾಗಬಹುದು.

"ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ । ಅಭ್ಯುತ್ಥಾನಮಧ ರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ" ಎಂಬ ಗೀತಾವಚನದಂತೆ, ಧರ್ಮಗ್ಲಾನಿ ಯಾದಾಗೆಲ್ಲ ಭಗವದವತಾರಗಳು ಆಗುತ್ತವೆಂಬ ಮಾತಿಗೆ ಶ್ರೀ ವೇಂಕಟೇಶನ ಅವತಾರವು ಸಾಕ್ಷಿಯಾಗಿದೆ. ಭಗವದವತಾರಗಳಾಗಲಿಕ್ಕೆ ಭಕ್ತರು ಕಾರಣ

ವಾಗುವರು. ಭಕ್ತರ ಸಂಕಟಗಳನ್ನು ದೂರವಮಾಡುವದಕ್ಕಾಗಲಿ, ಅವರ ಇಷ್ಟಾರ್ಥಗಳನ್ನು ಪೂರಯಿಸುವದಕ್ಕಾಗಲಿ ಭಗವಂತನು ಅವತರಿಸುವದುಂಟು. ಆ ಅವತಾರಗಳಿಂದಲೇ ದುಷ್ಟಶಾಸನ-ಶಿಷ್ಟಪರಿಪಾಲನಗಳ ನೆವದಿಂದ ಧರ್ಮಸ್ಥಾಪನೆಯೂ ಆಗುವದುಂಟು. ಪ್ರಹ್ಲಾದನ ಸಂಕಟವನ್ನು ದೂರಮಾಡುವದಕ್ಕಾಗಿ ನೃಸಿಂಹಾವತಾರವೂ, ರಾವಣ-ಕುಂಭಕರ್ಣರ ರೂಪದಿಂದ ಹುಟ್ಟಿದ್ದ ಜಯವಿಜಯರೆಂಬ ಭಕ್ತರ ಉದ್ಧಾರಕ್ಕಾಗಿ ರಾಮಾವತಾರವೂ, ಅದರಂತೆ ಪದ್ಮಾವತಿಯ ರೂಪದಿಂದ ಅವತರಿಸಿದ ವೇದವತಿಯ ಬಯಕೆಯನ್ನು ಪೂರ್ಣಮಾಡುವದಕ್ಕೆ, ಹಾಗು ಆಕಾಶರಾಜ-ತೋಂಡಮಾನಾದಿಭಕ್ತರ ಉದ್ಧಾರಕ್ಕೆ ಶ್ರೀನಿವಾಸನ ಅವತಾರವೂ ಆದವು. ಅವತಾರಕ್ಕೆ ಭಗವದ್ಭಕ್ತರು ಕಾರಣರಾದಾಗ್ಯೂ ಆ ಅವತಾರಗಳಿಂದ ಲೋಕಕಲ್ಯಾಣವು ಅನಂತಕಾಲದವರೆಗೆ ಆಗುತ್ತ ಹೋಗುವದು. ಕಲಿಯುಗದ ಆದಿಯಲ್ಲಿ ಅವತರಿಸಿದ ಶ್ರೀನಿವಾಸನು ತನ್ನ ಮಹಿಮೆಯಿಂದ ಈಗಲೂ ಭಕ್ತರ ಕಲ್ಯಾಣಮಾಡುತ್ತಿರುವದು ಇದಕ್ಕೆ ಸಾಕ್ಷಿಯಾಗಿದೆ. ಕಲಿಯುಗದಲ್ಲಿ ಭಕ್ತರ ಸಂಕಟಗಳೂ-ಬಯಕೆಗಳೂ-ಧರ್ಮಗ್ಲಾನಿಯೂ ವಿಶೇಷವಾಗಿ ಆಗುವದರಿಂದ, ಭಗವದವತಾರಗಳಾದರೂ ಆಗಾಗ್ಗೆ ಆಗುತ್ತವೆಂದು ಜ್ಞಾನಿಗಳು ಹೇಳುವರು. ಅದರಂತೆ, ದೇಶಕಾಲಾನುಸಾರವಾಗಿ ಈಶ್ವರನು ಅವತರಿಸುವನೆಂದು ಈ ವೇಂಕಟೇಶ ಮಾಹಾತ್ಮ್ಯದಲ್ಲಿ ಹೇಳಿದ್ದನ್ನು ವಾಚಕರು ನೋಡಿಕೊಳ್ಳಬಹುದು. ಕಲಿಯುಗಕ್ಕನುಸರಿಸಿ ಭಗವಂತನು ಶ್ರೀನಿವಾಸನ ರೂಪದಿಂದ ಅವತರಿಸಿ, ಆ ಯುಗಾನುಸಾರವಾಗಿಯೇ ಆತನು ಆಚರಿಸಿರುವನು. ನೃಸಿಂಹಾವತಾರದಲ್ಲಿಯಂಥ ಅದ್ಭುತ ರೂಪಕ್ರಿಯೆಗಳೂ, ರಾಮಾವತಾರದಲ್ಲಿಯಂಥ ಅಲೌಕಿಕ ಪರಾಕ್ರಮವೂ, ಕೃಷ್ಣಾವತಾರದಲ್ಲಿಯಂಥ ಲೋಕವಿಚಿತ್ರ ತಂತ್ರವೂ ಶ್ರೀನಿವಾಸಾವತಾರದಲ್ಲಿ ಪ್ರಕಟವಾಗಿರುವದಿಲ್ಲ. ಕಲಿಯುಗದ ಕ್ಷೀಣಬಲದ, ಹಾಗು ಚಂಚಲವೃತ್ತಿಯ ವಿಷಯಾಸಕ್ತ ಸಂತತಿಯ ಪರಿಸ್ಥಿತಿಗನುಸರಿಸಿ ಶ್ರೀನಿವಾಸನ ಅವತಾರವಾಗಿದೆ. ಆತನು ಸಾಮಾನ್ಯ ಮನುಷ್ಯರ ಹಾಗೆ, ತನ್ನ ತಲೆಗಾದ ಗಾಯವನ್ನು ತಾಳಿಕೊಳ್ಳದವನಂತೆಯೂ, ಹೆಂಗಸರ ಕೈಯಿಂದ ಸೋತವನಂತೆಯೂ, ವಿಷಯಾಸಕ್ತನಂತೆ ಪದ್ಮಾವತಿಯ ಪ್ರಾಪ್ತ್ಯರ್ಥವಾಗಿ ಬಕುಲಾವತಿಯನ್ನು ಪ್ರಾರ್ಥಿಸಿದಂತೆಯೂ, ಅತಿ ಚಂಚಲವೃತ್ತಿಯವನಂತೆ ಕೊರವಂಜಿಯ ವೇಷತಾಳಿ ತನ್ನ ಅಜ್ಞಾನವನ್ನು ವ್ಯಕ್ತಪಡಿಸಿ

ಷಂತೆಯೂ, ಏನೂ ಇಲ್ಲದವನಂತೆ ( ಗತಿಯಿಲ್ಲದವನಂತೆ ) ಆಕಾಶ-ತೋಂಡಮಾನರನ್ನು ಕೇಳಿ ತನಗೆ ಬೇಕಾದದ್ದನ್ನು ಇಸುಕೊಂಡಂತೆಯೂ, ಪುಕ್ಕನಂತೆ ಹಂದಿಗಳಿಗೆ ಹೆದರಿ ಹುತ್ತಿನಲ್ಲಿ ಅಡಗಿಕೊಳ್ಳುವಂತೆಯೂ, ತಪ್ಪುಗಾರನಹಾಗೆ ಚೋಳರಾಜನನ್ನು ಕ್ಷಮೆಬೇಡುವಂತೆಯೂ, ಹೀನಬಲನ ಹಾಗೆ ತೋಂಡಮಾನನ ಬಾಣಗಳಿಂದ ಮೂರ್ಛಿತನಾದಂತೆಯೂ, ಅಸ್ವತಂತ್ರನ ಹಾಗೆ ಕುಬೇರನನ್ನು ಸಾಲಕ್ಕಾಗಿ ಯಾಚಿಸಿ ಕಾಗದ ಬರಕೊಡುವಂತೆಯೂ ಅಜ್ಞಾನಿಯಹಾಗೆ ಆಕಾಶ ರಾಜನ ಮರಣದಿಂದ ದುಃಖಿಸುವಂತೆಯೂ, ಕೇವಲ ಸಾಂಪ್ರದಾಯಾಭಿಮಾನಿಯ ಹಾಗೆ ಲಗ್ನ ಕಾರ್ಯದಲ್ಲಿ ಸಾಂಪ್ರದಾಯಗಳನ್ನು ಕಾಯುವಂತೆಯೂ. ಮೋಹಕ್ಕೊಳಗಾದವನ ಹಾಗೆ ಲಕ್ಷ್ಮಿಯನ್ನು ನೆನಿಸಿ ಅಳುವಂತೆಯೂ ನಟಿಸಿರುವನು; ಆದರೂ ಹುತ್ತದಲ್ಲಿ ವಾಸಿಸುವದು, ವೃದ್ಧ ಕೊರವಂಜಿಯಾಗುವದು, ಚೋಳರಾಜನನ್ನು ಶಪಿಸುವದು, ಬ್ರಹ್ಮಾದಿದೇವತೆಗಳನ್ನು ಭೂಲೋಕಕ್ಕೆ ಕರೆಸುವದು. ಸಪ್ತಋಷಿಗಳೇ ಮೊದಲಾದ ತನ್ನ ಯಾವತ್ತು ಪರಿವಾರವನ್ನು ತೇಗಿ ತೃಪ್ತಿಗೊಳಿಸುವದು, ಕೂರ್ಮ ಬ್ರಾಹ್ಮಣನ ಹೆಂಡಿರು ಮಕ್ಕಳ ಅಸ್ಥಿ ಸಂಚಯನ ಮಾಡಿಸಿ ಅವರನ್ನು ಪಾಂಡು-ತೀರ್ಥ ಪ್ರೋಕ್ಷಣದಿಂದ ಬದುಕಿಸುವದು ಮೊದಲಾದ ಅಲೌಕಿಕ ಕೃತಿಗಳಿಂದ ಅವನು ಅವತಾರಿಕನೆಂಬ ಗುರುತು ಹತ್ತದೆ ಇರುವದಿಲ್ಲ. ಪದ್ಮಾವತಿಯನ್ನು ಲಗ್ನವಾಗಿ 'ಆಕಾಶರಾಜನಿಗೆ ಸದ್ಗತಿಯನ್ನು ಕೊಟ್ಟಬಳಿಕ ಅವತಾರ ಕಾರ್ಯವು ಮುಗಿದಂತಾಗಲು, ಭಗವಂತನು ಮದಾಂಧನಾದ ತೋಂಡಮಾನನ ಅಭಿಮಾನಯುಕ್ತವಾದ ಸೇವಾಧರ್ಮವು ನೀಚತರದ್ದೆಂಬದನ್ನು ಭೀಮಕುಲಾಲನ ಉದಾಹರಣದಿಂದ ಆ ತೋಂಡಮಾನನ ನಿದರ್ಶನಕ್ಕೆ ತಂದುಕೊಟ್ಟು ಮುಂದಿನ ಜನ್ಮದಲ್ಲಿ ನಿನಗೆ ಸದ್ಗತಿಯಾಗುವದೆಂದು ಆತನಿಗೆ ಹೇಳಿದನು. ಈ ಸಂಗತಿಗಳಿಂದ ನಾವು ಮುಖ್ಯವಾಗಿ ಎರಡು ಮಾತುಗಳನ್ನು ಲಕ್ಷವಲ್ಲಿಡಬಹುದಾಗಿದೆ. ನಿಗ್ರಹವಾಗಲಿ, ಅನುಗ್ರಹವಾಗಲಿ, ಮನುಷ್ಯನಿಗೆ ಆಯಾಕಾಲದ ಅವತಾರಗಳಿಂದಲೇ ಮುಖ್ಯವಾಗಿ ಆಗತಕ್ಕವವೆಂಬಮಾತು ಒಂದನೆಯದು; ನೀನೇ ಗತಿಯೆಂದು ಭಗವಂತನ ಶರಣುಹೋದ ಹೊರತು ಆತನು ಗತಿಪ್ರದನಾಗುವದಿಲ್ಲೆಂಬ ಮಾತು ಎರಡನೆಯದು.

ಆಯಾ ಕಾಲಗಳಲ್ಲಾಗುವ ಭಗವದವತಾರಗಳನ್ನು ಸದ್ಗುರುಗಳ ಬೋಧದಿಂದಲೇ ಅರಿತುಕೊಳ್ಳಲು ಶಕ್ಯವೆಂಬ ಮಾತನ್ನು ವೇಂಕಟೇಶಮಾಹಾತ್ಮ್ಯದಿಂದ

ತಿಳಕೊಳ್ಳಬಹುದಾಗಿದೆ. ಆಕಾಶರಾಜಾದಿಗಳಿಗೆ ಶ್ರೀನಿವಾಸನು ಅವತಾರಿಕನೆಂಬ ಗುರುತು ಅವರ ಗುರುಗಳಾದ ಬೃಹಸ್ಪತ್ಯಾಚಾರ್ಯರ, ಹಾಗು ಮಹಾತ್ಮರಾದ ಶುಕಾಚಾರ್ಯರ ಬೋಧದಿಂದಲೇ ಆಯಿತು. ಇಲ್ಲದಿದ್ದರೆ ಶ್ರೀನಿವಾಸನೆಂದರೆ ಒಬ್ಬ ಬಡ ವನಚರನೆಂದು ಅವರು ತಿಳಕೊಳ್ಳಬಹುದಾಗಿತ್ತು. ಸದ್ಗುರು ಕೃಪೆಯಿಂದ ಜಗತ್ತೇ ಈಶ್ವರ ಸ್ವರೂಪವಿರುತ್ತದೆಂಬ ಜ್ಞಾನವಾಗುತ್ತಿರಲು, ಅವತಾರಿಕನ ಗುರುತು ಹತ್ತದಿರುವ ಬಗೆಹೇಗೆ ? ದೇವರು ಭಕ್ತಾಭಿಮಾನಿಯು, ಆತನಿಗೆ ದುಷ್ಟರು ಶಿಷ್ಟರು ಎಂಬ ಭೇದವಿರುತ್ತದೆ. ಈ ಭೇದದ ಸಂಗಡ ದುಷ್ಟಶಾಸನ–ಶಿಷ್ಟಪರಿಪಾಲನ ರೂಪವಾದ ಕರ್ತವ್ಯವೂ ಆತನ ಬೆನ್ನುಹತ್ತಿರುವದು. ಆತನು ಭಕ್ತಾಧೀನನಾದ್ದರಿಂದ ಭಕ್ತರ ಅಭೀಷ್ಟಗಳನ್ನು ಪೂರಯಿಸಬೇಕಾಗುವದು; ಆದರೆ ಸತ್ಪುರುಷರ ಮಾತು ಹಾಗಲ್ಲ. ಅವರು ಸದಭಿಮಾನಿಗಳು. ಅವರಲ್ಲಿ ದುಷ್ಟರೂ ಶಿಷ್ಟರೂ ಎಂಬ ಭೇದವಿಲ್ಲ. ಅವರು ಸರ್ವತ್ರ ಈಶ್ವರ ಭಾವವನ್ನು ವಹಿಸಿ ದಾಸವೃತ್ತಿಯನ್ನು ತಾಳಿರುವರು. ಅವರು ಸದಾ ಈಶ್ವರ ಸ್ವರೂಪಾನಂದ ಮಗ್ನರು. ಅವರು ಯಾವ ಉಪಾಧಿಗೂ ಸಿಲುಕತಕ್ಕವರಲ್ಲ, ಭಕ್ತರೊಡನೆ ಕ್ರೀಡಿಸುವ ಭರದಲ್ಲಿ ಭಗವಂತನೂ ತನ್ನ ಸ್ವರೂಪವನ್ನು ಮರೆತು ಅಭಿಮಾನ ಕ್ಕೊಳಗಾಗಬಹುದು; ನಾವು ಬಗವದ್ಭಕ್ತರೆಂಬ ಹೆಮ್ಮೆಯಿಂದ ಭಕ್ತರೂ ಅಭಿಮಾನಕ್ಕೊಳಗಾಗಬಹುದು; ಆದರೆ ಸದಾ ಜಾಗರೂಕರಾಗಿದ್ದು ಈಶ್ವರ ಸ್ವರೂಪ ಚಿಂತನಮಗ್ನರಾದ ಸತ್ಪುರುಷರು ಮಾತ್ರ ಅಭಿಮಾನಕ್ಕೆ ಒಳಗಾಗುವದಿಲ್ಲ. ಅಂಥವರು ಪ್ರಸಂಗವಶಾತ್ ಅಭಿಮಾನಕ್ಕೊಳಗಾದಂತೆ ತೋರಿದರೂ, ಅದರಿಂದ ಜಗತ್ತಿನ ಕಲ್ಯಾಣವೇ ಆಗುವದು. ಇದಕ್ಕೆ ನಾರದ-ಭೃಗುಋಷಿಗಳೇ ಉದಾಹರಣವಾಗಿರುವರು. ಪದ್ಮಾವತಿ, ಆಕಾಶರಾಜ ಮೊದಲಾದ ಭಕ್ತರ ಕಾಮನಾಪೂರ್ತಿಗಾಗಿ ಭಗವಂತನು ಅವತಾರ ಮಾಡುವದು ಅವಶ್ಯವಾಗಿರಲು, ಭಗವಂತನಿಗೆ ಆ ಮಾತಿನ ಎಚ್ಚರವನ್ನೂ; ಆ ಮಾತು ನಡಿಸಲಿಕ್ಕೆ ಆತನಿಗೆ ತಕ್ಕ ಪ್ರಸಂಗವನ್ನೂ ಒದಗಿಸಿ ಕೊಡುವದಕ್ಕೆ ಇವರಿಬ್ಬರು ಸತ್ಪುರುಷರೇ ಕಾರಣರೆಂಬದನ್ನು ವಿಚಾರದಿಂದ ಅರಿತುಕೊಳ್ಳಬಹುದು. ಶ್ರೀ ವಿಷ್ಣುವು ಭಕ್ತಶ್ರೇಷ್ಠಳಾದ ಲಕ್ಷ್ಮಿಯ ಸಹವಾಸದ ಆನಂದದಲ್ಲಿ ನಿದ್ರಾಸುಖಲೋಲುಪನಾಗಿರಲು, ಆತನ ಈ ಮೋಹಪರವಶತೆಗೆ ಸಿಟ್ಟಾಗಿ, ಭೃಗುಋಷಿಗಳು ಆತನ ವಕ್ಷಸ್ಥಳಕ್ಕೆ ಕಾಲಿನಿಂದ ಒದ್ದರು. ಅದರಿಂದ ಶ್ರೀಹರಿಯು ಜಾಗರೂಕನಾಗಿ ತನ್ನ ಶುದ್ಧ ಸ್ವರೂಪ ಜ್ಞಾನವುಳ್ಳ

ಭೃಗುಋಷಿಗಳನ್ನು ಮನ್ನಿಸಿದನು. ಅದನ್ನು ನೋಡಿ ಲಕ್ಷ್ಮೀದೇವಿಯು ತನ್ನ ಅಪಮಾನವಾಯಿತೆಂಬ ಅಭಿಮಾನದಿಂದ ಭಗವಂತನನ್ನು ತೊಲಗಿಹೋದಳು. ಆಗ ಏಕಾಕಿಯಾದ ಭಗವಂತನು ಭೂಲೋಕದಲ್ಲಿ ಅವತರಿಸಿ ಪದ್ಮಾವತಿಯ ಪಾಣಿಗ್ರಹಣಮಾಡಿ, ಆಕಾಶರಾಜನನ್ನು ಉದ್ಧರಿಸಿದನು. ಲಕ್ಷ್ಮಿಯು ತೊಲಗಿ ಹೋಗದಿದ್ದರೆ, ಪದ್ಮಾವತಿಯ ಪಾಣಿಗ್ರಹಣಕ್ಕೆ ಭಗವಂತನಿಗೆ ಅವಸರವೇ ದೊರೆಯುತ್ತಿದ್ದಿಲ್ಲ ತನಗೆ, ಅಥವಾ ತನ್ನ ಭಕ್ತರಿಗೆ ಆದ ಸತ್ಪುರುಷರ ಶಾಪದ ಮೂಲಕವಾಗಿಯೇ ಭಗವದವತಾರಗಳು ಆಗುತ್ತ ಬಂದಿರುವವೆಂಬದು ಗೊತ್ತಾಗಬಹುದು; ಆದ್ದರಿಂದ ಈಶ್ವರ ಸ್ವರೂಪವನ್ನರಿತು ಸದಾ ಆ ಸ್ವರೂಪ ಚಿಂತನದ ಆನಂದದಲ್ಲಿ ಮಗ್ನರಾಗಿದ್ದ ಸತ್ಪುರುಷರ ಯೋಗ್ಯತೆಯು ಬಹುದೊಡ್ಡದಾದ್ದರಿಂದಲೇ ದೇವರು ಕೂಡ ಸತ್ಪುರುಷರನ್ನು ಮನ್ನಿಸಿರುವನು.

ಮಾಯೆಗೆ ಸಿಲುಕಿದ ಸತ್ಪುರುಷರು ಈಶ್ವರನ ಮಾಯಾರಹಿತವಾದ ಶುದ್ಧ ಸ್ವರೂಪವನ್ನೂ, ಮಾಯಾಯುಕ್ತವಾದ ಈಶ್ವರನ ಸಗುಣರೂಪವನ್ನೂ ಅರಿಯಲು ಸಮರ್ಥರಾದದ್ದರಿಂದ, ಅವರು ಈಶ್ವರೀ ವ್ಯಾಪಾರಗಳಿಗೆ ಸಹಾಯಕರಾಗುತ್ತಲಿರುವರಲ್ಲದೆ “ ಮಮಮಾಯಾ ದುರತ್ಯಯಾ ” ಎಂಬಂತೆ, ಈಶ್ವರ ನಿರ್ಮಿತವಾದ ಮಾಯೆಯನ್ನು ದಾಟುವದು ಈಶ್ವರನಿಗೂ ಅಶಕ್ಯವಾಗಿರಲು, ಸತ್ಪುರುಷರು ಔಪಚಾರಿಕವಾಗಿಯೇ ಆಗಲೊಲ್ಲದೇಕೆ, ಈಶ್ವರನನ್ನು ಮಾಯೋಪಾಧಿಯಿಂದ ಜಾಗ್ರತಗೊಳಿಸಲು ಕಾರಣರಾಗುವರು. ಇದಕ್ಕೆ ವಶಿಷ್ಠ-ಸಾಂದೀಪರು ಅವತಾರಿಕರಾದ ಶ್ರೀರಾಮ-ಶ್ರೀಕೃಷ್ಣರನ್ನು ತಮ್ಮ ಬೋಧದಿಂದ ಜಾಗ್ರತಗೊಳಿಸಿದ್ದು ಉದಾಹರಣವಾಗಿದೆ. ಸತ್ಪುರುಷರಿಂದ ಶಾಪವಾದರೂ ಅನುಗ್ರಹವಾದರೂ ಅನುಗ್ರಹವೇ, ಎಂದು ತಿಳಿಯತಕ್ಕದ್ದು. ಗೌತಮರ ಶಾಪವೇ ಅಹಲ್ಯೆಯ ಉದ್ಧಾರಕ್ಕೆ ಕಾರಣವಾಯಿತೆಂಬದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಮುಖ್ಯ ಮಾತು ಮನುಷ್ಯನಿಗೆ ಸತ್ಪುರುಷರ ಸಮಾಗಮವಾಗಲೇಬೇಕು. ಸತ್ಸಮಾಗಮದಿಂದಲೇ ಅಭಿಮಾನದ ನಾಶವಾಗಿ ಸದ್ವಸ್ತುವಿನ ದರ್ಶನವಾಗುವದು. ತೋಂಡಮಾನನಿಗೆ, ನಾನು ಮಹಾಭಗವದ್ಭಕ್ತನೆಂಬ ಅಭಿಮಾನವಿತ್ತು; ಅದರಿಂದಲೇ ಆತನಿಗೆ ಶ್ರೀನಿವಾಸನ ಸ್ವರೂಪ ಜ್ಞಾನವಾಗಲಿಲ್ಲ. ತಾನು ಶ್ರೀನಿವಾಸನಿಗೆ ಹಲವು ಅನುಕೂಲತೆಗಳನ್ನು ಮಾಡಿಕೊಡುವೆನೆಂತಲೂ, ತನ್ನ ವೈಭವದ ಪೂಜೆಗೆ ಪ್ರಸನ್ನನಾಗಿ ಶ್ರೀನಿವಾಸನು ತನ್ನನ್ನು ಅನುಗ್ರಹಿಸಬೇಕೆಂತಲೂ

ತೋಂಡಮಾನನು ಅಭಿಮಾನಪಡುತ್ತಿದ್ದನು; ಆದರೆ ಶ್ರೀನಿವಾಸನು ತೋಂಡ ಮಾನನನ್ನು ಅನುಗ್ರಹಿಸುವದು ಒತ್ತಟ್ಟಿಗುಳಿದು, ಆ ಭಗವಂತನು ಮೌನ ವನ್ನು ಧರಿಸಿದನು. ಮುಂದೆ ತೋಂಡಮಾನನ ಈ ಅಭಿಮಾನವು, ಆತನು ಭೀಮಕುಲಾಲನೆಂಬ ಸತ್ಪುರುಷನ ನಿರಭಿಮಾನದ ನಿಷ್ಕಾಮಭಕ್ತಿಯನ್ನು ನೋಡಿ ದ್ದರಿಂದ ನಾಶವಾಗಲು, ಜನ್ಮಾಂತರದಲ್ಲಿ ಭಗವತ್ಸ್ವರೂಪವನ್ನು ತಿಳಿಯು ವಂತೆ ಭಗವಂತನು ತೋಂಡಮಾನನನ್ನು ಅನುಗ್ರಹಿಸಿದನು. ಒಟ್ಟಿಗೆ, ಭಗ ವತ್ಸ್ವರೂಪಜ್ಞಾನದಿಂದ ಶಾಶ್ವತವಾದ ಶಾಂತಿಯನ್ನು ಪಡೆಯಲಿಚ್ಛಿಸುವವರು, ಸತ್ಸಮಾಗಮದಿಂದ ಅಭಿಮಾನವನ್ನು ತ್ಯಜಿಸಿ, ನಿಷ್ಕಾಮರಾಗಿ ಭೀಮಕುಲಾಲನಂತೆ ದೇವರಿಗೆ ಶರಣುಹೋಗತಕ್ಕದ್ದು. ಪ್ರತ್ಯಕ್ಷ ಭಗವಂತನು ಭೃಗುಋಷಿಗಳಿಂದಾದ ಅವಮಾನವನ್ನು ಸಹಿಸಿ ಅವರ ಪ್ರಸನ್ನತೆ ಪಡೆದದ್ದನ್ನೂ, ತನ್ನ ಪ್ರಿಯಪತ್ನಿಯು ಮಾತನ್ನು ಧಿಕ್ಕರಿಸಿದ ಪರಮಾತ್ಮನು, ಶುಕಾಚಾರ್ಯರ ಮಾತಿನಂತೆ ತೋಂಡ ಮಾನನೊಡನೆ ಒಡಂಬಡಿಕೆ ಮಾಡಿಕೊಂಡದ್ದನ್ನೂ ಮನಸ್ಸಿನಲ್ಲಿ ತಂದು, ನಾವು ಸತ್ಪುರುಷರ ಮಹಿಮೆಯನ್ನರಿತು, ಪ್ರಯತ್ನಪೂರ್ವಕ ಅವರ ಸಮಾಗಮವನ್ನು ಪಡೆದು ಧನ್ಯರಾಗತಕ್ಕದ್ದೆಂಬ ಮಾತು, ವೇಂಕಟೇಶಮಾಹಾತ್ಮ್ಯದಿಂದ ತಿಳಿಯ ಬಹುದಾಗಿದೆ.

ಸದಾ ಈಶ್ವರಸ್ವರೂಪ ಚಿಂತನಾನಂದಮಗ್ನರಾದ ಸತ್ಪುರುಷರ ಮಹಾ ಮಹಿಮೆಯನ್ನು ಕುರಿತು ಇನ್ನೆರಡು ಮಾತುಗಳನ್ನು ಬರೆಯುವದು ಅಪ್ರಶಸ್ತ ವಾಗದು. ಇಂಥ ಮಹಾತ್ಮರ ಯೋಗ್ಯತೆಯು ಅಭಿಮಾನಿಗಳಾದ ಭಗವದ್ಭಕ್ತರ ಯೋಗ್ಯತೆಗಿಂತ, ಅದೇಕೆ ಒಮ್ಮೊಮ್ಮೆ ಭಗವದಿಚ್ಛೆಯಂತೆ ಪ್ರತ್ಯಕ್ಷ ಭಗವಂತನ ಯೋಗ್ಯತೆಗಿಂತಲೂ ಅಧಿಕವಾಗುವದು. ಭಗವಂತನು ಭಕ್ತಾಧೀನನಾದ್ದರಿಂದ ಆತನಿಗೆ ಕರ್ತವ್ಯ ಬುದ್ಧಿಯು ಭಗವದ್ಭಕ್ತರ ಸೇವದಿಂದಲೇ ಹುಟ್ಟಬೇಕಾಗುತ್ತದೆ. ಭಕ್ತರಲ್ಲಿಯೂ—ಅವರ ಯೋಗದಿಂದ ಭಗವಂತನಲ್ಲಿಯೂ, ಒಮ್ಮೊಮ್ಮೆ ಅಭಿ ಮಾನವೂ—ಮೋಹವೂ ಉತ್ಪನ್ನವಾಗುತ್ತವೆ. ಭಗವಂತನು ಭಕ್ತಾಧೀನನಾದ್ದ ರಿಂದ ಅಸ್ವತಂತ್ರನಂತೆ ತಾನೂ ಭಕ್ತರ ಹಾಗೆ ಆಗಬೇಕಾಗುತ್ತದೆ. ಆ ಕಾಲ ದಲ್ಲಿ ಅಭಿಮಾನರಹಿತರಾದ, ಅಂದರೆ ಭಗವತ್ಸ್ವರೂಪಚಿಂತನಮಗ್ನರಾದ ತಟಸ್ಥ ವೃತ್ತಿಯ ಭಗವದ್ಭಕ್ತರು, ಅಭಿಮಾನಕ್ಕೊಳಗಾದ ಭಕ್ತರನ್ನೂ, ಅವರ ಆಧೀನ

ನಾದ ಭಗವಂತನನ್ನೂ ಜಾಗ್ರತಗೊಳಿಸಬೇಕಾಗುತ್ತದೆ. ಇದಕ್ಕಾಗಿ ಪೌರಾಣಿಕ ಪ್ರಸಂಗಗಳೊಳಗಿನ ಒಂದು ಪ್ರಸಿದ್ಧ ಉದಾಹರಣವನ್ನು ಕೊಡುವಾ. ವೈಕುಂಠದಲ್ಲಿ ಭಗವಂತನ ದ್ವಾರವನ್ನು ಕಾಯುತ್ತಿದ್ದ ಜಯ-ವಿಜಯರಿಗೆ, ನಾವು ಭಗವಂತನ ದ್ವಾರಪಾಲಕರೆಂಬ ಅಭಿಮಾನವು ಉತ್ಪನ್ನವಾಯಿತು. ಹೀಗಿರುವಾಗ ಸನಕ-ಸನಂದನರು ಭಗವದ್ದರ್ಶನಕ್ಕಾಗಿ ವೈಕುಂಠಕ್ಕೆ ಬಂದು ಭಗವಂತನ ಮಂದಿರವನ್ನು ಪ್ರವೇಶಿಸತೊಡಗಿದರು. ಆಗ ಜಯ-ವಿಜಯರು ಅವರ ಯೋಗ್ಯತೆಯನ್ನರಿಯದೆ ಅಜ್ಞಾನಿಗಳಂತೆ ತಮ್ಮ ಅಧಿಕಾರದ ಹೆಮ್ಮೆಯಿಂದ ಅವರನ್ನು ಪ್ರತಿಬಂಧಿಸಿದರು. ಆಗ ಸನಕ-ಸನಂದನರು ಜಯ-ವಿಜಯರ ಅಭಿಮಾನನಾಶಕ್ಕಾಗಿ ಸಿಟ್ಟಿಗೆದ್ದು—"ನಿಮಗೆ ಭಗವಂತನ ವಿಯೋಗವಾಗಲೆ"ಂದು ಅವರಿಗೆ ಶಾಪಕೊಟ್ಟರು. ಆಗ ಭಗವಂತನು ನಿರಭಿಮಾನಿಗಳಾದ ತನ್ನ ಭಕ್ತಶ್ರೇಷ್ಠರ ಶಾಪವನ್ನು ಸುಳ್ಳುಮಾಡಲಾರದೆ, ಅಭಿಮಾನಾವೃತರಾದ ಜಯ-ವಿಜಯರ ಪಶ್ಚಾತ್ತಾಪದ ಪ್ರಾರ್ಥನೆಯಂತೆ, ಶತ್ರುಭಾವದಿಂದ ತನ್ನೊಡನೆ ಮೂರು ಜನ್ಮಕಾದಿ, ಕಡೆಗೆ ತನ್ನ ಸನ್ನಿಧಿಯನ್ನು ಹೊಂದುವಂತೆ ಅವರನ್ನು ನಿರ್ಬಂಧಿಸಿದನು. ಇದರಿಂದ ಜಯ-ವಿಜಯರು ಹಿರಣ್ಯಕಶಿಪು-ಹಿರಣ್ಯಾಕ್ಷ, ರಾವಣ-ಕುಂಭಕರ್ಣ, ಶಿಶುಪಾಲ-ವಕ್ರದಂತ ಎಂಬ ಮೂರು ಜನ್ಮಗಳಿಂದ ಭಗವಂತನೊಡನೆ ಕಾದಿ, ಅಂದರೆ ವಿರೋಧಭಕ್ತಿಯಿಂದ ಆತನನ್ನು ಆರಾಧಿಸಿ ಶಾಪಮುಕ್ತರಾದರು. ಅವರ ಸಲುವಾಗಿಯೇ ಭಗವಂತನು ವರಾಹ-ನೃಸಿಂಹ, ರಾಮ, ಕೃಷ್ಣ ಎಂಬ ನಾಲ್ಕು ಅವತಾರಗಳನ್ನು ತಾಳಬೇಕಾಯಿತೆಂಬದನ್ನು ಬಹುಜನ ವಾಚಕರು ಅರಿತಿರಬಹುದು.

ಇದೇ ಮಾತು ಅಭಿಮಾನಶಾಲಿಯಾದ ಶೇಷನಿಗೂ ಹತ್ತುತ್ತದೆಂದು ವೇಂಕಟೇಶ ಮಾಹಾತ್ಮ್ಯದಿಂದ ಗೊತ್ತಾಗುವದು. ಶೇಷನು ತಾನು ಭಗವಂತನ ನಿಕಟಿ ಸಹವಾಸ ಮಾಡಿದವನೆಂಬ ಅಭಿಮಾನದಿಂದ ದ್ವಾರವನ್ನು ಕಾಯುತ್ತಿರುವಾಗ, ನಿರಭಿಮಾನಿಯಾದ ವಾಯುವನ್ನು ಪ್ರತಿಬಂಧಿಸಿ ಜರಿಯಲು, ಕಡೆಗೆ ಭಗವತ್ಸಂಕೇತದಂತೆ ವಾಯುವು, ಶೇಷನಿಂದ ಬಲವಾಗಿ ಸುತ್ತಲ್ಪಟ್ಟ ಆನಂದಾದ್ರಿಯನ್ನು ಕಿತ್ತು ಒಗೆದು ಶೇಷನ ಅಭಿಮಾನವನ್ನು ದೂರಮಾಡಬೇಕಾಯಿತು. ಶಿಶುವಾತ್ಸಲ್ಯವುಳ್ಳ ತಾಯಿ-ತಂದೆಗಳು ಒಮ್ಮೊಮ್ಮೆ ಶಿಶುಗಳೊಡನೆ ಕ್ರೀಡಿಸುವಾಗ ತಮ್ಮನ್ನು ತಾವು ಮರೆಯುವಂತೆ, ಭಕ್ತರಮೇಲಿನ ಅನಿರ್ವಾಚ್ಯವಾದ ವಾತ್ಸಲ್ಯದಿಂದ ಭಗ

ವಂತನು ಭಕ್ತರೊಡನೆ ರಮಿಸುವಾಗ ತನ್ನನ್ನು ತಾನು ಮರೆಯುವದುಂಟು. ಇದಕ್ಕೆ ಭಕ್ತಶ್ರೇಷ್ಠಳಾದ ಲಕ್ಷ್ಮೀದೇವಿಯೊಡನೆ ಭಗವಂತನು ರಮಮಾಣನಾಗಿ ತನ್ನ ಸ್ವರೂಪವನ್ನು ಮರೆತದ್ದೇ ಸಾಕ್ಷಿಯು. ಇದನ್ನು ಭಗವತ್ಸ್ವರೂಪ ಚಿಂತನ ಮಗ್ನರಾದ ನಾರದರು ಅರಿತು, ಭಗವಂತನನ್ನು ಜಾಗ್ರತಗೊಳಿಸುವದಕ್ಕಾಗಿ ಭೃಗುಋಷಿಗಳನ್ನು ವೈಕುಂಠಕ್ಕೆ ಕಳಿಸಿದರು. ಭೃಗುಋಷಿಗಳು ಭಗವಂತನ, ಮೋಹಪರವಶತೆಯನ್ನು ನೋಡಿ ಭಗವನ್ಮಾಯೆಯಿಂದ ತಾವೂ ಮೋಹಪರವಶ ರಾಗಿ ಸಿಟ್ಟಿನಿಂದ ಭಗವಂತನ ಎದೆಗೆ ಒದ್ದರು; ಕೂಡಲೆ ಭಕ್ತವತ್ಸಲನಾದ ಪರ ಮಾತ್ಮನು ಜಾಗರೂಕನಾಗಿ ಪಶ್ಚಾತ್ತಾಪ ಪಟ್ಟವನಂತೆ ಋಷಿಗಳ ಪಾದಸೇವೆ ಮಾಡಲು, ಭೃಗುಋಷಿಗಳೂ ಭಗವತ್ಸಾನ್ನಿಧ್ಯದಿಂದ ಜಾಗರೂಕರಾಗಿ ಪಶ್ಚಾತ್ತಾಪ ಪಟ್ಟರು. ಭಗವಂತನು ತಾನು ರಾಮಾವತಾರದಲ್ಲಿ ವೇದವತಿಗೆ ವಚನ ಕೊಟ್ಟಂತೆ, ಪದ್ಮಾವತಿಯ ರೂಪದಿಂದ ಅವತರಿಸಿದ್ದ ಆಕೆಯನ್ನು ಲಗ್ನವಾಗ ಬೇಕಾಗಿರಲು, ತಾನು ಒಬ್ಬನೇ ಭೂಲೋಕದಲ್ಲಿ ಅವತರಿಸಬೇಕಾಯಿತು. ಈ ಪ್ರಸಂಗದಲ್ಲಿ ಲಕ್ಷ್ಮೀದೇವಿಯು ತನ್ನನ್ನು ಅಗಲಿ ಹೋಗುವದು ಅವಶ್ಯವಾದದ್ದರಿಂದ, ಆ ಲೋಕಮಾತೆಯು ಭಗವನ್ಮಾಯೆಯಿಂದ ಮೋಹಿತಳಾಗಿ, ಭಗವಂತ ನನ್ನು ತನ್ನ ಪತಿಯೆಂದು ಭಾವಿಸಿ, ಒಬ್ಬ ಕ್ಷುದ್ರಬ್ರಾಹ್ಮಣನ ಪಾದಾಘಾತ ದಿಂದ ತನ್ನ ಪತಿಯು ಅಪಮಾನಿತನಾದನೆಂಬ ಅಭಿಮಾನದಿಂದಲೂ, ತನ್ನ ವಾಸ ಸ್ಥಳವಾದ ಭಗವಂತನ ವಕ್ಷಸ್ಥಳವು ಅಪವಿತ್ರವಾಯಿತೆಂಬ ದುರಾಗ್ರಹದಿಂದಲೂ ಭಗವಂತನನ್ನು ಅಗಲಿ ಕೊಲ್ಲಾಪುರಕ್ಕೆ ಹೋದಳು! ಶಿಶುವಾತ್ಸಲ್ಯವುಳ್ಳ ತಾಯಿ–ತಂದೆಗಳು ಶಿಶುಗಳೊಡನೆ ಕ್ರೀಡಿಸುವಾಗ ತಾವೂ ಅಜ್ಞಾನಿಗಳಾಗುವಂತೆ ಶ್ರೀ ಲಕ್ಷ್ಮೀ–ನಾರಾಯಣರು ಹೀಗೆ ನಟಿಸಿರುವದನ್ನು ನೋಡಿದರೆ, ಭಗವಂತನ ಭಕ್ತ ವಾತ್ಸಲ್ಯಕ್ಕಾಗಿ ಕಂಠವು ಸದ್ಗದಿತವಾಗಿ, ಆತನ ಕ್ರೀಡೆಯೊಳಗಿನ ಪ್ರಧಾನ ಪಾತ್ರಗಳಾದ ಸತ್ಪುರುಷರ ಮಹಾಮಹಿಮೆಯಿಂದ ಮತಿಯು ಕುಂಠಿತವಾಗುತ್ತದೆ!

ಪದ್ಮಾವತಿಯ ರೂಪದಿಂದ ಅವತರಿಸಿರುವ ವೇದವತಿಯ ಪಾಣಿಗ್ರಹಣಕ್ಕಾಗಿ ಭಗವಂತನು ಅವತರಿಸಬೇಕಾಗಿರುವದೆಂಬದನ್ನು ನಾರದರೇ ತಿಳಿದರು. ಆತನ ಅವತಾರಕ್ಕೆ ಭೃಗುಋಷಿಗಳ ದ್ವಾರದಿಂದ ಆಸ್ಪದವನ್ನು ನಾರದರೇ ಮಾಡಿ ಕೊಟ್ಟರು, ಅವತಾರಿಕರಾದ ಪದ್ಮಾವತೀ–ಶ್ರೀನಿವಾಸರಿಗೆ ಅವರ ಅವತಾರದ ಉದ್ದೇಶವನ್ನು ನಾರದರೇ ನೆನಪು ಮಾಡಿಕೊಟ್ಟರು. ಇದೆಲ್ಲವನ್ನು ಮನಸ್ಸಿನಲ್ಲಿ

ತಂದರೆ ಯಾವತ್ತು ಜಗದ್ವ್ಯವಹಾರಕ್ಕೆ ಅಥವಾ ಭಗವಂತನ ಲೀಲೆಗೆ ಅಥವಾ ಮಾಯೆಯ ಪ್ರಕಟೀಕರಣಕ್ಕೆ ಭಗವದ್ಭಕ್ತರ ಅಭಿಮಾನ-ನಿರಭಿಮಾನ ಸ್ಥಿತಿಗಳೇ ಕಾರಣವಾಗುತ್ತವೆಂಬ ವಿಚಾರವು ಮನಸ್ಸಿನಲ್ಲಿ ಬರುತ್ತದೆ. ಅಂದಬಳಿಕ ಭಗವತ್ಸ್ವರೂಪವನ್ನು ತಿಳಿದ ಭಗವದ್ಭಕ್ತರು, ಅಭಿಮಾನಿಗಳೇ ಆಗಿರಲಿ ನಿರಭಿಮಾನಿಗಳೇ ಆಗಿರಲಿ ಅವರ ಯೋಗ್ಯತೆಯನ್ನು ತಿಳಿಯಲು, ಭಗವತ್ಸ್ವರೂಪ ಜ್ಞಾನವಿಲ್ಲದ ಸತ್ಸಮಾಗಮಹೀನರಾದ ನಾವು ಹ್ಯಾಗೆ ಸಮರ್ಥರಾಗುವೆವು ? ಗೌತಮರು ಅಹಲ್ಯೆಗೆ ಶಾಪವನ್ನು ಕೊಟ್ಟಂತೆ ಭಗವದ್ಭಕ್ತರು ಅಭಿಮಾನಿಗಳಾಗಿ ನಮಗೆ ಶಾಪ ಕೊಟ್ಟರೂ ಅನುಗ್ರಹವೇ ! ಅವರು ನಿರಭಿಮಾನಿಗಳಾಗಿ ಸದ್ಗುರು ರೂಪದಿಂದ ನಮಗೆ ಈಶ್ವರ ಸ್ವರೂಪಜ್ಞಾನವಮಾಡಿ ಕೊಟ್ಟು ನಮ್ಮನ್ನು ಅನುಗ್ರಹಿಸಿದರೂ ಅನುಗ್ರಹವೇ ! ಭಗವಂತನು ನಿರ್ಗುಣನೂ-ಸಗುಣನೂ ಆಗಿರುವಂತೆ, ಭಗವದ್ಭಕ್ತರು ಸ್ವಾಭಿಮಾನಿಗಳೂ-ನಿರಭಿಮಾನಿಗಳೂ ಆಗಿರುತ್ತಾರೆಂದು ಹೇಳಬಹುದು ಏನೇ ಆಗಲಿ, ನಾವು ಸತ್ಸಮಾಗಮವನ್ನು ಪಡೆಯಬೇಕು. ಸತ್ಸಮಾಗಮವನ್ನುಪಡೆಯದವರು ಕೇವಲ ಅಹಂಕಾರಾವೃತರಾಗಿ ಮಾಯಾಮೋಹಕ್ಕೆ ಸಿಕ್ಕು ನಮ್ಮಂತೆ ಸಂಸಾರದಲ್ಲಿ ಬಿದ್ದು ತೊಳಲಾಡುವದು ನಿಶ್ಚಯವು. ಆದ್ದರಿಂದಲೇ ಶ್ರೀಮದಾಚಾರ್ಯರು– "ನಗುರೋರಧಿಕಂ ನಗುರೋರಧಿಕಂ ನಗುರೋರಧಿಕಂ" ಎಂದು ಬಹೂಕ್ತಿಯಿಂದ ಹೇಳಿರುವರು. ಸದ್ಗುರು ಕೃಪೆಯಿಂದಲೇ ನಮಗೆ ಭಗತ್ಸ್ವರೂಪಜ್ಞಾನವಾಗಬೇಕಾಗಿರುವದು. ತಾನು ಕಂಡದ್ದನ್ನು ಮಂದಿಗೆ ತೋರಿಸಬಹುದಾದ್ದರಿಂದ, ದೇವರನ್ನು ಕಂಡ ಸತ್ಪುರುಷರಲ್ಲದೆ, ನಮಗೆ ದೇವರನ್ನು ಬೇರೆ ಯಾರು ತೋರಿಸುವರು ? ಈ ಮಾತನ್ನು ನಾವು ವೇಂಕಟೇಶ ಮಾಹಾತ್ಮ್ಯದಲ್ಲಿ, ಪ್ರತ್ಯಕ್ಷ ಶ್ರೀನಿವಾಸ–ಪದ್ಮಾವತಿ-ಆಕಾಶರಾಜ–ತೋಂಡಮಾನಾದಿಗಳಿಗೆ ಸತ್ಪುರುಷರ ಬೋಧದಿಂದ ಉಂಟಾದ ಜಾಗ್ರತಿಯನ್ನು ಮನಸ್ಸಿನಲ್ಲಿ ತಂದು ಮನದಟ್ಟಾಗಿ ತಿಳಕೊಳ್ಳಬಹುದು.

### ೪. ವೇಂಕಟೇಶಮಾಹಾತ್ಮ್ಯವು ವ್ಯಾಸನಿರ್ಮಿತವಾದದ್ದೋ ?

ವೇಂಕಟೇಶ ಮಾಹಾತ್ಮ್ಯದೊಳಗಿನ ವರ್ಣನೆಯ ಶೈಲಿಯನ್ನೂ, ಅವರಲ್ಲಿ ವರ್ಣಿಸಿರುವ ವಿಷಯವನ್ನೂ ನೋಡಿ, ಕೆಲವರ ಮನಸ್ಸಿನಲ್ಲಿ–"ಭವಿಷ್ಯೋತ್ತರ ಪುರಾಣದೊಳಗಿನದೆಂದು ಹೇಳಿರುವ ಈ ಪುರಾಣವು ವ್ಯಾಸನಿರ್ಮಿತವಾಗಿರಬಹುದೋ"

ಎಂಬ ಸಂಶಯುವು ಬರಬಹುದು. ವ್ಯಾಸರ ಪುರಾಣದ ಉದ್ದೇಶಗಳು.-ಈಶ್ವರ ಭಕ್ತಿಯ ಅಭಿವೃದ್ಧಿ, ಐಹಿಕ ಸುಖಪ್ರಾಪ್ತಿ, ಪಾರಮಾರ್ಥಿಕ ವಿಷಯಜ್ಞಾನ ಇವು ಮೂರು ಇರುತ್ತವೆ. ಇವು ವೇಂಕಟೇಶಮಾಹಾತ್ಮ್ಯದಿಂದ ಉತ್ತಮ ರೀತಿಯಿಂದ ಸಾಧಿಸುವಂತೆ ಇರುವದರಿಂದ ಇದನ್ನು ವ್ಯಾಸನಿರ್ಮಿತವೆಂತಲೇ ಹೇಳಬೇಕಾಗುವದು. ದೇಶಕಾಲಭೇದದಿಂದ ಜನರ ಆಚಾರ ವಿಚಾರಗಳು ಭಿನ್ನ ವಾಗುವದರಿಂದ, ಅವಕ್ಕನುಸರಿಸಿ ಭಗವದವತಾರಗಳು ಭಿನ್ನವಾಗಿಯೇ ಆಗುತ್ತವೆ; ಅಂದಬಳಿಕ ಆಧುನಿಕ ಅವತಾರವಾದ ಶ್ರೀನಿವಾಸನ ಮಾಹಾತ್ಮ್ಯದಲ್ಲಿ, ಆಧುನಿಕವಾದ ಆಚಾರಗಳು ವರ್ಣಿಸಲ್ಪಟ್ಟದ್ದು ಅಯಥಾರ್ಥವಲ್ಲ. ವ್ಯಾಸರ ವ್ಯಾಸತ್ವವೂ, ಗೌರವವೂ ಅವರ ಜಡದೇಹಕ್ಕೆ ಸಂಬಂಧಿಸಿರದೆ, ಅವರ ಮಹಾ ಮಹಿಮೆಗೂ, ಸದ್ವೃತ್ತಿಗೂ, ಪರೋಪಕಾರಬುದ್ಧಿಗೂ ಸಂಬಂಧಿಸಿರುವದರಿಂದ, ವ್ಯಾಸರಂತೆ ಮಹಾ ಮಹಿಮೆಯೂ, ಸದ್ವೃತ್ತಿಯೂ, ಪರೋಪಕಾರ ಬುದ್ಧಿಯೂ ಉಳ್ಳವರನ್ನೆಲ್ಲ ವ್ಯಾಸರೆಂತಲೇ ತಿಳಿಯಬೇಕಾಗುವದು. ಭಗದವತಾರಗಳಂತೆ ಸತ್ಪುರುಷರ ಅವತಾರಗಳೂ ಆಗುತ್ತಿರುವವು. ಕೇವಲ ಜಡ ದೇಹಕ್ಕೆ ಗೌರವ ಕೊಡುವ ಕ್ಷುದ್ರವೃತ್ತಿಯು ಮಾನ್ಯವಾಗಿದ್ದರೆ, ಈವೊತ್ತಿನವರೆಗೆ ಸಾಗಿಬಂದಿರುವ ಅವತಾರಪರಂಪರೆಯನ್ನೂ, ಸದ್ಗುರು ಪರಂಪರೆಯನ್ನೂ ಒಪ್ಪಿಕೊಳ್ಳಲಿಕ್ಕೆ ಮಾರ್ಗವಿಲ್ಲದಾಗುತ್ತಿತ್ತು. ವಶಿಷ್ಠಾದಿ ಬ್ರಹ್ಮಋಷಿಗಳೂ, ನಾರದಾದಿ ದೇವರ್ಷಿಗಳೂ ಅನಾದಿಯಿಂದ ಇದ್ದರೆಂದು ಪುರಾಣದಲ್ಲಿ ಪ್ರಸಂಗವಶಾತ್ ವರ್ಣಿಸಿರುವದರ ರಹಸ್ಯವು, ಅವರ ಜಡದೇಹಕ್ಕೆ ಸಂಬಂಧಿಸಿರದೆ, ಅವರ ವೃತ್ತಿಗೆ ಸಂಬಂಧಿಸಿರುತ್ತದೆಂದು ತೋರುತ್ತದೆ; ಆದ್ದರಿಂದ ವೇಂಕಟೇಶ ಮಾಹಾತ್ಮ್ಯವು ಆಧುನಿಕವಾಗಿ ತೋರಿದರೂ ಆಧುನಿಕನಾದ ಶ್ರೀನಿವಾಸನು ಅವತಾರಿಕನಾಗಿರುವಂತೆ ಆತನ ಮಾಹಾತ್ಮ್ಯವಾದರೂ ವ್ಯಾಸನಿರ್ಮಿತವಾಗಿಯೇ ಇರುತ್ತದೆ. ಲೋಕೋಪಕಾರಾರ್ಥವಾಗಿ ಕಾಲಕಾಲಕ್ಕೆ ಅವತರಿಸುವದು ವ್ಯಾಸರಿಗೆ ಅಶಕ್ಯ ವಲ್ಲ. ಮೇಲಾಗಿ ಇಂಥ ಬಗಿಹರಿಯದ ವಾದಕ್ಕೆ ಮನಸ್ಸು ಮಾಡಿ ಪುರಾಣಗಳ ವಿಷಯವಾಗಿ ಅಶ್ರದ್ಧೆಯನ್ನು ತಾಳುವದು ನಮಗೆ ಹಿತಕರವಾಗಿ ತೋರುವದಿಲ್ಲ. ಈಶ್ವರ ದರ್ಶನವನ್ನು ಪಡೆದ ನಿರಭಿಮಾನಿಗಳಾದ ಮಹಾತ್ಮರು, ತಾವು ರಚಿಸಿದ ಪುರಾಣಗಳ ವಿಷಯವಾಗಿ ಅಭಿಮಾನ ಪಡದೆ, ಅದು ಲೋಕಾದರಕ್ಕೆ ಪಾತ್ರವಾಗಿ ಲೋಕಕಲ್ಯಾಣಕರವಾಗಲೆಂದು ಅದನ್ನು ವ್ಯಾಸ ನಿರ್ಮಿತವೆಂದು ಹೇಳ

ದರೂ ಹೇಳುತ್ತಿರಬಹುದು. ನಮಗೆ ಊಟಕ್ಕೆ ನಮ್ಮವರು ಯಾರು ಬಡಿಸಿದ ರೇನು ? ನಾವು ಸುಖದಿಂದ ಉಂಡು ತೃಪ್ತಿಯನ್ನು ಪಡೆದರಾಯಿತು. ಹಸಿದ ವರಿಗೆ ಉಣ್ಣುವದು ಮುಖ್ಯ ಕೆಲಸವಲ್ಲದೆ, ಅಡಿಗೆ ಮಾಡಿದವರ ಇತಿಹಾಸಕ್ಕೂ, ಅವರೇ ಅಡಿಗೆ ಮಾಡಿರಬಹುದೋ ಎಂಬ ಚರ್ಚೆಗೂ ಮುಖ್ಯತ್ವವನ್ನು ಕೊಟ್ಟು, ಊಟವನ್ನು ಮಾಡದಿರುವದು ತೃಪ್ತಿಯ ದೃಷ್ಟಿಯಿಂದ ಹಿತಕರವಲ್ಲ. ಅಡಿಗೆಯು ಪರಿಶುದ್ಧವಾಗಿರುತ್ತದೋ ಎಂಬದನ್ನು ನೋಡುವಂತೆ, ಪುರಾಣವು ರಹಸ್ಯಪೂರ್ಣವಾಗಿರುತ್ತದೋ ಎಂಬದನ್ನಷ್ಟು ನೋಡಿದರಾಯಿತು. ವೈದಿಕ ಧರ್ಮ ಸಿದ್ಧಾಂತದಂತೆ ಜಗತ್ತೇ ಗುರುಸ್ವರೂಪವೆಂತಲೂ, ಈಶ್ವರ ಸ್ವರೂಪವೆಂತಲೂ ಭಾವಿಸುವ ಪ್ರಸಂಗವಿರಲು. ಇದು ಈಶ್ವರನ ಅವತಾರವಾಗಿರಬಹುದೋ ? ಈ ಪುರಾಣವು ವ್ಯಾಸನಿರ್ಮಿತವಾಗಿರಬಹುದೋ ಎಂದು ಸಂಶಯ ಪಡುವದು ಧರ್ಮ ಶ್ರದ್ಧೆಯ ಶೈಥಿಲ್ಯವನ್ನು ತೋರಿಸುತ್ತದೆಂದು ಹೇಳಬೇಕಾಗುವದು. ವ್ಯಾಸರು ಇಚ್ಛಾಮಾತ್ರದಿಂದ ಒಬ್ಬರ ಹೃದಯದಲ್ಲಿ ಪ್ರವೇಶಿಸಿ ಪುರಾಣವನ್ನು ರಚಿಸಲಿಕ್ಕೂ, ಪ್ರಸಂಗ ವಶಾತ್ ಬೇಕಾದ ದೇಹವನ್ನು ಧರಿಸಲಿಕ್ಕೂ ಸಮರ್ಥರಾಗಿರಲು, ನಮ್ಮ ಈ ಸಂಶಯವು ಹೇಗೆ ನಿಲ್ಲುವದು ? ಪುರಾಣಗಳಲ್ಲಿ ಪ್ರತಿಪಾದಿಸಿರುವ ಸನ್ಮಾರ್ಗದಂತೆ ನಡೆಯುವದು ಬೇಡಾಗಲು, "ಪುರಾಣಗಳೇ ಸುಳ್ಳು, ಅವನ್ನು ವ್ಯಾಸರು ನಿರ್ಮಿಸಿದರೆಂಬದು ಅಬದ್ಧ," ಎಂದು ಪ್ರತಿಪಾದಿಸುತ್ತ ಮನ ಬಂದಂತೆ ನಡೆಯುವ ಲಂಡತನವು ಈ ಕಲಿಯುಗದಲ್ಲಿ ಹೆಚ್ಚುತ್ತ ಹೋಗಿರುವದು ಸೋಜಿಗವಲ್ಲ.

೫. ಈಶ್ವರ ಸರ್ವೋತ್ತಮತ್ವದ ದೃಷ್ಟಿಯಿಂದ ಹುಟ್ಟಬಹುದಾದ ವೈಷಮ್ಯದ ದೋಷಗಳು ವೇಂಕಟೇಶ ಮಾಹಾತ್ಮ್ಯವನ್ನು ಕೇಳುವವರಿಗೆ ದೇವರ ಸರ್ವೋತ್ತಮತ್ವದ ದೃಷ್ಟಿಯಿಂದ ವೈಷಮ್ಯವು ಉತ್ಪನ್ನವಾಗುವ ಸಂಭವವಿರುತ್ತದೆ. ಭೃಗುಋಷಿಗಳು ವಿಷ್ಣುವಿನ ಸರ್ವೋತ್ತಮತ್ವವನ್ನು ಸ್ಥಾಪಿಸಿ, ಶಂಕರನು ಶ್ರೀನಿವಾಸನ ಮೊಮ್ಮಗನೆಂದು ಹೇಳಿದ್ದೂ, ಶ್ರೀನಿವಾಸನು ತನ್ನ ಮಗನಾದ ಬ್ರಹ್ಮನ ಕೈಯಿಂದ ಮಹತ್ವದ ಕಾರ್ಯಗಳನ್ನು ಮಾಡಿಸಿದ್ದೂ, ಎಲ್ಲ ದೇವತೆಗಳು ಲಗ್ನಕ್ಕೆ ಬಂದಿದ್ದು ಲಕ್ಷ್ಮಿಯೊಬ್ಬಳು ಬಾರದ್ದರಿಂದ ಶೋಭೆಯು ಬಂದಿರುವದಿಲ್ಲೆಂದು ಶ್ರೀನಿವಾಸನು ಹೇಳಿದ್ದೂ, ಎಲ್ಲ ದೇವತೆಗಳು ಶ್ರೀನಿವಾಸನ ಲಗ್ನದಲ್ಲಿ

ಮುಡಿದರೆಂದು ಹೇಳಿದ್ದೂ, ಶ್ರೀನಿವಾಸನು ಶಂಕರನಿಗೆ ಹುಡುಗನೆಂದು ಸಿಟ್ಟು ಮಾಡಿದ್ದೂ ಇವೇ ಮೊದಲಾದ ಪ್ರಸಂಗಗಳು ಕೆಲವರ, ವಿಶೇಷವಾಗಿ ಶೈವರ ಮನಸ್ಸಿನ ಅಸಮಾಧಾನಕ್ಕೆ ಕಾರಣವಾಗಬಹುದು; ಆದರೆ ಇಂಥ ಅಜ್ಞಾನಕ್ಕೆ ಗುರಿಯಾಗಿ ಕ್ಷುದ್ರತನವನ್ನು ವ್ಯಕ್ತಮಾಡುವದು ವಿವೇಕಿಗಳಾದ ಶೈವರಿಗೆ ಯೋಗ್ಯ ವಲ್ಲ. ವೇಂಕಟೇಶ ಮಾಹಾತ್ಮ್ಯವು ವಿಷ್ಣು ಸರ್ವೋತ್ತಮತ್ವವನ್ನು ಪ್ರತಿಪಾದಿ ಸುವ ಪುರಾಣವೆಂಬದನ್ನು ಲಕ್ಷದಲ್ಲಿಟ್ಟರೆ, ಈ ವೈಷಮ್ಯಕ್ಕೆ ಆಸ್ಪದವು ಉಳಿಯು ಲಿಕ್ಕಿಲ್ಲ. ದೇವರು ಸರ್ವೋತ್ತಮನೆಂದು ಒಪ್ಪಿಕೊಳ್ಳುವ ನಾವು, ಆ ದೇವರು ಸತ್ವಗುಣಾಧಿಕ್ಯದ ವಿಷ್ಣುರೂಪದಿಂದ ಸರ್ವೋತ್ತಮತ್ವವನ್ನು ಪಡೆದರೇನು ? ರಜೋಗುಣಾಧಿಕ್ಯದ ಬ್ರಹ್ಮರೂಪದಿಂದ ಸರ್ವೋತ್ತಮತ್ವವನ್ನು ಪಡೆದರೇನು ? ತಮೋಗುಣಾಧಿಕ್ಯದ ರುದ್ರರೂಪದಿಂದ ಸರ್ವೋತ್ತಮತ್ವವನ್ನು ಪಡೆದರೇನು ? ಮತ್ತೆ ಯಾವ ರೂಪದಿಂದ ಸರ್ವೋತ್ತಮತ್ವವನ್ನು ಪಡೆದರೇನು ? ಸಕ್ಕರೆಯು ಎಲ್ಲಿ ಹೋದರೂ, ಯಾವರೂಪವನ್ನು ಹೊಂದಿದರೂ ಸವಿಯಾಗಿರುವಂತೆ, ದೇವರು ಎಲ್ಲಿ ಹುಟ್ಟಿದರೂ, ಯಾವರೂಪವನ್ನು ಹೊಂದಿದರೂ, ಯಾವ ಗುಣದವನಾ ದರೂ, ಹ್ಯಾಗೆ ನಡೆದರೂ ಸರ್ವೋತ್ತಮನೇ ಆಗಿರುವನು. ನಮಗೆ ಯಾವ ರೂಪದಿಂದ ದೇವರು ಸರ್ವೋತ್ತಮನಾಗಿ ತೋರುವನೋ ಆ ರೂಪದಿಂದ ನಾವು ಆತನನ್ನು ಸರ್ವೋತ್ತಮನೆಂದು ಭಜಿಸಿದರಾಯಿತು. ನಮಗೆ ಸರ್ವೋತ್ತಮ ವಾಗಿ ತೋರಿದ ರೂಪವೇ ಮಂದಿಗೂ ಸರ್ವೋತ್ತಮವಾಗಿ ತೋರಲಿಲ್ಲೆಂಬ ಬಗ್ಗೆ ಆಗ್ರಹ ಪಡುವದೂ, ಮಾತ್ಸರ್ಯವನ್ನು ತಾಳುವದೂ ಕೇವಲ ಅಜ್ಞಾನ ವಲ್ಲವೇ ? ದೇವರ ಸರ್ವೋತ್ತಮತ್ವದಲ್ಲಿ ದೃಷ್ಟಿಯನ್ನಿಟ್ಟು ತಮಗೆ ಸರ್ವೋತ್ತಮ ವಾಗಿ ತೋರುವ ಬೇಕಾದ ರೂಪವನ್ನು ಭಜಿಸುವ ಮಾರ್ಗವು ಸನಾತನವಾದ ವೈದಿಕ ಧರ್ಮದಲ್ಲಿ ನಿಷ್ಕಂಟವಾಗಿರುತ್ತದೆಂಬದನ್ನು ನಾವು ಚೆನ್ನಾಗಿ ಲಕ್ಷದಲ್ಲಿಡ ತಕ್ಕದ್ದು. ಅಂಜುಬುರುಕರಿಗೆ ಅಂಜುಬುರುಕ ದೇವರೂ, ಸಾತ್ವಿಕರಿಗೆ ಸಾತ್ವಿಕ ದೇವರೂ, ರಾಜಸರಿಗೆ ರಾಜಸ ದೇವರೂ, ತಾಮಸರಿಗೆ ತಾಮಸ ದೇವರೂ ಪ್ರಿಯವಾಗುವದು ಅಸ್ವಾಭಾವಿಕವಲ್ಲ. ಜಗತ್ತಿನ ಕಲ್ಯಾಣಕ್ಕಾಗಿ ಬೇಕಾದ ರೂಪವನ್ನು ಧರಿಸಲಿಕ್ಕೂ, ಬೇಕಾದ ಗುಣಗಳನ್ನು ವ್ಯಕ್ತಮಾಡಲಿಕ್ಕೂ, ಬೇಕಾದ ಹಾಗೆ ನಡೆಯಲಿಕ್ಕೂ ದೇವರು ಸಮರ್ಥನಾಗಿರಲು, "ನಮ್ಮ ದೇವರ ಸರ್ವೋತ್ತ ಮತ್ವವನ್ನು ಈ ಪುರಾಣದಲ್ಲಿ ಕಸಕೊಂಡಿರುವದಿಲ್ಲ." ಎಂದು ಅಸಮಾಧಾನ

ಪಡುವದು ಮೂರ್ಖತನವಲ್ಲವೇ ! ಪುರಾಣದಲ್ಲಿ ಯಾವ ದೇವರ ಸರ್ವೋತ್ತಮ ತ್ವವನ್ನು ಪ್ರತಿಪಾದಿಸಿದ್ದರೇನು ? ಆ ಸರ್ವೋತ್ತಮತ್ವವು ಯಥಾರ್ಥವಾಗಿ ಪ್ರತಿ ಪಾದಿಸಿದ್ದನ್ನು ಕೇಳಿ, ಅದರಂತೆಯೇ ತಮ್ಮ ದೇವರ ಪುರಾಣದಲ್ಲಿ ಸರ್ವೋತ್ತಮ ನಿರುವನೆಂದು ತಿಳಿದು ನೆನಿಸಿ ಆನಂದಪರವಶರಾದರಾಯಿತು. ಆಕಾಶರಾಜನೇ ಮೊದಲಾದವರು ಪದ್ಮಾವತಿಯನ್ನು ಶ್ರೀನಿವಾಸನಿಗೆ ಒಪ್ಪಿಸುವಾಗ ಮೋಹದಿಂದ ರೋದನ ಮಾಡುತ್ತಿರಲು, ಶ್ರೀನಿವಾಸನು ತಾನು ಕೃಷ್ಣಾವತಾರದಲ್ಲಿ ಸುಭದ್ರೆ ಯನ್ನು ಅರ್ಜುನನಿಗೆ ಒಪ್ಪಿಸುವ ಪ್ರಸಂಗವನ್ನು ನೆನಿಸಿ ಅತ್ತದ್ದರ ರಹಸ್ಯವನ್ನು ನಾವು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು. ಸಾರಾಂಶ ಜಗತ್ತು ಈಶ್ವರ ಸ್ವರೂ ಪವೆಂಬ ಸನಾತನ ಧರ್ಮದ ಸಿದ್ಧಾಂತವನ್ನು ನೆನಪಿಟ್ಟುಕೊಂಡದ್ದೇ ನಿಜವಿದ್ದರೆ, ದೇವರ ಸರ್ವೋತ್ತಮತ್ವದ ವಿಷಯದ ಬಡಿದಾಟವೇ ಹುಟ್ಟಲಿಕ್ಕಿಲ್ಲೆಂದು ನಮಗೆ ತೋರುತ್ತನೆ.

ಇನ್ನು ಶಂಕರನು ಶ್ರೀನಿವಾಸನ ಮೊಮ್ಮಗನು, ಅಥವಾ ಬ್ರಹ್ಮನ ಮಗನು ಎಂದು ಹೇಳಿದ್ದರಿಂದ ಶಂಕರನ ಯೋಗ್ಯತೆಯು ಕಡಿಮೆಯಾಗುವದೆಂದು ಭಾವಿ ಸುವವರು, ವಿಷ್ಣುವು ಮತ್ಸ್ಯ–ಕೂರ್ಮಾದಿ ತಿರ್ಯಗ್ಜಂತುಗಳ, ಹಾಗೂ ದಶ ರಥ–ವಸುದೇವಾದಿ ಮನುಷ್ಯರ ಮಗನಾಗಿ ಹುಟ್ಟಿದ್ದರಲ್ಲಿ ಎಷ್ಟು ಗೌರವವಿರು ತ್ತದೆಂಬದನ್ನು ವಿಚಾರಿಸಬೇಕು. ವಿಷ್ಣುವು ಮೀನದ ಹೊಟ್ಟೆಯಲ್ಲಿ ಹುಟ್ಟ ಲೊಲ್ಲನೇಕೆ, ಮನುಷ್ಯರ ಹೊಟ್ಟೆಯಲ್ಲಿ ಹುಟ್ಟಲೊಲ್ಲನೇಕೆ; ಆದರೆ ಶಿವನು ಬ್ರಹ್ಮನ ಹೊಟ್ಟೆಯಲ್ಲಿ ಹುಟ್ಟದನೆಂದು ಹೇಳುವದು ಮಾತ್ರ ನಮಗೆ ಸರಿದೋ ರುವದಿಲ್ಲೆಂದು ವಾದಿಸುವ ದುರಭಿಮಾನಿಗಳ ಮುಂದೆ ಮಾತಾಡುವ ಯೋಗ್ಯ ತೆಯು ನಮ್ಮದಲ್ಲ. ಸೃಷ್ಟಿ–ಸ್ಥಿತಿ–ಲಯಗಳ ಕರ್ತನಾದ ದೇವರು ತನ್ನ ಕಾರ್ಯ ಸಾಧನಕ್ಕಾಗಿ ಬೇಕಾದ ಯೋನಿಯಲ್ಲಿ ಹುಟ್ಟಬಹುದು, ಅಯೋನಿಜನಾಗಿ ಪ್ರಕ ಟವಾಗಬಹುದು, ಗುಪ್ತನಾಗಿರಬಹುದು, ವ್ಯಕ್ತನಾಗಿರಬಹುದು, ರಾಮನಂತೆ ಏಕಪತ್ನೀವ್ರತಸ್ಥನಾಗಿರಬಹುದು, ಕೃಷ್ಣನಂತೆ ಬಹುಪತ್ನೀಕನಾಗಿರಬಹುದು. ವೇಂಕಟೇಶನಂತೆ ಜೀನನೂ ಆಶೆಬುರುಕನೂ ಆಗಿರಬಹುದು, ವೀರಭದ್ರನಂತೆ ವೀರಾವೇಶಗೊಂಡವನಾಗಿರಬಹುದು, ಕಪಿಲನಂತೆ ಸತ್ವಮೂರ್ತಿಯಾಗಿರಬ ಹುದು, ಬುದ್ಧನಂತೆ ಅಹಿಂಸಾಧರ್ಮ ಪ್ರವರ್ತಕನಾಗಿರಬಹುದು, ಅಗ್ನಿಯಂತೆ ಸರ್ವ ಭಕ್ಷಕನಾಗಿರಬಹುದು, ಪ್ರಿಯ ವಾಚಕರೇ, ಭಗವಂತನ ಲೀಲೆಗಳನ್ನು

ಕ್ಷುದ್ರರಾದ ನಾವು ಏನೆಂದು ವರ್ಣಿಸೋಣ ? "× × ಯಲ್ಲಿ ವಿಣನ ಹಿಡಿಯುವ ನಮ್ಮಂಥ ಕ್ಷುದ್ರರು, ಅಪಾರವಾದ ಈಶ್ವರೀ ಲೀಲೆಯೆಂಬ ಮಹೋದಧಿಯ ಉದರವನ್ನು ಶೋಧಿಸಲು ಸಮರ್ಥರಾಗಬಹುದೋ ? ಒಮ್ಮೆ ಆತನು ಭಕ್ತ ರಿಂದ ಸೇವೆಯನ್ನು ಸ್ವೀಕರಿಸಿದರೆ, ಮತ್ತೊಮ್ಮೆ ತಾನೇ ಸೇವಕನಾಗಿ ಅರ್ಜು ನನು ಸೇವಿಸಿದಂತೆ ಭಕ್ತರನ್ನೇ ಸೇವಿಸುವನು. "ಆಚಾರಃ ಪ್ರಥಮೋಧರ್ಮಃ ಧರ್ಮಸ್ಯಪ್ರಭುರಚ್ಯುತಃ" ಎಂಬಂತೆ ಭಗವಂತನೇ ಧರ್ಮಕ್ಕೆ ಪ್ರಭುವಾಗಿರುವದ ರಿಂದ, ಪ್ರಸಂಗವಶಾತ್ ಆತನು ಸೇವ್ಯನಾಗಿ ಸೇವ್ಯಧರ್ಮವನ್ನೂ, ಸೇವಕನಾಗಿ ಸೇವಕಧರ್ಮವನ್ನೂ, ಪುತ್ರನಾಗಿ ಪುತ್ರಧರ್ಮವನ್ನೂ, ಶಿಷ್ಯನಾಗಿ ಶಿಷ್ಯಧರ್ಮ ವನ್ನೂ, ಗುರುವಾಗಿ ಗುರುವಿನ ಧರ್ಮವನ್ನೂ, ಶತ್ರುವಾಗಿ ಶತ್ರುವಿನ ಧರ್ಮ ವನ್ನೂ, ಮಿತ್ರನಾಗಿ ಮಿತ್ರನ ಧರ್ಮವನ್ನೂ ಹೀಗೆಯೇ ಬೇರೆ ಬೇರೆ ಸಂಬಂಧ ದವನಾಗಿ ಜನಿಸಿ ಬೇರೆ ಬೇರೆ ಧರ್ಮಗಳನ್ನೂ ಕಾಯ್ದು ಜಗತ್ತಿಗೆ ತೋರಿಸುವನು. ಆತನೇ ಹೀಗೆ ಧರ್ಮವನ್ನು ಕಾಯದಿದ್ದರೆ ಬೇರೆ ಯಾರು ಧರ್ಮವನ್ನು ಕಾಯ ಬೇಕು ? ಆದ್ದರಿಂದ ಭಗವದವತಾರಗಳು ಧರ್ಮಸ್ಥಾಪನೆಗಾಗಿ ಆಗುತ್ತವಲ್ಲದೆ, ನಮ್ಮ ಜಗಳಕ್ಕೆ ಹಾದಿಯಾಗದೇಕೆಂದು ಆಗುತ್ತಿರುವದಿಲ್ಲೆಂಬದನ್ನು ಲಕ್ಷದಲ್ಲಿಡ ಬೇಕು.

ಭಗವಂತನ ಈ ಅವತಾರದ ಲೀಲೆಗಳನ್ನು ಕುರಿತು ಇನ್ನೆರಡು ಮಾತುಗ ಳನ್ನು ಬರೆಯುವದು ಯೋಗ್ಯವಾಗಿ ತೋರುತ್ತದೆ. ಭಕ್ತಾಭಿಮಾನಿಯಾದ ಭಗ ವಂತನು ಭಕ್ತರ ಕಾರ್ಯಕ್ಕಾಗಿ ಹೇಚು-ಪೇಚು ನೋಡದೆ, ನೀಚಯೋನಿಯಲ್ಲಿ ಯಾದರೂ ಜನಿಸಿ, ಆಳಿಗಿಂತ ಆಳಾಗಿ ಕಷ್ಟ ಪಡುವನೆಂದಬಳಿಕ, ನಿಜವಾದ ಭಗ ವದ್ಭಕ್ತರು, ಅಂದರೆ ಭಗವತ್ಸ್ವರೂಪ ಚಿಂತನಮಗ್ನರಾದ ಭಗವದ್ಭಕ್ತರು, ಭಗ ವಂತನ ಲೋಕ ಕಲ್ಯಾಣಕಾರಕಗಳಾದ ಅನಂತ ಅವತಾರಗಳನ್ನು ಒರಿಹಚ್ಚಿ ನೋಡಿ ಅವನ್ನು ಎತ್ತಿ ಎಣಿಸಬಹುದೋ ! ಅಜ್ಞಾನಿಯಾದ ಶಿಶುವು, ತನ್ನ ತಾಯಿಯು ಪ್ರೀತಿಯಿಂದ ಮೊಲೆಯುಣಿಸುವಾಗ ಉಲ್ಲಾಸದಿಂದ ನಗುತ್ತಿರಲಿ, ಅದೇ ತಾಯಿಯು ಸಿಟ್ಟಿನಿಂದ ಬೆದರಿಸುತ್ತಿರುವಾಗ ಆ ಶಿಶುವು ದುಃಖದಿಂದ ಅಳು ತ್ತಿರಲಿ ಅದು ತಾಯಿಯ ಗುರುತು ಮರೆಯುವದಿಲ್ಲ. ಅದರಂತೆ ತಾಯಿಯು ಮನೆಯೊಳಗಿನ ಕಸ-ಮುಸುರೆಯಂಥ ಹೀನ ಕೆಲಸಗಳನ್ನು ಮಾಡುತ್ತಿರಲಿ, ಪತಿ ಸೇವೆ-ಅತಿಥಿ ಸತ್ಕಾರ-ಅನ್ನದಾನ-ಈಶ್ವರಭಜನೆ ಮೊದಲಾದ ಶ್ರೇಷ್ಠ ಕೆಲಸಗ

ಳನ್ನು ಮಾಡುತ್ತಿರಲಿ, ಆಕೆಯು ಸಾಧುಗಳಂತೆ ಮೃದುಭಾಷಣದಿಂದ ದಾಸವೃತ್ತಿಯನ್ನು ವಹಿಸಿರಲಿ–ಕ್ರೋಧಸಂತಪ್ತಳಾಗಿ ತನ್ನನ್ನು ನಿರಾಕರಿಸುತ್ತಿರಲಿ, ಆಕೆಯು ಹೊಸ ಸೀರೆಯನ್ನುಟ್ಟು ಅಲಂಕಾರಗಳನ್ನಿಟ್ಟುಕೊಂಡಿರಲಿ–ಹರಕಸೀರೆಯನ್ನುಟ್ಟು ಅಲಂಕಾರ ಹೀನಳಾಗಿರಲಿ, ಆಕೆ ನಿದ್ದೆಹತ್ತಿ ಮಲಗಿರಲಿ–ಕಾರ್ಯನಿಮಿತ್ತವಾಗಿ ನೆರೆಮನೆಗೆ ಹೋದದ್ದರಿಂದ ಕಣ್ಣಿಗೆ ಕಾಣದಂತಾಗಿರಲಿ ಶಿಶುವು ಮಾತ್ರ ತನ್ನ ತಾಯಿಯ ಹಂಬಲವನ್ನು ಬಿಡುವದಿಲ್ಲ! ಪ್ರಿಯವಾಚಕರೇ, ನಾವೂ ನೀವೂ ಶಿಶುಗಳಿದ್ದಾಗ ಹೀಗೆ ತಾಯಿಯ ಹಂಬಲ ಹಿಡಿಯಲು ಸಮರ್ಥರಾಗಿರಲು, ಪ್ರೌಢರಾಗುತ್ತ ಬಂದ ಬಳಿಕ ಲೌಕಿಕದಲ್ಲಿ ಅಥವಾ ಮಾಯಾಮೋಹದಲ್ಲಿ ಮಗ್ನರಾಗಿ ನಾವು ನಮ್ಮ ಪ್ರತ್ಯಕ್ಷ ಈ ಹಡೆದ ತಾಯಿಯ ಹಂಬಲವನ್ನು ಬಿಟ್ಟು ಆಕೆಯನ್ನು ನಿರಾಕರಿಸುವೆವೆಂದಬಳಿಕ, ಜಗತ್ತಿನ ತಾಯಿತಂದೆಯಾದ ಭಗವಂತನ ಗುರುತನ್ನು ಮೋಹ ವಶತೆಯಿಂದ ಮರೆಯುವದೇನಾಶ್ಚರ್ಯವು? ದೇಶ–ಕಾಲ–ಪರಿಸ್ಥಿತಿಗಳನ್ನನುಸರಿಸಿ ಜಗತ್ತಿನ ಹಿತಕ್ಕಾಗಿಯೇ ಭಗವಂತನು ಭಿನ್ನ ಭಿನ್ನ ನಾಮ–ರೂಪ–ಕ್ರಿಯೆಗಳನ್ನು ಧರಿಸಿರಲು, ನಾವು ಅದ್ವೈತ ಮತದಂತೆ ಆತನ ನಿರ್ಗುಣರೂಪದಲ್ಲಿ ಲಕ್ಷವಿಟ್ಟು ಏಕತ್ವವನ್ನೂ ಕಾಯ್ದುಕೊಳ್ಳುವದಿಲ್ಲ; ದ್ವೈತ ಮತದಂತೆ ಆ ಭಗವಂತನ ಸಗುಣರೂಪಗಳಲ್ಲಿ ಲಕ್ಷವಿಟ್ಟು ಅವತಾರಗಳ ತಾರತಮ್ಯವನ್ನೂ ಕಾಯ್ದು ಕೊಳ್ಳುವದಿಲ್ಲ; ಆದರೆ ಈಶ್ವರನ ಸ್ವರೂಪವನ್ನು ತಿಳಿಯದೆ ಭಗವದವತಾರಗಳನ್ನು ನಿಂದಿಸಿ ಮೂಢಕೋಟಿಯಲ್ಲಿ ಮಾತ್ರ ಸೇರುತ್ತಿರುವೆವು. ಹಾಯ್ ಹಾಯ್! ಎಂಥ ಅಜ್ಞಾನವಿದು! ಜ್ಞಾನಿಗಳಲ್ಲದೆ ಅನ್ಯರು ದ್ವೈತಾದ್ವೈತಭಾವದಿಂದ ದೇವರನ್ನು ನೋಡಿ ಆನಂದಪಡಲಾರರು.

ಮೇಲೆ ಹೇಳಿದಂತೆ ದೇವರು ಮಾತ್ರ ನಮ್ಮ ಹಿತದ ಸಲುವಾಗಿ ಹೇಚು–ಮೇಚು ನೋಡದೆ ಬೇಕಾದಂಥ ನೀಚಯೋನಿಯಲ್ಲಿ ಜನಿಸಿ ಬೇಕಾದಂಥ ಹೀನ ಕಾರ್ಯಮಾಡಲು ಬದ್ಧನಾಗಿ ಅವತರಿಸಿ ಜಗತ್ಕಲ್ಯಾಣವನ್ನು ಮಾಡಬೇಕು, ಕೆಲಸವಾದ ಮೇಲೆ "ಹೊಳೆದಾಟದ ಬಳಿಕ ಅಂಬಿಗನ ಮಿಂಡನೆ"ಂಬಂತೆ ನಾವು ದೇವರ ಬೇರೆ ಬೇರೆ ಅವತಾರಗಳೊಳಗಿನ ಹೀನಸಂಗತಿಗಳನ್ನು ಕ್ಷುದ್ರವೃತ್ತಿಯಿಂದ ಎತ್ತಿ ಎಣಿಸಿ ದೇವತ್ವವನ್ನು ಮರೆತು ಬಿಡಬೇಕು, ಇದೆಲ್ಲಿಯ ನ್ಯಾಯವು? ಈ ಮಾತನ್ನು ವಾಚಕರು ಮೇಲಿಂದಮೇಲೆ ವಿಚಾರಿಸತಕ್ಕದ್ದು. ಮಹಾತ್ಮರು ಈಶ್ವರನ ನಾಮರೂಪಕ್ರಿಯೆಗಳಿಗೆ ಲಕ್ಷಗೊಡದೆ ಕೇವಲ ದೇವತ್ವದ ಕಡೆಗೆ, ಅಂದರೆ,

ಆತನ ಜಗತ್ಕಲ್ಯಾಣಶಾಲಿತ್ವದ ಕಡೆಗೆ ಲಕ್ಷಕೊಟ್ಟು ಭಗವಂತನಲ್ಲಿ ಅದ್ವೈತಭಾವವನ್ನು ವಹಿಸಿ ಭಗವಂತನ ವಿಶ್ವರೂಪಾವತಾರದ ವಿಷಯವಾಗಿ ಸಮದರ್ಶಿಭಾವವನ್ನು ವಹಿಸುವರು. ಅದೇ ಮಹಾತ್ಮರು ದೇವತ್ವವನ್ನು ತಿಳಿದು ದೇವರ ನಾಮರೂಪ ಕ್ರಿಯೆಗಳನ್ನು ಕೌತುಕದಿಂದ ನೋಡುತ್ತ ದೇವರ ವಿಶ್ವರೂಪಾವತಾರದಲ್ಲಿ ತಾರತಮ್ಯ ಭಾವವನ್ನು ತಾಳಿ ತಾವು ದಾಸವೃತ್ತಿಯನ್ನು ಕಾಯ್ದುಕೊಳ್ಳುವರು. ಆದ್ದರಿಂದ, ಅದ್ವೈತಭಾವದ ಭಕ್ತರು ಭಗವಂತನ ಕ್ಷೀರ ಸಾಗರವಾಸವನ್ನು ನೋಡರು; ಸ್ಮಶಾನವಾಸವನ್ನು ನೋಡಲು; ಆತನ ಸತ್ವಗುಣವನ್ನು ಲಕ್ಷಿಸರು-ರಾಜಸ ತಾಮಸಗುಣಗನ್ನು ಲಕ್ಷಿಸರು. ಅದರಂತೆ ಭಗವಂತನು ಯಾರ ತಂದೆಯಾದದ್ದನ್ನೂ ನೋಡರು– ಯಾರ ಮರಿಮಗ ಗಿರಿಮಗನಾದದ್ದನ್ನೂ ನೋಡರು; ಆತನ ಶಾಂತರೂಪಕ್ಕೂ ಮನಸ್ಸು ಮಾಡರು–ಉಗ್ರರೂಪಕ್ಕೂ ಮನಸ್ಸು ಮಾಡರು; ಆತನ ಉಚ್ಚಕ್ರಿಯೆಗಳನ್ನು ಸಮರ್ಥಿಸರು–ಹೀನಕ್ರಿಯೆಗಳನ್ನು ಎತ್ತಿ ಎಣಿಸರು. ಪ್ರತ್ಯಕ್ಷ ಈಶ್ವರಾವತಾರವೆನಿಸಿಕೊಂಡಿರುವ ಅಪ್ಪಯ್ಯದೀಕ್ಷಿತರ ಉಕ್ತಿಯನ್ನು ಇದಕ್ಕೆ ಉದಾಹರಣವಾಗಿ ಇಲ್ಲಿ ಕೊಡಬಹುದು. ಅವರು ಹರಿಹರರನ್ನುದ್ದೇಶಿಸಿ—

ವೃ॥ ವಸ್ತ್ರಾಂಪಿಶಂಗಂ ವಸನಂ ದಿಶೋವಾ। ಗುರುತ್ಮತಾ ಯಾತು ಕಕುದ್ಮತಾವಾ॥
ನಿದ್ರಾತು ವಾನ್ಯತ್ಯತುವಾಽಧಿರಂಗಂ। ಜಾನೇ ನಭೇದಂ ಪರಮಸ್ಯಧಾಮ್ನಃ ॥

ಅಂದರೆ— “ ಪರಮಾತ್ಮನು ಪೀತಾಂಬರವನ್ನು ಧರಿಸಲಿ–ಅಥವಾ ದಿಗಂಬರನಾಗಲಿ, ಆತನು ಗರುಡನ ಸಹಾಯದಿಂದ ಪ್ರಯಾಣಮಾಡಲಿ–ಅಥವಾ ಎತ್ತಿನ ಸಹಾಯದಿಂದ ಸಂಚರಿಸಲಿ, ಅದರಂತೆ ಆತನು ( ಕ್ಷೀರಸಾಗರದಲ್ಲಿ ) ಮಲಗಲಿ–ಅಥವಾ (ಹೆಂಡತಿಯ ಮುಂದೆ) ರಂಗಸ್ಥಳದಲ್ಲಿ ನರ್ತನಮಾಡಲಿ, ಆ ತೇಜೋಮೂರ್ತಿಯಾದ ಭಗವಂತನಲ್ಲಿ ನಾನು ಭೇದವನ್ನು ಎಣಿಸುವದಿಲ್ಲ. ” ಎಂದು ಹೇಳಿರುವರು. ಅದರಂತೆ ಮಹಾತ್ಮರಾದ ಒಬ್ಬ ದ್ವೈತ ಭಗವದ್ಭಕ್ತರು ತಮ್ಮ ದಾಸವೃತ್ತಿಯನ್ನುದ್ದೇಶಿಸಿ ದೇವರನ್ನು ಕುರಿತು—

ವೃ॥ ತ್ವದ್ಭಕ್ತ–ಭಕ್ತ–ಪರಿಚಾರಕ–ಭಕ್ತ–ಭಕ್ತ– ದಾಸಾಸ್ಯದಾಸ ಇತಿ ಮಾಂ ಸ್ಮರ ಲೋಕಪಾಲ ॥ ಎಂದು, ಅಂದರೆ—“ ಲೋಕಪಾಲಕನಾದ ಭಗವಂತನೇ, ( ನಿನ್ನನ್ನು ತಿಳಿಯುವ ಯೋಗ್ಯತೆಯು ನನಗೆ ಇಲ್ಲದ್ದರಿಂದ ) ನೀನು

ನನ್ನನ್ನು–ನಿನ್ನ ಭಕ್ತನ ಭಕ್ತನ ಸೇವಕನ ಭಕ್ತನ ಭಕ್ತನ ದಾಸನ ದಾಸನೆಂದು ತಿಳಿಯೆಂದು ಹೇಳಿರುವರು. ಪ್ರಿಯವಾಚಕರೇ, ಇವರಿಬ್ಬರು ಮಹಾತ್ಮರ ವೃತ್ತಿಯೊಳಗಿನ ನಿರಭಿಮಾನತ್ವವನ್ನು ಕುರಿತು ಮಹಾತ್ಮರಾದ ನೀವೇ ವಿಚಾರಿಸಬೇಕಲ್ಲದೆ, ನನ್ನಂಥ ಪಾಮರನು ಅದರಗೊಡವಿಗೆ ಹೋಗುವದು ಸರಿಯಲ್ಲ; ಆದರೆ ಭಗವಂತನು ಜಗತ್ಸೃಷ್ಟಿಕಾರ್ಯದಲ್ಲಿ ರಜೋಗುಣಾಭಿಮಾನಿಯಾಗಿ ಬ್ರಹ್ಮರೂಪದಿಂದ ಸರ್ವೋತ್ತಮತ್ವವನ್ನೂ, ಜಗದ್ರಕ್ಷಣಕಾರ್ಯದಲ್ಲಿ ಸತ್ವಗುಣಾಭಿಮಾನಿಯಾಗಿ ವಿಷ್ಣುರೂಪದಿಂದ ಸರ್ವೋತ್ತಮತ್ವವನ್ನೂ, ಜಗತ್ಸಂಹಾರ ಕಾರ್ಯದಲ್ಲಿ ತಮೋಗುಣಾಭಿಮಾನಿಯಾಗಿ ರುದ್ರರೂಪದಿಂದ ಸರ್ವೋತ್ತಮತ್ವವನ್ನೂ ಪಡೆದಿರುವೆನೆಂದು ತಿಳಿದು, ತಮ್ಮ ಮನಸ್ಸು ಮೆಚ್ಚುವರೂಪವನ್ನು ಸರ್ವೋತ್ತಮನೆಂದು ಭಾವಿಸಿ, ನಿಂದಾದೋಷವು ತಗಲದಂತೆ ಸರ್ವತ್ರ ದಾಸಭಾವವನ್ನು ವಹಿಸಿರುವದು ನೆಟ್ಟಗೆಂದು ನಾನು ಭಾವಿಸುವೆನು !

ಹೀಗೆ ಕಾರ್ಯಭೇದದಿಂದಲೂ, ದೇಶ-ಕಾಲ-ಪರಿಸ್ಥಿತಿಗಳ ಭೇದದಿಂದಲೂ ಆಗುವ ಭಗವದವತಾರಗಳನ್ನು ಸರ್ವೋತ್ತಮತ್ವೇನ ಆರಾಧಿಸಲಿಕ್ಕೆ ಈಶ್ವರನ ದರ್ಶನಮಾಡಿಕೊಂಡ ಭಗವದ್ಭಕ್ತರೇ ಸಮರ್ಥರೆಂಬ ಬಗ್ಗೆ ಮೇಲೆ ಹೇಳಿದ ಜಯ–ವಿಜಯರ ಉದಾಹರಣವನ್ನೇ ಕೊಡಬಹುದು. ಈಶ್ವರನನ್ನು ಕಂಡ ಆ ಭಕ್ತರು, ಜಯ–ವಿಜಯ ರೂಪದಿಂದ ಸತ್ವಗುಣಾಭಿಮಾನಿಗಳಾಗಿ ಮೊದಲು ವೈಕುಂಠದಲ್ಲಿ, ಭಗವಂತನ ಸತ್ವಮೂರ್ತಿಯಾದ ವಿಷ್ಣುವನ್ನು ಆರಾಧಿಸುತ್ತಿದ್ದರು. ಮುಂದೆ ಶಾಪಗ್ರಸ್ತರಾದ ಬಳಿಕ ಅವರು ಹಿರಣ್ಯಾಕ್ಷ–ಹಿರಣ್ಯಕಶಿಪು, ರಾವಣ–ಕುಂಭಕರ್ಣ ರೂಪಗಳಿಂದ ರಜೋಗುಣಾಭಿಮಾನಿಗಳಾಗಿ ಕಾಮನಾಪರ ತಪಸ್ಸನ್ನಾಚರಿಸುವದಕ್ಕೆ ರಜೋಮೂರ್ತಿಯಾದ ಬ್ರಹ್ಮನನ್ನು ಸರ್ವೋತ್ತಮತ್ವೇನ ಆರಾಧಿಸಿ ವರಗಳನ್ನು ಪಡೆದರು; ಕಡೆಗೆ ಮೋಕ್ಷಪ್ರಾಪ್ತ್ಯರ್ಥವಾಗಿ ಅವರು ಮೋಕ್ಷಹೊಂದುವ ಪ್ರಸಂಗದಲ್ಲಿ ತಮೋಗುಣಾಭಿಮಾನಿಗಳಾಗಿ ತಮೋಮೂರ್ತಿಯಾದ ಪರಮೇಶ್ವರನನ್ನು ಸರ್ವೋತ್ತಮತ್ವೇನ ನಂಬಿ ಭಜಿಸಿದರು. ಉಪಾಸ್ಯೋಪಾಸಕರಲ್ಲಿ ಅಭೇದವೃತ್ತಿಯಾಗಲಿ, ಸೇವ್ಯಸೇವಕ ಭಾವವಾಗಲಿ ಇರಬೇಕಾದ್ದರಿಂದ, ಅವರಿಬ್ಬರು ಭಿನ್ನಗುಣದವರಾಗಿದ್ದರೆ ಉಪಾಸನೆಯು ಹೇಗೆ ಘಟಿಸುವದು ? ಹೇಗಿದ್ದರೂ ದೇವರನ್ನು ಕಂಡವರೇ ದೇವರೊಡನೆ ಸಖ್ಯವನ್ನು ಬಳಿಸಬಹುದು, ದೇವರೊಡನೆ ಬಡಿದಾಡಬಹುದು; ಬೇಕಾದದ್ದು

ಮಾಡಬಹುದು. ಆದರೆ ದೇವರನ್ನು ಕಾಣದವರು ಮಾಯಾಪಾಶದಲ್ಲಿ ಸಿಕ್ಕಿದ್ದ ಜಗತ್ತಿನೊಡನೆ ಸ್ನೇಹವನ್ನಾಗಲಿ, ದ್ವೇಷವನ್ನಾಗಲಿ ಬಳಿಸಿ ಇಪ್ಪಿಯ ಮುಳ್ಳನ್ನು ತೆಕ್ಕೆಹಾದಂತೆ ಪ್ರಯೋಜನವನ್ನು ಕಾಣದೆ ಮತ್ತಿಷ್ಟು ಬಂಧನಕ್ಕೊಳಗಾಗಬಹುದು. ಒಟ್ಟಿಗೆ ಹೇಳತಕ್ಕದ್ದೇನಂದರೆ, ಈಶ್ವರವಿಷಯಕ ಜ್ಞಾನವೇ ಮೋಕ್ಷವು, ಅದರ ಅಜ್ಞಾನವೇ ಬಂಧನವು. ಬಂಗಾರವನ್ನು ತಿಳಿದವರು ಬಂಗಾರದ ಗಟ್ಟಿಯನ್ನು, ಬಂಗಾರದ ಅಲಂಕಾರಗಳನ್ನು, ಬಂಗಾರದ ಕಣಗಳಿದ್ದ ಕಲ್ಲುಗಳನ್ನೂ ನೋಡಿ ಆದರಿಸುವಂತೆ, ಈಶ್ವರನನ್ನು ಕಂಡ ಮಹಾತ್ಮರು, ಬಂಗಾರದ ಗಟ್ಟಿಯಂತೆ ಇದ್ದ ಈಶ್ವರನ ಆದ್ಯವತಾರವಾದ ಬ್ರಹ್ಮಾದಿ ರೂಪಗಳನ್ನೂ ಬಂಗಾರದ ಅಲಂಕಾರಗಳಂತೆ ಇದ್ದ ರಾಮ–ಕೃಷ್ಣ, ವೀರಭದ್ರ–ಮಾರ್ತಂಡಭೈರವಾದಿ ಪ್ರಬಲಾವತಾರಗಳನ್ನೂ ಬಂಗಾರದ ಕಣಗಳಿದ್ದ ಕಲ್ಲುಗಳಂತೆಯಿದ್ದ ಆಯಾ ಕಾಲದಲ್ಲಿ ನಟಿಸುತ್ತಿರುವ ಸಣ್ಣ ಪುಟ್ಟ ಅವತಾರಗಳನ್ನೂ ನೋಡಿ ಆದರವುಳ್ಳವರಾಗುವದರಲ್ಲಿ ಸಂಶಯವಿಲ್ಲ.

೬ **ಉಪಸಂಹಾರ**—ಒಟ್ಟಿಗೆ ಹೇಳತಕ್ಕದ್ದೇನಂದರೆ, ಶ್ರೀವೇಂಕಟೇಶ ಮಾಹಾತ್ಮ್ಯವು ಪರಮ ಮಂಗಲಪ್ರದವಾದ ವೈಷ್ಣವ ಪುರಾಣವಾಗಿರುತ್ತದೆ. ಅದನ್ನು ಭಕ್ತಿಯಿಂದ ಓದಿ ಸನ್ಮಾರ್ಗದಿಂದ ನಡೆಯುವವರ ಕಲ್ಯಾಣಮಾಡಲು ಶ್ರೀನಿವಾಸನು ಬದ್ಧಕಂಕಣನಾಗಿ ಈಹೊತ್ತಿಗೂ ಶೇಷಾಚಲದಲ್ಲಿ ಮೂರ್ತಿಮಂತ್ತನಾಗಿ ವಾಸಿಸಿರುವನು. ತೋಂಡಮಾನನ ಸ್ವಾರ್ಥಬುದ್ಧಿಯಿಂದ ಆತನು ಮೌನನಾಗಿದ್ದರೂ, ಅದೇ ತೋಂಡಮಾನನು ಪಶ್ಚಾತ್ತಾಪಪಟ್ಟು ತನ್ನ ದುರಭಿಮಾನವನ್ನು ತ್ಯಜಿಸಿ ಶರಣುಹೋದಾಗ ಪುನಃ ಅವನೊಡನೆ ಮಾತಾಡಿ ವರಪ್ರದಾನ ಮಾಡಿದಂತೆ, ಈಗಾದರೂ ಶ್ರೀನಿವಾಸನು ಸದಭಿಮಾನಿ ಭಕ್ತರೊಡನೆ ಮಾತಾಡಿ ಅವರ ಕಲ್ಯಾಣ ಮಾಡುತ್ತಿರುವನೆಂಬ ಬಗ್ಗೆ ಹಲವು ಉದಾಹರಣಗಳು ದೊರೆಯಬಹುದು. ಈ ಪುರಾಣವು ಅತ್ಯಂತ ರಸಭರಿತವೂ, ಬೋಧಪ್ರದವೂ, ಪ್ರಾಸಾದಿಕವೂ ಆಗಿರುವದು. ಇದರಲ್ಲಿ ಲೌಕಿಕ–ಪಾರಮಾರ್ಥಿಕ ಹಿತಸಾಧನದ ಮಾರ್ಗಗಳು ಸರಸವಾಗಿ ವರ್ಣಿಸಲ್ಪಟ್ಟಿರುತ್ತವೆ. ಇದರೊಳಗಿನ ವಿಷ್ಣು ಸರ್ವೋತ್ತಮತ್ವದ ಸ್ಥಾಪನೆಗಾಗಿ ಶೈವರೇ ಮೊದಲಾದವರು ಅಸೂಯೆಪಡುವ ಕಾರಣವಿಲ್ಲ. ಅದರಂತೆ ಇದರಲ್ಲಿ ವರ್ಣಿಸಿರುವ ಅಮಾನುಷಕೃತ್ಯಗಳ ಕಾರ್ಯ

ಕಾರಣ ಭಾವವನ್ನು ಹುಡುಕುವ ಗೊಡವಿಗೆ ಹೋಗಿ ಅಶ್ರದ್ಧೆಯನ್ನು ತಾಳು ವದೂ ವಿವೇಕದ ಲಕ್ಷಣವಲ್ಲ. ಈ ಪುರಾಣವು ವ್ಯಾಸನಿರ್ಮಿತವೇ ಆಗಿರುವದು. ಈ ಪುರಾಣದಲ್ಲಿ ಅಯಥಾರ್ಥತ್ವವೂ ಅಸತ್ಯವೂ ಇರುವದಿಲ್ಲ. ಇದರ ಶ್ರವಣ-ಪಠಣಗಳಿಂದ ಭಾವಿಕರ ಕಲ್ಯಾಣವು ನಿಶ್ಚಯವಾಗಿ ಆಗುವದು. ಈ ವರೆಗೆ ಬರೆದಿರುವ ರಹಸ್ಯವು, ರಹಸ್ಯವಿಚಾರದ ದಿಗ್ದರ್ಶನವಾಗಿರುವದಲ್ಲದೆ, ಸಂಪೂರ್ಣ ರಹಸ್ಯದರ್ಶಕವಾಗಿರುವದೆಂದು ವಾಚಕರು ತಿಳಿಯತಕ್ಕದ್ದಲ್ಲ. ಲೇಖಕನ ಅಜ್ಞಾನದಿಂದ ರಹಸ್ಯವಿಚಾರದ ದಿಸೆಯು ತಪ್ಪಿರಬಹುದು, ಆ ವಿಚಾರದಲ್ಲಿ ದೋಷಗಳು ತುಂಬಿರಬಹುದು, ಅದು ವಿಕ್ಷಿಪ್ತವಾಗಿಯೂ ಕಾಣಬಹುದು; ಆದರೆ ಎಷ್ಟು ದಿಸೆ ತಪ್ಪಿದ್ದರೂ, ಎಷ್ಟು ದೋಷಗಳು ತುಂಬಿದ್ದರೂ, ಎಷ್ಟು ವಿಕ್ಷಿಪ್ತವಾಗಿ ಕಂಡರೂ ಅದು ವಾಚಕರ ಮನಸ್ಸಿನಲ್ಲಿ ವಿಚಾರತರಂಗಗಳನ್ನು ಉತ್ಪನ್ನಮಾಡಿ, ಪುರಾಣವನ್ನೋದುವ ಇಚ್ಛೆಯನ್ನು ಹುಟ್ಟಿಸದೆಯಿರಲಿಕ್ಕಿಲ್ಲ. ಶ್ರೀಲಕ್ಷ್ಮೀಪತಿಯು ಪ್ರೇರಣೆಯಿಂದ ಅಷ್ಟು ಕೆಲಸವಾದರೂ ಲೇಖಕನು ತನ್ನನ್ನು ಧನ್ಯನೆಂದು ತಿಳಿಯುವನು.

೭ **ಭಗವಂತನ ಪ್ರಾರ್ಥನೆ—** " ರಹಸ್ಯಪ್ರಕಾಶಕವಾದ ಸಚಿತ್ರ ಮಹಾಭಾರತಾಮೃತ"ವೆಂಬ ಗ್ರಂಥಮಾಲೆಯನ್ನುಪ್ರಕಟಿಸುವ ಮಹಾಕಾರ್ಯದಲ್ಲಿ ತೊಡಗಿ ನಾವು ದೀರ್ಘಋಣದಿಂದ ಪೀಡಿತರಾಗಿರುವಾಗ, ಆ ಋಣದ ವಿಮೋಚನೆಗಾಗಿ ಶ್ರೀವೇಂಕಟೇಶಮಾಹಾತ್ಮ್ಯದ ಎರಡನೆಯ ಆವೃತ್ತಿಯನ್ನು ಹೊರಡಿಸಿರುವೆವು. ಯಾಕಂದರೆ ಬಡವನಾದ ನಾನು ಭಾರತದ ಪ್ರಿಂಟಿಗಾಗಿ ೧೩ ಸಾವಿರ ರೂಪಾಯಿ ಸಾಲಮಾಡುವಾಗ ಎಷ್ಟು ಕಷ್ಟಪಟ್ಟಿರಬಹುದೆಂಬದನ್ನು ತಿಳಿಯಲು ಶ್ರೀನಿವಾಸನೇ ಸಮರ್ಥನು. ಸಾಲಮಾಡಲಿಕ್ಕೆ ತಕ್ಕ ಪ್ರಸಂಗವಾವದೆಂಬದನ್ನೂ ಸಾಲತರುವಾಗ ಎಷ್ಟು ಕಷ್ಟವಾಗುತ್ತದೆಂಬದನ್ನೂ, ಸಾಲವನ್ನು ಹೇಗೆ ತೀರಿಸಬೇಕೆಂಬದನ್ನೂ ಸಾಲಗಾರನಾದ ವೇಂಕಟೇಶನ ಹಾಗೆ ಬೇರೆ ಯಾರೂ ಹೇಳಲು ಸಮರ್ಥರಾಗರು. ಶ್ರೀಶಂಕರನ ಸೂಚನೆಯಂತೆ ಶ್ರೀನಿವಾಸನು ತನ್ನ ಲಗ್ನಕ್ಕಾಗಿ ಕುಬೇರನಲ್ಲಿ ಸಾಲವನ್ನು ಮಾಡಿದಂತೆ, ಕನ್ನಡಿಗರಿಗೆ ಭಾರತಾಮೃತವ ಉಣಿಸುವದಕ್ಕಾಗಿ ನಾವು ಸಾಲಮಾಡಿರುವದರಿಂದ, ಒಂದು ಬಗೆಯಾಗಿ ಸಾಲ ಮಾಡುವ ಇಬ್ಬರ ಉದ್ದೇಶವೂ ಸತ್ಕಾರ್ಯಗಳಿಗಾಗಿಯೇ ಎಂದು ಹೇಳಬಹುದು. ಶ್ರೀನಿವಾಸನು ಜಗದಾಧಾರವಾಗಿದ್ದರೂ ಮನುಷ್ಯತ್ವೇನ ಅವತಾರ ಮಾಡಿದ್ದ

ರಿಂದ ಕುಬೇರನನ್ನು ಸಾಲ ಕೇಳಬೇಕಾದಾಗ ಎಷ್ಟು ಸಂಕೋಚಪಡಬೇಕಾಯಿತೆಂಬದನ್ನೂ, ಆತನು ಕುಬೇರನ ಅನುವರ್ತನವನ್ನು ಹೇಗೆ ಮಾಡಬೇಕಾಯಿತೆಂಬದನ್ನೂ, ಗೌರವವನ್ನು ಕಾಯ್ದುಕೊಳ್ಳುವದಕ್ಕಾಗಿ ತಾನು ಕುಬೇರನೊಡನೆ ಒತ್ತಟ್ಟಿಗೆ ಮರೆಗೆ ಹೇಗೆ ಹೋಗಬೇಕಾಯಿತೆಂಬದನ್ನೂ ಕಾಗದ ಬರೆದು ಅದರ ಮೇಲೆ ಬ್ರಹ್ಮ-ರುದ್ರರ ಸಾಕ್ಷಿಯನ್ನು ಹಾಕಿಸುವಾಗ ಆತನಿಗೆ ಎಷ್ಟು ಕ್ಲೇಶವಾಗಿರಬಹುದೆಂಬದನ್ನೂ,ಕುಬೇರನು ಕಾಗದದಲ್ಲಿ ಬರೆದಷ್ಟು ಹಣವನ್ನು ಶ್ರೀನಿವಾಸನ ಮುಂದೆ ಎಣಿಸಿದಾಗ ಕಾರ್ಯಾರ್ಥಿಯಾದ ಶ್ರೀನಿವಾಸನಿಗೆ ಎಷ್ಟು ಸಂತೋಷವಾಗಿರಬಹುದೆಂಬದನ್ನೂ, ಮುಂದೆ ಸಾಲವು ಶೂಲದಂತೆ ಎದೆಯಲ್ಲಿ ಎಷ್ಟು ಬಾಧಿಸತೊಡಗುವದೆಂಬದನ್ನೂ ಸಾಲಗಾರರಲ್ಲದ ವಾಚಕರು ತರ್ಕಿಸಲು ಅಸಮರ್ಥರಾದರೂ, ಕರುಣಾಳುವಾದ ಶ್ರೀನಿವಾಸನು ಸ್ವಾನುಭವದಿಂದ ಅದನ್ನು ತಿಳಿಯಲು ಸಂಪೂರ್ಣ ಸಮರ್ಥನಾಗಿರುವನು; ಆದ್ದರಿಂದ ಈ ರಹಸ್ಯಾಂತರ್ಗತ ಪ್ರಸ್ತಾವನೆಯು ಎರಡನಯ ಆವೃತ್ತಿಯ ಕಟ್ಟಕಡೆಯಲ್ಲಿ ನಾನು ಋಣವಿಮೋಚನಕ್ಕಾಗಿ ಆ ಭಗವಂತನನ್ನು ಹೀಗೆ ಪ್ರಾರ್ಥಿಸುವೆನು !

ಎಲೈ ಭಕ್ತಕಾಮಪೂರ್ಣನಾದ ಭಗವಂತನೇ, ಲೋಕೇಶನಾದ ನೀನು ಸಾಲಕ್ಕಾಗಿ ಪೇಚಾಡಿರಲು, ಕ್ಷುದ್ರನಾದ ನಾನು ನೀಗಲಾರದ ಸಾಲದಿಂದ ಎಷ್ಟು ಹಣ್ಣಾಗಿರಬಹುದೆಂಬುದನ್ನು ನನ್ನ ಹೃದಯಸ್ಥನಾದ ನೀನು ತಿಳಿದು ನನ್ನನ್ನು ಋಣಮುಕ್ತನಾಗಮಾಡಿ ಉದ್ಧರಿಸು ! ಇಚ್ಛಾಮಾತ್ರದಿಂದ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡಲು ಸಮರ್ಥನಾದ, ಮತ್ತು ಷಡ್ಗುಣೈಶ್ವರ್ಯಸಂಪನ್ನನೆಂದು ಹೊಗಳಿಸಿಕೊಳ್ಳುವ ನಿನಗೆ ನನ್ನ ಋಣವಿಮೋಚನಮಾಡುವದು ಭಾರವೇ? ಪ್ರಾಣಿಗಳ ಹೃದಯಸ್ಥನಾದ ನೀನು, ನನ್ನ ಋಣವಿಮೋಚನ ಮಾಡುವದಕ್ಕಾಗಿ ನಿನ್ನ ಭಕ್ತರನ್ನಷ್ಟೇ ಪ್ರೇರಿಸಿದರೂ ಲೀಲಾಮಾತ್ರದಿಂದ ನಾನು ಋಣಮುಕ್ತನಾಗುವೆನು. ಭಗವಂತನೇ, ಕಮಲಾವರನಾದ ನೀನು ಹೀಗೆ ಅನಂತಹಸ್ತಗಳಿಂದ ಕೊಡುವಾಗ ಸಾಲತೀರಿಸಲಿಕ್ಕೆ ಯಾರ ಎರಡು ಕೈಗಳು ಸಾತಾವು ? ಯಾವ ಸಾಲವು ತಾನೆ ತೀರದೆ ಉಳಿದೀತು ? ನೀನು ಕುಬೇರನಲ್ಲಿ ಮಾಡಿದ ಸಾಲವು ಇನ್ನೂ ತೀರಿರುವದಿಲ್ಲೆಂದು ಹೇಳುವದುಂಟು; ಆದರೆ ಚಂದ್ರನಿಗೆ ಕಲಂಕವು, ಶಂಕರನಿಗೆ ಸ್ಮಶಾನವಾಸವು, ಸೃಷ್ಟಿಕರ್ತನಾದ ಬ್ರಹ್ಮನಿಗೆ ಪೂಜಾಹೀನತೆಯು, ರಾವಣೇಶ್ವರನಿಗೆ ಅಹಂಕಾರವು, ದ್ರೋಣ-ಭೀಷ್ಮರಂಥ ಮಹಾತ್ಮರಿಗೆ ನೀಚ

ಸೇವೆಯು ಒಪ್ಪುವಂತೆ ಲಕ್ಷ್ಮೀಪತಿಯಾದ ನಿನಗೆ ಸಾಲವು ಬಹಳವಾಗಿ ಒಪ್ಪ ಬಹುದು; ಆದರೆ ಹುಟ್ಟಿಬಡವನಾದ ನಾನು ಕೈಕೊಂಡಿದ್ದ ಪರೋಪಕಾರದ ಕಾರ್ಯಕ್ಕಾಗಿ ಮೇಲೆ ಮೇಲೆ ಮಂದಿಯ ಮೋರೆ ನೋಡಬೇಕಾಗಿರಲು, ನನಗೆ ಸಾಲವು ಒಪ್ಪಬಹುದೆ? ಶ್ರೀಯಃಪತಿಯೇ, ನಿನ್ನ ಕೃಪೆಯಿಂದ ನಾನು ಋಣ ವಿಮೋಚನೆಯ ಸುದಿನವನ್ನು ಕಂಡೇನೇನು? ಅಂಥ ಸುದಿನದಲ್ಲಿ ನಾನು ಪುನರ್ಜನ್ಮ ಹೊಂದಿದವನಂತೆ ವಿದ್ಯಾದಾನಾದಿ ಪರೋಪಕಾರದ ಕಾರ್ಯಗಳಲ್ಲಿ ಜಾಗ್ರುತಿಯನ್ನೂ, ತತ್ಪರತೆಯನ್ನೂ ತೋರಿಸಬಹುದೇನು? ನನ್ನ ಅಂಥ ಜಾಗ್ರುತಿ ಯನ್ನೂ, ತತ್ಪರತೆಯನ್ನೂ ನೋಡಿ ಕನ್ನಡಿಗರು ನನ್ನ ವಿಷಯದಲ್ಲಿ ನಮ್ಮವ ನೆಂದು ಅಭಿಮಾನಪಟ್ಟಾರೇನು? ಕನ್ನಡಿಗರ ಆ ಸದಭಿಮಾನದಿಂದ ಪರೋಪ ಕಾರದ ಕಾರ್ಯವು ಉಜ್ವಲಸ್ವರೂಪವನ್ನು ಹೊಂದಿ, ಅವರ ಪ್ರಶಾಂತವಾದ ಪ್ರಕಾಶದಲ್ಲಿ ನಾನು ನನ್ನ ಆಶ್ರಯದಾತೃಗಳೂ ಶಾಂತಿಯ ಸೌಖ್ಯವನ್ನು ಅನು ಭವಿಸಬಹುದೇನು? ಹೀಗೆ ಪ್ರಶಾಂತರಾಗಿ ಒಪ್ಪುವವರನ್ನು ನೀನು ಆದರಿಸಿ ಕೃತಾರ್ಥರನ್ನು ಮಾಡೀಯೇನು? ಕರುಣಾನಿಧಿಯೇ, ಮಂಗಲಪ್ರದನೇ, ವೇಂಕಟೇಶಾ, ನಿನಗೆ ಅನಂತಪ್ರಣಾಮಗಳು. ನಿನ್ನ ಕರುಣಾಕಟಾಕ್ಷಕ್ಕೆ ಪಾತ್ರ ವಾಗಲಿಕ್ಕೆ ಸದ್ಗುರುಕೃಪೆಯು ಬೇಕಲ್ಲವೆ? ಈ ಮಾತಿನ ವಿಚಾರವನ್ನು ಮಾಡಲು ಕರುಣಾಘನನಾದ ಶ್ರೀ ಶೇಷಾಚಲಸದ್ಗುರುವೇ ಸಮರ್ಥನು, ಆತನೇ ಮಧ್ಯಸ್ಥನು, ಆತನೇ ತಾರಕನು. ಆತನು ಕರುಣಿಸುವವರೆಗೆ ನಾನು ಆತನ ಬಾಗಿಲು ಕಾಯ್ದುರಾಯಿತು!!

ಸದ್ಗುರು ಆಫೀಸ
**ಹಾವೇರಿ**
೪-೪-೩೨

ಕನ್ನಡಿಗರ ಸೇವಕ

**ಗಳಗನಾಥ**

# ವಿಷಯಾನುಕ್ರಮಣಿಕೆ



೭ನೆಯ ಅಧ್ಯಾಯ (ಪುಟ ೫೧-೫೭)— ಇದರಲ್ಲಿ ಪದ್ಮಾವತೀ-ಶ್ರೀನಿವಾಸರ ಸಂಭಾಷಣ, ಸ್ತ್ರೀಯರಿಂದಾದ ಶ್ರೀನಿವಾಸನ ಪರಾಜಯ ಮುಂತಾದ ವಿಷಯಗಳು ಬಂದಿರುತ್ತವೆ.

೮ನೆಯ ಅಧ್ಯಾಯ (ಪುಟ ೫೭-೬೯)— ಇದರಲ್ಲಿ ಶ್ರೀನಿವಾಸನು ತನ್ನ ಕಾರ್ಯಸಾಧನಕ್ಕಾಗಿ ಬಕುಲಾವತಿಯನ್ನು ಹುರುಪುಗೊಳಿಸಿದ್ದು, ಪದ್ಮಾವತಿಯ ಜನ್ಮವೃತ್ತಾಂತ, ಭಗವಂತನು ಕೊರವಂಜಿಯಾದದ್ದು ಮುಂತಾದ ವಿಷಯಗಳು ಬಂದಿರುತ್ತವೆ.

೯ನೆಯ ಅಧ್ಯಾಯ (ಪುಟ ೬೯-೮೫)— ಇದರಲ್ಲಿ ಆಕಾಶರಾಜನು ಬೃಹಸ್ಪತ್ಯಾಚಾರ್ಯ-ಶುಕ್ರಾಚಾರ್ಯರ ಬೋಧದಿಂದ ಪದ್ಮಾವತಿಯನ್ನು ಶ್ರೀನಿವಾಸನಿಗೆ ಕೊಡಲು ನಿಶ್ಚಯಿಸಿ ಶ್ರೀನಿವಾಸನಿಗೆ ಲಗ್ನಪತ್ರವನ್ನು ಕಳಿಸಿದ್ದು ಬಕುಲಾವತಿಯೂ ಲಗ್ನನಿಶ್ಚಯ ಮಾಡಿಕೊಂಡು ಬಂದದ್ದು ಮುಂತಾದ ವಿಷಯಗಳು ಬಂದಿರುತ್ತವೆ.

೧೦ನೆಯ ಅಧ್ಯಾಯ (ಪುಟ ೮೫-೯೫)— ಇದರಲ್ಲಿ ಬ್ರಹ್ಮರುದ್ರಾದಿ, ದೇವತೆಗಳನ್ನು ಶ್ರೀನಿವಾಸನು ವೇಂಕಟಾಚಲಕ್ಕೆ ಕರೆಸಿದ್ದು, ದೇವತೆಗಳ ಪ್ರಯಾಣ ವರ್ಣನ, ವಿಶ್ವಕರ್ಮನು ವಿವಾಹಮಂಟಪಾದಿಗಳನ್ನು ರಚಿಸಿದ್ದು ಮುಂತಾದ ವಿಷಯಗಳು ಬಂದಿರುತ್ತವೆ.

೧೧ನೆಯ ಅಧ್ಯಾಯ (ಪುಟ ೯೫-೯೯)— ಇದರಲ್ಲಿ ಶ್ರೀನಿವಾಸನು ಬ್ರಹ್ಮಾದಿ ದೇವತೆಗಳಿಗೆ ಬೇರೆ ಬೇರೆ ಕೆಲಸಗಳನ್ನು ನಿಯಮಿಸಿದ್ದು, ಕೊಲ್ಲಾಪುರದಿಂದ ಲಕ್ಷ್ಮೀದೇವಿಯನ್ನು ಕರೆಸಿದ್ದು ಮುಂತಾದ ವಿಷಯಗಳು ಬಂದಿರುತ್ತವೆ.

೧೨ನೆಯ ಅಧ್ಯಾಯ (ಪುಟ ೯೯-೧೨೭) — ಇದರಲ್ಲಿ ಶ್ರೀನಿವಾಸನ ವಿವಾಹಸಮಾರಂಭ, ಆಕಾಶರಾಜನ ಇಷ್ಟಾರ್ಥಪೂರ್ತಿ ಮುಂತಾದ ವಿಷಯಗಳು ಬಂದಿರುತ್ತವೆ.

೧೩ನೆಯ ಅಧ್ಯಾಯ (ಪುಟ ೧೨೭-೧೩೭)— ಇದರಲ್ಲಿ ಆಕಾಶರಾಜನ ಮರಣ, ವಸುದಾನ-ತೋಂಡಮಾನರ ಜಗಳ, ಶ್ರೀನಿವಾಸನು ಎರಡೂ ಪಕ್ಷಕ್ಕೆ

ಸಹಾಯವಮಾಡಿದ್ದು, ವಸುದಾನ–ತೋಂಡಮಾನರ ಯುದ್ಧ, ಶ್ರೀನಿವಾಸನು ಇಬ್ಬರ ಕಲಹವನ್ನು ತೀರಿಸಿದ್ದು ಮುಂತಾದ ವಿಷಯಗಳು ಬಂದಿರುತ್ತವೆ.

೧೪ನೆಯ ಅಧ್ಯಾಯ (೧೩೬–೧೪೩)—ಇದರಲ್ಲಿ ತೋಂಡಮಾನನು ಶ್ರೀನಿವಾಸನನ್ನು ಸ್ತುತಿಸಿದ್ದು, ಶ್ರೀನಿವಾಸನು ಆಕಾಶರಾಜನನ್ನು ನೆನಿಸಿ, ಶೋಕಿಸಿದ್ದು, ಶ್ರೀನಿವಾಸನಿಗೆ ತೋಂಡಮಾನನು ಮಂದಿರವನ್ನು ಕಟ್ಟಿಸಿಕೊಟ್ಟಿದ್ದು. ತೋಂಡಮಾನನ ಪೂರ್ವಜನ್ಮವೃತ್ತಾಂತ ಮೊದಲಾದ ವಿಷಯಗಳು ಬಂದಿರುತ್ತವೆ.

೧೫ನೆಯ ಅಧ್ಯಾಯ (ಪುಟ ೧೪೩–೧೬೨)— ಇದರಲ್ಲಿ ಗಿರಿಯುತ್ಸವ ವರ್ಣನ, ಕೂರ್ಮ ಬ್ರಾಹ್ಮಣನ ವೃತ್ತಾಂತ ಶ್ರೀನಿವಾಸನು ತೋಂಡಮಾನನ ಮೇಲೆ ಸಿಟ್ಟಾದದ್ದು, ಭೀಮಕುಲಾಲನ ವೃತ್ತಾಂತ ಮುಂತಾದ ವಿಷಯಗಳು ಬಂದಿರುತ್ತವೆ.

ಶ್ರೀ ವೇಂಕಟೇಶಸ್ತೋತ್ರ—(ಪುಟ ೧೬೨–೧೬೩)

ಶ್ರೀ ವೇಂಕಟೇಶ ಮಂಗಲಸ್ತೋತ್ರ—(ಪುಟ ೧೬೩–೧೬೪)

ಶ್ರೀ ವೆಂಕಟೇಶನ ಆರತಿಯ ಪದಗಳು— (ಪುಟ ೧೬೫–೧೬೮)





ಶ್ರೀಲಕ್ಷ್ಮೀವೇಂಕಟೇಶನು

ನಮೋಭಗವತೇ ಶ್ರೀನಿವಾಸಾಯ



ರಹಸ್ಯಪ್ರಕಾಶಕವಾದ

ಈ ಸಚಿತ್ರ

# ಶ್ರೀ ವೇಂಕಟೇಶ ಮಾಹಾತ್ಮ್ಯ ಗ್ರಂಥವು

ಲೇಖಕನಿಂದ

## ಶ್ರೀಮಂತ ಬಳವಂತರಾವ ನಾಡಗೌಡ ಗರಗ

ಇವರ

ಬುದ್ಧಿಶಾಲಿತ್ವ, ವಿವೇಕದ ನಡತೆ ಇವುಗಳ ಅಭಿನಂದನಕ್ಕಾಗಿ

ವಿನಯದ ಕಾಣಿಕೆಯೆಂದು

**ಆದರದಿಂದ ಅರ್ಪಿಸಲಾಗಿರುವದು.**

॥ ಶ್ರೀ ಲಕ್ಷ್ಮೀವೇಂಕಟೇಶಾಯನಮಃ ॥

# ಶ್ರೀ ವೇಂಕಟೇಶ ಮಾಹಾತ್ಮ್ಯ



## ೧ನೆಯ ಅಧ್ಯಾಯ

॥ಶ್ರೀ ದೇವತಾಸ್ತೋತ್ರ॥ ಬ್ರಹ್ಮರುದ್ರಾದಿವಂದ್ಯಂ ತ್ವಾಂ ಭಜೇ ವೇಂಕಟನಾಯಕಂ ॥ ನಿವಾರಯಾಶ್ವನಿಷ್ಟಾನಿ ಸಾಧಯೇಷ್ಟಾನಿ ಮಾಧವ ॥ ೧ ॥

ಕಥಾ ಪ್ರಾರಂಭ॥ ಶೌನಕಾದಿಋಷಿಗಳು ಸೂತಪುರಾಣಿಕನನ್ನು ಕುರಿತು— ಸೂತಮುನಿಗಳೇ, ನಾವು ನಿಮ್ಮಿಂದ ರಂಗನಾಥನ ಮಹಿಮೆಯನ್ನೂ, ಗಜಾದ್ರಿಯೆಂಬ ಪರ್ವತಕ್ಕೆ ಸ್ವಾಮಿಯಾದ ವಿಷ್ಣುವಿನ ಮಹಿಮೆಯನ್ನೂ, ಜಗನ್ನಾಥ ಕ್ಷೇತ್ರದಲ್ಲಿ ವಾಸಮಾಡಿದ ಶ್ರೀ ವಿಷ್ಣುವಿನ ಮಹಿಮೆಯನ್ನೂ ಕೇಳಿದೆವು. ಇನ್ನು ಮೇಲೆ ವೇಂಕಟಾಚಲಪತಿಯಾದ ಶ್ರೀ ಮಹಾವಿಷ್ಣುವಿನ ಮಹಿಮೆಯನ್ನು ಕೇಳಲಪೇಕ್ಷಿಸುವೆವು; ಅದನ್ನು ನೀವು ಪೂರ್ಣಮಾಡಬೇಕೆನಲು, ಅದಕ್ಕೆ ಸೂತಪುರಾಣಿಕನು—ಎಲೈ ಶೌನಕಾದಿಋಷಿಗಳಿರಾ, ಆ ವೇಂಕಟಾಚಲಪತಿಯಾದ ಶ್ರೀನಿವಾಸನ ಮಹಿಮೆಯನ್ನು ಕೇಳಬೇಕೆಂಬ ಇಚ್ಛೆಯು ನಿಮಗೆ ಪ್ರಾಪ್ತವಾದದ್ದನ್ನು ನೋಡಿ, ನನಗೆ ಬಹಳ ಸಂತೋಷವಾಯಿತು; ನಾನು ಪೂರ್ವದಲ್ಲಿ ಈ ಚರಿತ್ರೆಯನ್ನು ಬ್ರಹ್ಮತೇಜಸ್ಸಿನಿಂದ ಯುಕ್ತರಾಗಿರುವ ವೇದವ್ಯಾಸಋಷಿಗಳ ಮುಖದಿಂದ ಕೇಳಿದ ಪ್ರಕಾರವಾಗಿಯೇ ಶ್ರೀನಿವಾಸನನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತ, ನಿಮಗೆ ಹೇಳುವೆನು, ಚಿತ್ತಗೊಟ್ಟು ಕೇಳಿರಿ; —

ಪೂರ್ವದಲ್ಲಿ ಅತ್ಯಂತ ಧರ್ಮಿಷ್ಟನಾಗಿಯೂ, ಸತ್ಯವಂತನಾಗಿಯೂ, ಸಮಸ್ತಶಾಸ್ತ್ರಗಳಲ್ಲಿ ಕುಶಲನಾಗಿಯೂ, ಶಾಂತಶೀಲನಾಗಿಯೂ ಇದ್ದ ಜನಕನೆಂಬ ಒಬ್ಬ ರಾಜನಿದ್ದನು. ಆ ರಾಜನು ವಿಷ್ಣುಸರ್ವೋತ್ತಮ—ಜ್ಞಾನವುಳ್ಳವನಾಗಿ ಶ್ರೀಹರಿಯ ಪ್ರೀತಿಗೆ ಕಾರಣವಾಗಿದ್ದನು. ಆತನು ಕುಶಧ್ವಜನೆಂಬ ತನ್ನ ತಮ್ಮನ

ಸಹಾಯದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದನು. ಆ ಜನಕರಾಜನಿಗೆ ಜಾನಕಿಯೆಂಬ ಮಗಳೂ, ಆತನ ತಮ್ಮನಾದ ಕುಶಧ್ವಜನಿಗೆ ಮಾಂಡವಿ, ಶ್ರುತಕೀರ್ತಿ, ಊರ್ಮಿಳೆ ಎಂಬ ಮೂವರು ಹೆಣ್ಣು ಮಕ್ಕಳೂ ಉತ್ಪನ್ನರಾದರು. ಹೀಗೆ ಸರ್ವಸಂಪತ್ತಿನಿಂದ ಯುಕ್ತನಾಗಿ, ತನ್ನ ತಮ್ಮನ ಸಹಾಯದಿಂದ ಆ ರಾಜನು ಕಾಶೀದೇಶದ ರಾಜ್ಯವನ್ನಾಳುತ್ತಿದ್ದನು. ಕುಶಧ್ವಜನಾದರೂ ತನ್ನ ಅಣ್ಣನಲ್ಲಿ ಭಕ್ತಿಯಿಂದ ನಡಕೊಳ್ಳುತ್ತಿದ್ದನು. ಈ ಪ್ರಕಾರ ಜನಕರಾಜನು ಅತ್ಯಂತ ಸೌಖ್ಯದಿಂದಿರಲಾಗಿ, ಅವನು ತನ್ನ ಸೌಖ್ಯಮದದಿಂದ “ ನಾನು ಸರ್ವದಾ ಸುಖವನ್ನೇ ಉಪಭೋಗಿಸುವೆನು. ನನ್ನನ್ನು ದುಃಖವು ಎಂದಿಗೂ ಕಣ್ಣೆತ್ತಿ ನೋಡಲಾರದು” ಎಂದು ನುಡಿಯುತ್ತಿದ್ದನು. ಆಗ ಗರ್ವಭಂಜಕನಾದ ಶ್ರೀಹರಿಯು ಆ ಜನಕರಾಜನಿಗೆ ಬಂದ ಗರ್ವವನ್ನು ನಾಶಮಾಡಬೇಕೆಂದೆಣಿಸಿ, ಆತನಿಗೆ ದುಃಖವು ಉಂಟಾಗುವಂತೆ ಮಾಡಿದನು. ಅದು ಹ್ಯಾಗಂದರೆ,—ಆ ಜನಕನ ತಮ್ಮನಾದ ಕುಶಧ್ವಜನು ದೈವಯೋಗದಿಂದ ಮರಣವನ್ನು ಹೊಂದಿದನು. ಹಾಗು ಆತನ ಹೆಂಡತಿಯು ತನ್ನ ಮಕ್ಕಳಲ್ಲಿಯೂ, ರಾಜ್ಯಸೌಖ್ಯದಲ್ಲಿಯೂ, ಪ್ರೀತಿಯನ್ನಿಡದೆ, ಮೃತನಾದ ತನ್ನ ಪತಿಯ ಕೂಡ ಸಹಗಮನವನ್ನು ಮಾಡಿ, ಪತಿಯು ಹೊಂದಿದ ಲೋಕಕ್ಕೆ ಹೊರಟು ಹೋದಳು.

ಹೀಗೆ ಜನಕರಾಜನಿಗೆ ಒಮ್ಮಿಂದೊಮ್ಮೆ ದುಃಖವು ಪ್ರಾಪ್ತವಾಯಿತು. “ಈ ಲೋಕದಲ್ಲಿ ಸುಖ-ದುಃಖಗಳು ಸಮವಾಗಿ ಬರುವವು” ಎಂಬ ತತ್ತ್ವವನ್ನು ಅವನು ಮೊದಲು ಅರಿತಿದ್ದಿಲ್ಲ. ದುಃಖಗಳನ್ನು ನಾನು ಎಂದಿಗೂ ಅನುಭೋಗಿಸಲಿಕ್ಕಿಲ್ಲವೆಂಬ ಆತನ ಗರ್ವವು ಈಗ ನಾಶವಾಯಿತು. ತನ್ನಲ್ಲಿ ಅತಿ ಭಕ್ತಿಯಿಂದ ನಡಕೊಳ್ಳುತ್ತಿರುವ ತನ್ನ ತಮ್ಮನೂ, ಆತನ ಪತ್ನಿಯೂ ಮೃತರಾದದ್ದನ್ನು ನೋಡಿ, ಅತಿದುಃಖದಿಂದ ಅವನು—ಎಲೈ ದಂಪತಿಗಳಿರಾ, ನಿಮಗೆ ಪ್ರಿಯರಾದ ಮಕ್ಕಳನ್ನೂ, ಮುದುಕನಾದ ನನ್ನನ್ನೂ ಬಿಟ್ಟು ಅಗಲಿದಿರಾ ! ಎಲೌ ಪತಿವ್ರತಾ ಶಿರೋಮಣಿಯೇ, ನಿನ್ನ ಸಕಲೈಶ್ವರ್ಯವನ್ನೂ, ಮಕ್ಕಳನ್ನೂ ಬಿಟ್ಟು ಚಿತೆಯಲ್ಲಿ ನಿನ್ನ ಪತಿಯ ಆಲಿಂಗನವನ್ನು ಮಾಡಿಕೊಂಡು ಎಲ್ಲಿಗೆ ಹೋದೆ ? ನಿಮ್ಮ ವಿಯೋಗದಿಂದ ನನಗೆ ಪರಮ ಕಷ್ಟವು ಪ್ರಾಪ್ತವಾಯಿತಲ್ಲ ! ಅಕಟಾ ! ನಾನು ಎಂಬತ್ತು ಸಹಸ್ರ ವರುಷಗಳ ವರೆಗೆ ಬಾಳಿ, ಇವತ್ತಿನವರೆಗೂ ದುಃಖವನ್ನೇ ಕಂಡಿದ್ದಿಲ್ಲವಲ್ಲ! ಇಂಥ ನಾನು ಈಗ ದುಃಖವನ್ನು ಹ್ಯಾಗೆ ಸಹಿಸಲಿ? ” ಎಂದು ಶೋಕಮಾಡುತ್ತ

ಅವರಿಬ್ಬರ ಉತ್ತರಕ್ರಿಯೆಗಳನ್ನು ಮಾಡಿದನು. ಅನಂತರ ಪರದೇಶಿಗಳಾದ ತನ್ನ ತಮ್ಮನ ಮಕ್ಕಳನ್ನು ಕರೆದು, ತನ್ನ ತೊಡೆಯಮೇಲೆ ಕೂಡ್ರಿಸಿಕೊಂಡು, ಆ ಮಾತಾಪಿತೃ ವಿಹೀನರಾದ ಸಣ್ಣ ಸಣ್ಣ ಮಕ್ಕಳನ್ನು ನೋಡಿ,—'ಬಾಲಕಿಯರೆ, ಪರದೇಶಿಗಳಾಗಿ ಸರ್ವದಾ ದುಃಖಪಡುತ್ತಿರುವ ನಿಮ್ಮನ್ನು ನಾನು ಕಣ್ಣಿನಿಂದ ಹ್ಯಾಗೆ ನೋಡಿ ಸಹಿಸಲಿ ?" ಎಂದು ಹಗಲಿರುಳು ಶೋಕಪಡುತ್ತ, ಅತ್ಯಂತ ವ್ಯಥೆಯಿಂದ ನಿದ್ರಾಹಾರಗಳನ್ನೂ, ಸಕಲ ಭೋಗಗಳನ್ನೂ ಬಿಟ್ಟು ಕೃಶನಾಗಿರುತ್ತಿದ್ದನು.

ಹೀಗಿರುವಲ್ಲಿ ಆ ಜನಕರಾಜನ ಪುರೋಹಿತರಾದ ಶತಾನಂದ ಋಷಿಗಳು ಆ ರಾಜನಿಗೆ ಬಂದ ದುಃಖವನ್ನು ಶಾಂತ ಪಡಿಸುವವಕ್ಕಾಗಿ ಅವನಲ್ಲಿಗೆ ಬಂದರು. ಅವರನ್ನು ಕಂಡು ಜನಕನು ಆಸನಾದ್ಯುಪಚಾರಗಳನ್ನು ಮಾಡಿ ಸಂತೋಷಪಡಿಸಿ ಕೇಳಿಕೊಂಡನೇನಂದರೆ—"ಗೌತಮಋಷಿಪುತ್ರರಾದ ಶತಾನಂದರೇ, ನನ್ನಲ್ಲಿ ಅತಿ ಭಕ್ತಿಯಿಂದ ನಡೆಯುತ್ತಿದ್ದ ನನ್ನ ತಮ್ಮನೂ, ಆತನ ಪತ್ನಿಯೂ ಮೃತರಾಗಿ ನನಗೆ ಮಹಾದುಃಖವು ಪ್ರಾಪ್ತವಾಯಿತು; ನಮ್ಮ ಮಕ್ಕಳಾದ ಸೀತೆ, ಮಾಂಡವಿ, ಶ್ರುತಕೀರ್ತಿ, ಊರ್ಮಿಳೆ ಎಂಬ ಕನ್ನಿಕೆಯರಿಗೆ ಯೋಗ್ಯಪತಿಗಳು ಹ್ಯಾಗೆ ಸಿಗುವರೆಂತಲೂ, ವೃದ್ಧನಾಗಿಯೂ ಸಹಾಯರಹಿತನಾಗಿಯೂ ಇರುವ ನನ್ನಿಂದ ಮುಂದೆ ರಾಜ್ಯಪರಿಪಾಲನೆಯು ಹ್ಯಾಗೆ ಸಾಗಬಹುದೆಂತಲೂ ನನಗೆ ಪರಮ ಚಿಂತೆಯು ಪ್ರಾಪ್ತವಾಗಿರುವದು, ಮತ್ತು ದುಷ್ಟನಾದ ರಾವಣನು ಸರ್ವಕಾಲದಲ್ಲಿಯೂ ನನ್ನ ಪಟ್ಟಣಕ್ಕೆ ದಾಳಿಯನ್ನಿಡುತ್ತಲಿದ್ದಾನೆ, ಬಲಿಷ್ಠರಾದ ಆ ರಾವಣ ಇಂದ್ರಜಿತುಗಳು ನನಗೆ ಅಸಾಮಾನ್ಯ ಶತ್ರುಗಳಾಗಿರುವದರಿಂದ ಜೀರ್ಣನಾಗಿಯೂ, ಬಂಧುರಹಿತನಾಗಿಯೂ ಇರುವ ನಾನು, ಅವರ ಕೂಡ ಯುದ್ಧವನ್ನು ಹ್ಯಾಗೆ ಮಾಡಲಿ ? ಬಲಿಷ್ಠನಾದ ನನ್ನ ತಮ್ಮ ಕುಶಧ್ವಜನಿರುವಾಗ, ನಾನು ಯಾವ ಶತ್ರುಗಳನ್ನೂ ಲಕ್ಷಿಸುತ್ತಿದ್ದಿಲ್ಲ, ಈಗ ಮಾತ್ರ ಅಸಾಧ್ಯವಾಗಿದೆ, ಮತ್ತು ಅತ್ಯಂತ ರೂಪಸಂಪನ್ನೆಯಾದ ಸೀತಾದೇವಿಗೆ ಸುಂದರನಾದ ತಕ್ಕ ವರನು ಹ್ಯಾಗೆ ದೊರಕುವನೆಂಬದು ನನಗೆ ಮತ್ತೊಂದು ಚಿಂತೆಯಾಗಿದೆ; ನಮ್ಮ ನಾಲ್ಕು ಮಂದಿ ಕನ್ನಿಕೆಯರಿಗೆ ಒಬ್ಬ ಸಾರ್ವಭೌಮ ರಾಜನ ಹೊಟ್ಟೆಯಲ್ಲಿಯೇ ಹುಟ್ಟಿದ ನಾಲ್ಕುಮಂದಿ ರಾಜಕುಮಾರರು ಪತಿಗಳಾಗಿ, ಆ ನನ್ನ ಮಕ್ಕಳು ಪತಿಗಳಿಂದ ಕೂಡಿ ಬಹುಕಾಲ ಸೌಖ್ಯದಿಂದಿರಬೇಕೆಂಬದೊಂದು ನನ್ನ ಅಪೇಕ್ಷೆಯಿರುವದು; ಮತ್ತು ನನ್ನ ರಾಜ್ಯ

ಕಾರಭಾರವು ಇನ್ನು ಮುಂದೆ ಸುಸೂತ್ರವಾಗಿ ಹ್ಯಾಗೆ ಸಾಗುವದು ? ಇದನ್ನು ಹೇಳಬೇಕು, ಎಂದು ಕೇಳಿಕೊಳ್ಳಲು, ಅದಕ್ಕೆ ಶತಾನಂದಋಷಿಗಳು—" ಕೇಳೈ ಜನಕರಾಜನೇ, ನಿನ್ನ ಸರ್ವಚಿಂತೆಗಳನ್ನು ನಾಶಮಾಡುವದಾಗಿಯೂ, ನಿನ್ನ ಮನೋರಥವನ್ನು ಪೂರ್ಣಮಾಡುವದಾಗಿಯೂ, ತೀರ್ಥಮಹಿಮೆಗಳಿಂದ ಯುಕ್ತವಾಗಿಯೂ ಇರುವ " ಶ್ರೀ ವೇಂಕಟಗಿರಿಯ ಮಾಹಾತ್ಮ್ಯ "ವೆಂಬ ಪವಿತ್ರವಾದ ವಿಷ್ಣು ಚರಿತ್ರೆಯುಂಟು; ಅದನ್ನು ನೀನು ಶ್ರವಣಮಾಡಿದರೆ, ನಿನ್ನ ರಾವಣಾದಿ ಶತ್ರುಗಳು ನಾಶವಾಗುವರಲ್ಲದೆ, ನಿನ್ನ ದುಃಖವು ಶಾಂತವಾಗುವದು; ಮತ್ತು ನಿನಗೆ ಶುಭಗಳುಂಟಾಗುವವು. ಕಲಿಯುಗದಲ್ಲಿ ವೈಕುಂಠಗಿರಿಯ ಮಾಹಾತ್ಮ್ಯವು ಧರ್ಮಕರವಾದದ್ದಿರುತ್ತದೆ; ಈ ಮಹಾತ್ಮ್ಯವನ್ನು ಯಾವನು ಸಾವಧಾನಚಿತ್ತದಿಂದ ಕೇಳುವನೋ, ಅವನಿಗೆ ಧನಾಪೇಕ್ಷೆಯಾಗಿದ್ದರೆ ಅದು ಧನವನ್ನು ಕೊಡುವದು; ಪುತ್ರಾಪೇಕ್ಷೆಯುಳ್ಳವರಿಗೆ ಪುತ್ರರನ್ನು ಕೊಡುವದು; ಜ್ಞಾನಾಪೇಕ್ಷೆಯಿದ್ದವರಿಗೆ ಜ್ಞಾನವನ್ನು ಕೊಡುವದು; ರೋಗಿಗಳ ರೋಗವನ್ನು ನಾಶಮಾಡುವದು. ಇಂಥ ಪವಿತ್ರವಾದ ಮಾಹಾತ್ಮ್ಯವನ್ನು ಶ್ರವಣಮಾಡಿ ಬ್ರಹ್ಮನು ಸೃಷ್ಟಿಕರ್ತನೆಂಬ ಪದವಿಯನ್ನು ಹೊಂದಿದನು, ದೇವತೆಗಳೂ ರಾಕ್ಷಸರೂ ಕೂಡಿ ಸಮುದ್ರಮಥನವನ್ನು ಮಾಡುವಾಗ ಹಾಲಾಹಲವೆಂಬ ವಿಷವು ಸಮುದ್ರದಿಂದ ಹೊರಡಲಾಗಿ ಶಂಕರನು ಅದನ್ನು ಪಾನಮಾಡಲು, ಆ ವಿಷಜ್ವಾಲೆಯಿಂದ ಅವನ ಹೃದಯದಲ್ಲಿ ಉರಿಯಹತ್ತಿತು; ಆಗ ಶಂಕರನು ಈ ವೇಂಕಟೇಶಮಾಹಾತ್ಮ್ಯವನ್ನು ಶ್ರವಣಮಾಡಿ, ಕ್ಷೇಮವನ್ನು ಹೊಂದಿದನು, ಮತ್ತು ದೇವೇಂದ್ರನು ಈ ಚರಿತ್ರೆಯನ್ನು ಕೇಳಿ, ಸ್ವರ್ಗದಲ್ಲಿ ದೇವತೆಗಳಿಗೆ ಅಧಿಪತಿಯಾದನು; ಆದ್ದರಿಂದ ನೀನಾದರೂ ಈ ಮಾಹಾತ್ಮ್ಯವನ್ನು ಶ್ರವಣ ಮಾಡಿದರೆ, ಅಪೇಕ್ಷಿತ ಫಲವನ್ನು ಹೊಂದುವೆ" ಎಂದು ಹೇಳಿದರು. ಅದನ್ನು ಕೇಳಿ ಜನಕರಾಜನು—"ಹಾಗಾದರೆ ಗುರುಗಳೇ, ಆ ಚರಿತ್ರೆಯನ್ನು ಹೇಳಬೇಕು, ಎಂದು ಕೇಳಿಕೊಳ್ಳಲು, ಆಗ ಶತಾನಂದಋಷಿಗಳು ಹೇಳತೊಡಗಿದರು,—

" ಕೇಳೈ ಜನಕರಾಜನೇ, ಈ ವೇಂಕಟಾಚಲಕ್ಕೆ ನಾಲ್ಕು ಯುಗಗಳಲ್ಲಿ ನಾಲ್ಕು ಹೆಸರುಗಳಿರುವವು. ಅದು ಹ್ಯಾಗೆಂದರೆ,—ಕೃತಯುಗದಲ್ಲಿ ಈ ಪರ್ವತಕ್ಕೆ ವೃಷಭಪರ್ವತವೆಂತಲೂ, . ತ್ರೇತಾಯುಗದಲ್ಲಿ ಅಂಜನಾಚಲವೆಂತಲೂ, ದ್ವಾಪರಯುಗದಲ್ಲಿ ಶೇಷಾಚಲವೆಂತಲೂ, ಕಲಿಯುಗದಲ್ಲಿ ವೇಂಕಟಾಚಲವೆಂತಲೂ

ಅನ್ನುವರು. ” ಎಂದು ಹೇಳಲು, ಜನಕರಾಜನು ಮಧ್ಯದಲ್ಲಿಯೇ— “ಸ್ವಾಮಿೂ ಗುರುಗಳೇ, ಯುಗಭೇದದಿಂದ ಆ ಆ ಯುಗಗಳಲ್ಲಿ ಬೇರೆ ಬೇರೆ ಹೆಸರುಗಳು ಆ ಪರ್ವತಕ್ಕೆ ಹ್ಯಾಗೆ ಬಂದವು ? ಮತ್ತು ಮೊದಲು ಕೃತಯುಗದಲ್ಲಿ ಅದಕ್ಕೆ ವೃಷಭಪರ್ವತವೆಂದು ಹೆಸರು ಬೀಳುವದಕ್ಕೆ ಕಾರಣವೇನಾಯಿತು ? ಇದನ್ನು ಹೇಳಿರಿ ” ಎನಲು, ಶತಾನಂದರು ಹೇಳುತ್ತಾರೆ,—

ರಾಜನೇ, ವೃಷಭಾಸುರನೆಂಬ ಒಬ್ಬ ಕ್ರೂರಕರ್ಮವುಳ್ಳ ರಾಕ್ಷಸನು ಆ ಪರ್ವತದಲ್ಲಿದ್ದುಕೊಂಡು ಅಲ್ಲಿ ತಪಸ್ಸನ್ನು ಮಾಡುತ್ತಿರುವ ಋಷಿಗಳಿಗೆ ಅತ್ಯಂತ ಬಾಧೆಯನ್ನು ಕೊಡುತ್ತಿದ್ದನು. ಆ ದೈತ್ಯನ ಬಾಧೆಯನ್ನು ತಡೆಯಲಾರದೆ, ತಪೋಭಗ್ನರಾದ ಋಷಿಗಳು ಅವನನ್ನು ಸಂಹಾರಮಾಡಿಸುವದಕ್ಕಾಗಿ ಭಕ್ತರಕ್ಷಕನಾದ ಶ್ರೀ ಹರಿಯ ಬಳಿಗೆ ಬಂದು ಮೊರೆಯಿಟ್ಟರು. ಆಗ ಜಗದೀಶನಾದ ಶ್ರೀ ಹರಿಯು ಆ ಋಷಿಗಳು ಮಾಡಿದ ಸ್ತೋತ್ರವನ್ನು ಕೇಳಿ, ಅವರ ಸಮ್ಮುಖದಲ್ಲಿ ಪ್ರತ್ಯಕ್ಷನಾಗಿ ನಿಲ್ಲಲು, ಆ ಋಷಿಗಳೆಲ್ಲರು ಶ್ರೀ ಹರಿಯನ್ನು ನೋಡಿ–ಪೂಜ್ಯನಾದ ಶ್ರೀನಿವಾಸನೇ, ಭಕ್ತಪರಿಪಾಲನೇ, ವೃಷಭನೆಂಬ ರಾಕ್ಷಸನು ಪ್ರಬಲನಾಗಿ ನಾವು ಮಾಡುವ ತಪಸ್ಸನ್ನು ಕೆಡಿಸುತ್ತ ಬಾಧೆಪಡಿಸುತ್ತಲಿರುವನು; ಆದ್ದರಿಂದ ಆ ದುಷ್ಟನನ್ನು ನಿಗ್ರಹಮಾಡಿ ನಮ್ಮನ್ನು ರಕ್ಷಿಸಬೇಕು ” ಎಂದು ಬೇಡಿಕೊಳ್ಳಲು, ಆಗ ಶ್ರೀ ಹರಿಯು—“ಋಷಿಗಳಿರಾ, ನೀವು ನಿಮ್ಮ ಸ್ಥಾನಗಳಿಗೆ ಹೋಗಿರಿ, ಆ ರಾಕ್ಷಸನನ್ನು ನಿಗ್ರಹ ಮಾಡುವೆನು ” ಎಂದು ಅವರಿಗೆ ಅಭಯವಚನವನ್ನು ಕೊಟ್ಟು ಕಳುಹಿ ತಾನು ವೃಷಭಾಸುರನು ಇದ್ದ ವೈಕುಂಠಾಚಲಕ್ಕೆ ಬಂದನು.

ಆ ವೃಷಭಾಸುರನ ವೃತ್ತಾಂತವೇನಂದರೆ— ಅವನು ನಿತ್ಯದಲ್ಲಿ ಪ್ರಾತಃಕಾಲಕ್ಕೆ ಎದ್ದು, ತುಂಬುರ ತೀರ್ಥದಲ್ಲಿ ಸ್ನಾನವನ್ನುಮಾಡಿ, ದೈವಯೋಗದಿಂದ ತನಗೆ ಸಿಕ್ಕಿರುವ, ಕೋರೆದಾಡೆಗಳಿಂದ ಯುಕ್ತವಾದ ನಾರಸಿಂಹ ಶಾಲಿಗ್ರಾಮವನ್ನು ತನ್ನ ದೇವನೆಂದು ಪೂಜಿಸುತ್ತಿದ್ದನು, ಮತ್ತು ತಾನುಮಾಡುವ ಪೂಜೆಯು ಮುಗಿದಬಳಿಕ ತನ್ನ ಕೈ ಖಡ್ಗದಿಂದ ತನ್ನ ಶಿರಸ್ಸನ್ನೇ ಕತ್ತರಿಸಿ, ಅದೇ ಪುಷ್ಪವೆಂದು ತನ್ನ ಇಷ್ಟದೇವನಾದ ನಾರಸಿಂಹಮೂರ್ತಿಗೆ ಅರ್ಪಣಮಾಡುತ್ತಿದ್ದನು, ಆದರೆ ಆ ವೃಷಭನ ಶಿರಸ್ಸು ಪೂರ್ವದಂತೆ ಪ್ರಾಪ್ತವಾಗುತ್ತಿತ್ತು. ಈ ರೀತಿಯಿಂದ ಆ ದೈತ್ಯನು ಐದು ಸಾವಿರವರ್ಷಗಳವರೆಗೆ ಭಕ್ತಿಯಿಂದ ಪೂಜೆಯನ್ನು ಮಾಡುತ್ತಿ

ರಲು ಆತನ ಭಕ್ತಿಗೆ ಮೆಚ್ಚಿ ಶಾಲಿಗ್ರಾಮಶಿಲಾಂತರ್ಯಾಮಿಯಾದ ನರಸಿಂಹ ಮೂರ್ತಿಯು ಆ ರಾಕ್ಷಸನ ಎದುರಿನಲ್ಲಿ ಪ್ರತ್ಯಕ್ಷವಾಗಿ ನಿಂತಿತು, ಆಗ ಆ ದೈತ್ಯನು ತನ್ನ ಇಷ್ಟದೇವನನ್ನು ನೋಡಿ ಸಂತೋಷದಿಂದ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಸಂತೋಷದ ಹೆಚ್ಚುವಿಕೆಯಿಂದ ಒಂದು ಮುಹೂರ್ತದವರೆಗೆ ಮೈಮರೆದು ಆ ಮೇಲೆ ಎಚ್ಚತ್ತು, ನರಸಿಂಹ ಮೂರ್ತಿಗೆ ಬೇಡಿಕೊಂಡನೇನಂದರೆ-ಶ್ರೀ ವಿಷ್ಣುವೆ, ನಾಶರಹಿತನೇ, ಲಕ್ಷ್ಮೀಪತಿಯೇ, ಇವತ್ತಿನ ದಿವಸ ನನ್ನ ತಪಸ್ಸು ಸಾರ್ಥಕ ವಾಯಿತು; ಆದರೆ ನಿನಗೆ ನಾನು ಮುಕ್ತಿಯನ್ನೂ ಬೇಡುವದಿಲ್ಲ; ಸ್ವರ್ಗವನ್ನೂ ಅಪೇಕ್ಷಿಸುವದಿಲ್ಲ; ಬ್ರಹ್ಮಪದವಿಯನ್ನೂ ಕೇಳುವದಿಲ್ಲ; ನನ್ನ ಅಪೇಕ್ಷೆಯು ಬೇರೆ ಇರುವದು. ಅದೇನಂದರೆ, ನಿನ್ನ ಕೂಡ ನಾನು ಯುದ್ಧಮಾಡಬೇಕೆನ್ನುವೆನು; ಆದ್ದರಿಂದ ನನ್ನ ಇಚ್ಛೆಯನ್ನು ಪೂರ್ಣಮಾಡು; ಯಾಕಂದರೆ, ನೀನು ಮತ್ಸ್ಯ ಕೂರ್ಮ ಮೊದಲಾದ ಹತ್ತು ಅವತಾರಗಳಲ್ಲಿಯೂ ಅನೇಕ ರಾಕ್ಷಸರನ್ನು ಸಂಹಾರಮಾಡಿ, ಮಹಾ ಪರಾಕ್ರಮಿಯೆಂದು ಹೊಗಳಿಸಿಕೊಳ್ಳುತ್ತಿರುವೆ; ಆದ್ದರಿಂದ ನಿನ್ನ ಸಾಮರ್ಥ್ಯವು ಎಷ್ಟಿರುವದೆಂಬದನ್ನು ಈಗ ನಾನು ನೋಡಬೇಕಾಗಿರುವದು" ಎಂದನು. ಅವನ ಮಾತುಗಳನ್ನು ಕೇಳಿ, ಶ್ರೀ ಹರಿಯು ತನ್ನ ಮನಸ್ಸಿನಲ್ಲಿ-ಆಹಾ! ಈ ರಾಕ್ಷಸನಿಗೆ ನಾನೇ ಜಗದೇಕ ವೀರನೆಂಬ ಗರ್ವವು ಪ್ರಾಪ್ತವಾಗಿದೆ; ಆದರೂ ತಾಮಸಗುಣಗಳಿಂದ ಯುಕ್ತನಾದ ಈ ಅಧಮನು ನನ್ನ ಕೂಡ ಯುದ್ಧವನ್ನು ಮಾಡುವೆನೆಂದು ವರವನ್ನು ಬೇಡಿಕೊಂಡದ್ದಕ್ಕೂ, ಈತನಿಂದ ಬಾಧೆಯನ್ನು ಹೊಂದುತ್ತಿರುವ ಋಷಿಗಳಿಗೆ ಇವನನ್ನು ನಿಗ್ರಹಮಾಡುವೆನೆಂದು ನಾನು ವಚನವನ್ನು ಕೊಟ್ಟದ್ದಕ್ಕೂ, ಬಹಳೇ ಯೋಗ್ಯವಾಯಿತು; ಈಗಲೇ ಇವನ ಗರ್ವವನ್ನು ತಗ್ಗಿಸುವೆನು, ಎಂದು ಮನಸ್ಸಿನಲ್ಲಿ ಯೋಚಿಸಿ, ಆ ರಾಕ್ಷಸನಿಗೆ-"ವೃಷಭನೇ, ನಿನ್ನ ಅಪೇಕ್ಷೆಯನ್ನು ಪೂರ್ಣಮಾಡುವೆನು;" ಎಂದು ಹೇಳಲು ಅದಕ್ಕೆ ವೃಷಭಾಸುರನು-"ಹಾಗಾದರೆ ಈಗಲೇ ನಾನು ಯುದ್ಧಕ್ಕೆ ಸಿದ್ಧನಾಗಿರುವೆನು" ಎಂದು ಭುಜಗಳನ್ನು ಚಪ್ಪರಿಸುತ್ತ ಮದೋನ್ಮತ್ತನಾಗಿ ನಿಂತನು. ಆಗ ಶ್ರೀ ಮಹಾವಿಷ್ಣುವಿಗೂ ಆ ರಾಕ್ಷಸನಿಗೂ ಯುದ್ಧವು ಪ್ರಾರಂಭವಾಯಿತು.

ಈ ಪ್ರಕಾರ ಉಭಯತರಿಗೂ ಯುದ್ಧ ನಡೆಯುತ್ತಿರಲು, ಅದರಲ್ಲಿ ಶ್ರೀಹರಿಯು ಎಷ್ಟು ಯುದ್ಧ ಚಮತ್ಕೃತಿಯನ್ನು ತೋರಿಸುತ್ತಿದ್ದನೋ, ಅಷ್ಟು ಚಮತ್ಕೃತಿಯನ್ನು ಆ ವೃಷಭನೂ ಪ್ರತಿಯಾಗಿ ಮಾಡುತ್ತಿದ್ದನು. ಈ ಯುದ್ಧ

ವನ್ನು ದೇವತೆಗಳು ಆಶ್ಚರ್ಯಯುಕ್ತರಾಗಿ ನೋಡುತ್ತಿದ್ದರು. ಆ ಸಮಯದಲ್ಲಿ ಶ್ರೀಹರಿಯು ಆ ರಾಕ್ಷಸನ ಪರಾಕ್ರಮಕ್ಕೆ ಮೆಚ್ಚಿ ಆತನನ್ನು ಹೊಗಳಿ-"ಎಲೈ ರಾಕ್ಷಸನೇ, ಇನ್ನುಮೇಲೆ ನನ್ನ ಶೌರ್ಯವನ್ನು ನೋಡು;" ಎಂದು ವಿಶ್ವರೂಪವನ್ನು ಧಾರಣಮಾಡಿ, ವಿಕಾರರೂಪವುಳ್ಳ ಗರುಡನ ಮೇಲೆ ವಿಶ್ವರೂಪದಿಂದ ಸಹಸ್ರ ಭುಜಗಳಲ್ಲಿ ಸಹಸ್ರ ಆಯುಧಗಳನ್ನು ಧರಿಸಿರುವ ಅದ್ಭುತ ರೂಪವನ್ನು ತೋರಿಸಿದನು. ಅದಕ್ಕೆ ಹೆದರದೆ ಆ ವೃಷಭನು ಮಾಯೆಯಿಂದ ತಾನೂ ಪ್ರತಿ ಗರುಡನನ್ನು ನಿರ್ಮಿಸಿ ಅದರಮೇಲೆ ಶ್ರೀವಿಷ್ಣುವಿನ ವಿಶ್ವರೂಪಮೂರ್ತಿಯಂತಿರುವ ಸಹಸ್ರ ಬಾಹುಗಳಿಂದಲೂ ಸಹಸ್ರ ಆಯುಧಗಳಿಂದಲೂ ಯುಕ್ತವಾದ ಪ್ರತಿ ವಿಶ್ವರೂಪವನ್ನು ಕಲ್ಪಿಸಿ, ಶ್ರೀವಿಷ್ಣುವಿನ ವಿಶ್ವರೂಪದ ಮುಂದೆ ನಿಂತನು. ಈ ಎರಡೂ ವಿಶ್ವರೂಪಗಳು ಒಂದೇಸವನಾಗಿರುವದನ್ನು ಕಂಡು, ದೇವತೆಗಳು ಆ ರಾಕ್ಷಸನ ಮಾಯೆಯನ್ನು ನೋಡಿ ಆಶ್ಚರ್ಯಚಕಿತರಾದರು. ಆಗ ಶ್ರೀ ವಿಷ್ಣುವು ಪರಾಕ್ರಮಿಯಾದ ವೃಷಭಾಸುರನನ್ನು ಹೊಗಳಿ, ತನ್ನ ಮನಸ್ಸಿನಲ್ಲಿ-ಈ ಅಧಮನಾದ ರಾಕ್ಷಸನ ಕೂಡ ಈ ರೀತಿಯಾಗಿ ನಾನು ಯುದ್ಧವನ್ನು ಮಾಡಿದರೆ, ಇವನು ನನ್ನನ್ನು ಲೆಕ್ಕಿಸುವದಿಲ್ಲ. ಆದ್ದರಿಂದ ಸುದರ್ಶನ ಚಕ್ರದಿಂದ ಈಗಲೇ ಇವನ ಶಿರಸ್ಸನ್ನು ಕತ್ತರಿಸಿ, ಭೂಮಿಗೆ ಇಳಿಸುವೆನು, ಎಂದು ಯೋಚಿಸಿ, ಆ ರಾಕ್ಷಸನಿಗೆ "ಎಲೈ ನೀಚನೇ, ಇನ್ನುಮೇಲೆ ಈ ನನ್ನ ಸಹಸ್ರಧಾರೆಯುಳ್ಳ ಸುದರ್ಶನ ಚಕ್ರದಿಂದ, ಪಕ್ವವಾದ ಫಲವನ್ನು ಗಿಡದ ಮೇಲಿಂದ ಕೆಡಹುವಂತೆ ನಿನ್ನ ಶಿರಸ್ಸನ್ನು ಭೂಮಿಗೆ ಇಳಿಸುವೆನು; ಎಂದು ನುಡಿದು, ಶ್ರೀಹರಿಯು ಸಂತಪ್ತನಾಗಿ ತನ್ನ ಕೈಯಲ್ಲಿದ್ದ ಚಕ್ರವನ್ನು ಆ ರಾಕ್ಷಸನಮೇಲೆ ಬಿಡಲುದ್ಯೋಗಿಸಲು, ಆಗ ವೃಷಭಾಸುರನು ಶ್ರೀಹರಿಯ ಭಯಂಕರ ರೂಪವನ್ನು ಕಂಡು ಗದಗದನೆ ನಡುಗಿ, ಗರ್ವವು ನಷ್ಟವಾಗಿ, ಭೂಮಿಯಮೇಲೆ ಬಿದ್ದು ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಭಯಭಕ್ತಿಯಿಂದ ಶ್ರೀಹರಿಯನ್ನು ಕುರಿತು-"ಹೇ ಚಕ್ರಪಾಣಿಯಾದ ಶ್ರೀನಿವಾಸನೇ, ನಿನಗೆ ನಮಸ್ಕಾರವು. ಎಲೈ ದೇವಾಧಿದೇವನೇ, ಈ ಚಕ್ರದಿಂದ ಹತನಾದವನು ಮುಕ್ತಿಯನ್ನೇ ಹೊಂದುವನು; ಇದರಲ್ಲಿ ಸಂಶಯವಿಲ್ಲ. ಈ ಚಕ್ರದ ಮಹಿಮೆಯನ್ನು ನಾನು ಕೇಳಿರುವೆನು; ಅದೇನೆಂದರೆ,-ಹಿಂದಕ್ಕೆ ಕೀರ್ತಿಮಾನನೆಂಬ ರಾಜನು ನಿನ್ನ ಚಕ್ರದಿಂದ ಹತನಾಗಿ ಕೀರ್ತಿಯನ್ನು ಹೊಂದಿದನು. ಅದರಂತೆ ನಾನೂ ನಿನ್ನ ಚಕ್ರದಿಂದ ಹತನಾಗಿ ನಿನ್ನ ಲೋಕಕ್ಕೆ ಬರುತ್ತೇನೆ;

ಆದರೆ ಶ್ರೀ ವಿಷ್ಣುವೇ, ನಿನ್ನನ್ನು ಈಗ ಬೇಡಿಕೊಳ್ಳುವದೇನಂದರೆ,- ಈ ಹೊತ್ತಿನಿಂದ ಈ ವೈಕುಂಠ ಪರ್ವತವು ನನ್ನ ನಾಮವುಳ್ಳದ್ದಾಗುವಂತೆ ವರವನ್ನು ಕೊಡಬೇಕು, ಎಂದು ಬೇಡಿಕೊಂಡು, ಪಾಪರಹಿತನಾದ ಶ್ರೀನಿವಾಸನ ಪಾದಸ್ಪರ್ಶವನ್ನು ಮಾಡಿಕೊಂಡು ಆ ಕ್ಷಣದಲ್ಲಿ ತನ್ನ ದೇಹವನ್ನು ಬಿಟ್ಟನು. ಜನಕರಾಜನೇ ! ಈ ಕಾರಣದಿಂದ, ಅಂದಿನಿಂದ ಈ ಪರ್ವತಕ್ಕೆ ಕೃತಯುಗದಲ್ಲಿ ವೃಷಭ ಪರ್ವತವೆಂಬ ಹೆಸರು ಪ್ರಾಪ್ತವಾಯಿತು" ಎಂದು ಹೇಳಿದನು.

ಆ ಮೇಲೆ ಜನಕರಾಜನು ಶತಾನಂದ ಋಷಿಗಳನ್ನು ಕುರಿತು—"ಸ್ವಾಮಿಾ ಗುರುಗಳೇ, ಇನ್ನುಮೇಲೆ ತ್ರೇತಾಯುಗದಲ್ಲಿ ಆ ಪರ್ವತಕ್ಕೆ ಅಂಜನಾಚಲವೆಂಬ ನಾಮವು ಹ್ಯಾಗೆ ಪ್ರಾಪ್ತವಾಯಿತು ? ಅದನ್ನು ಹೇಳಬೇಕು" ಎನ್ನಲು ಶತಾನಂದ ಋಷಿಗಳು ಹೇಳಲಾರಂಭಿಸಿದರು,-"ಕೇಳೈ ಜನಕರಾಜನೇ, ತ್ರೇತಾಯುಗದಲ್ಲಿ 'ಕೇಸರಿ' ಎಂಬ ಹೆಸರುಳ್ಳ ಕಪಿಯ ಪತ್ನಿಯಾದ ಅಂಜನಾದೇವಿಗೆ ಮಕ್ಕಳಿಲ್ಲದೆ ಇರಲು, ಆಕೆಯು ಬಹಳ ದುಃಖದಿಂದ, ಮುಂದೆ ನಮಗೆ ಗತಿಯೇನೆಂದು ಚಿಂತಿಸಿ, ತಪಸ್ವಿಗಳಾದ ಮತಂಗ ಋಷಿಗಳ ಆಶ್ರಮಕ್ಕೆ ಬಂದು, ಅವರಿಗೆ ಭಕ್ತಿಯಿಂದ ನಮಸ್ಕರಿಸಿ, ದುಃಖದಿಂದ ನೇತ್ರೋದಕಗಳನ್ನು ಸುರಿಸುತ್ತ, ಕೈಮುಗಿದು "ಸ್ವಾಮಿಾ ಮುನಿವರ್ಯರೇ, ಪುತ್ರರಹಿತಳಾದ ನನಗೆ ಮುಂದೆ ಗತಿಯೇನು? " ಎಂದು ಬೇಡಿಕೊಳ್ಳಲು, ಆಗ ಮತಂಗ ಋಷಿಗಳು ಮಕ್ಕಳಿಲ್ಲದ ವ್ಯಥೆಯಿಂದ ಕೃಶಳಾಗಿರುವ ಅಂಜನಾದೇವಿಯನ್ನುನೋಡಿ ಕನಿಕರಪಟ್ಟು ಆಕೆಗೆ-"ದೇವಿಯೇ, ಭೂಲೋಕದಲ್ಲಿ ಪಂಪಾಸರೋವರದ ಪೂರ್ವದಿಕ್ಕಿಗೆ ಐವತ್ತು ಯೋಜನಗಳ ಮೇಲೆ ನಾರಸಿಂಹನ ಆಶ್ರಮವದೆ; ಆ ಕ್ಷೇತ್ರದ ದಕ್ಷಿಣಭಾಗದಲ್ಲಿ ನಾರಾಯಣ ಪರ್ವತವಿರುವದು; ಅದರ ತಟದಲ್ಲಿ ಸ್ವಾಮಿತೀರ್ಥದ ಉತ್ತರದಿಕ್ಕಿನಲ್ಲಿ ಒಂದು ಕ್ರೋಶದ (ಹರದಾರಿಯ)ಮೇಲೆ "ಆಕಾಶಗಂಗೆ"ಯೆಂಬದೊಂದು ಪ್ರಸಿದ್ಧ ತೀರ್ಥವದೆ; ಆ ತೀರ್ಥವಿರುವ ಕ್ಷೇತ್ರಕ್ಕೆಹೋಗಿ, ಆ ಆಕಾಶಗಂಗೆಯಲ್ಲಿ ನಿತ್ಯ ಸ್ನಾನವನ್ನುಮಾಡಿ ಹನ್ನೆರಡು ವರ್ಷಗಳವರೆಗೆ ನೀನು ತಪಸ್ಸನ್ನು ಮಾಡು; ಅಂದರೆ ಆ ತಪಃಫಲದಿಂದ ನಿನಗೆ ಸದ್ಗುಣಿಯೂ ಮಹಾಬಲಶಾಲಿಯೂ ಆದ ಪುತ್ರನು ಉತ್ಪನ್ನನಾಗುವನು" ಎಂದು ಹೇಳಿದರು. ಅದನ್ನು ಕೇಳಿ ಅಂಜನಾದೇವಿಯು ಸಂತೋಷಪಟ್ಟು ಅಲ್ಲಿಂದ ಹೊರಟು ಮತಂಗ ಋಷಿಗಳು ಹೇಳಿದ ಪ್ರಕಾರ ನಾರಾಯಣ ಪರ್ವತಕ್ಕೆ ಹೋಗಿ ಸ್ವಾಮಿತೀರ್ಥದಲ್ಲಿ ಸ್ನಾನವನ್ನು ಮಾಡಿ

ಅಲ್ಲಿರುವ ಅಶ್ವತ್ಥವೃಕ್ಷಕ್ಕೆ ನಮಸ್ಕರಿಸಿ, ವರಾಹರೂಪಿಯಾದ ಪರಮಾತ್ಮನಿಗೆ ವಂದಿಸಿ, ಆ ವರಾಹಕ್ಷೇತ್ರದಲ್ಲಿರುವ ತೀರ್ಥೋದಕವನ್ನು ಪಾನಮಾಡಿ, ಆಕಾಶ ಗಂಗೆಯನ್ನು ಹೊಂದಿ, ಆ ಕ್ಷೇತ್ರದಲ್ಲಿ ತಪಸ್ಸನ್ನು ಮಾಡುತ್ತ ಇರಹತ್ತಿದಳು.

ಹೀಗೆ ಅಂಜನಾದೇವಿಯು ಆ ಕ್ಷೇತ್ರವಲ್ಲಿದ್ದುಕೊಂಡು, ಆಹಾರವರ್ಜಿತ ಳಾಗಿ ತಪಸ್ಸನ್ನು ಮಾಡುವುದಕ್ಕೆ ತನ್ನ ಪತಿಯಾದ ಕೇಸರಿಯನ್ನೂ, ಮುನಿಗ ಳನ್ನೂ ಕೇಳಿಕೊಂಡು, ನಿತ್ಯದಲ್ಲಿಯೂ ಆಕಾಶಗಂಗೆಯಲ್ಲಿ ಸ್ನಾನಮಾಡುತ್ತ ಆಹಾರ, ನಿದ್ರೆ ಮೊದಲಾದ ಭೋಗಗಳನ್ನು ಬಿಟ್ಟು ಪರಿಶುದ್ಧಳಾಗಿ ತಾನು ಹದಿ ನಾರು ವರುಷದ ಪ್ರಾಯದವಳಾದರೂ ಮನೋನಿಗ್ರಹವನ್ನು ಮಾಡಿಕೊಂಡು, ಉಗ್ರವಾದ ತಪಸ್ಸನ್ನು ಮಾಡಲಿಕ್ಕೆ ಪ್ರಾರಂಭಿಸಿದಳು. ಬರಬರುತ್ತ ಆಕೆಯ ದೇಹವು ಶುಷ್ಕವಾಗಹತ್ತಿತು, ಆದರೂ ಅವಳು ತನ್ನ ಮನೋನಿಗ್ರಹವನ್ನು ಬಿಡ ಲಿಲ್ಲ. ಈ ಪ್ರಕಾರ ಒಂದು ವರುಷವಾಗಲು, ಆಗ ವಾಯುದೇವರು ಬಂದು, ಒಂದು ಫಲವನ್ನು ತಂದು ವಾಯುರೂಪದಿಂದಲೇ ದಿನಾಲು ಅಂಜನೆಗೆ ಕೊಡುತ್ತಿ ದ್ದನು, ಅದನ್ನು ತಿಂದು ಆ ದೇವಿಯು ಸಮಾಧಾನದಿಂದ ಇರುತ್ತಿದ್ದಳು. ಹೀಗಿ ರಲಾಗಿ ಒಂದಾನೊಂದುದಿವಸ ವಾಯುವು ತಾನು ದಿನಾಲು ಕೊಡುತ್ತಿರುವ ಫಲ ದಲ್ಲಿ ತನ್ನ ವೀರ್ಯವನ್ನು ಹಾಕಿ, ಆ ಅಂಜನಾದೇವಿಯು ಕೈಯಲ್ಲಿ ಬೀಳುವಂತೆ ಮಾಡಲು, ಹಸಿವೆಯಿಂದ ಪೀಡಿತಳಾದ ಆ ದೇವಿಯು ನಿತ್ಯದಂತಿರುವ ಫಲವೆಂದು ತಿಳಿದು, ಆ ವಾಯು ವೀರ್ಯಪೂರಿತವಾದ ಫಲವನ್ನು ತಿಂದುಬಿಟ್ಟಳು. ಅನಂತರ ದಲ್ಲಿ ವಾಯುವೀರ್ಯಪ್ರಭಾವದಿಂದ ಅಂಜನಾದೇವಿಯು ಗರ್ಭಿಣಿಯಾದಳು. ಈ ವಾರ್ತೆಯನ್ನು ಅಲ್ಲಿರುವ ಋಷಿಗಳು ಕೇಳಿ ಪರಮ ಸಂತೋಷಪಟ್ಟರು ಅಂಜನಾ ದೇವಿಯು ಪೂರ್ಣ ಗರ್ಭಿಣಿಯಾಗಿ ಶ್ರೇಷ್ಠನಾದ ಪುತ್ರನನ್ನು ಹಡೆದಳು. ಆ ಸಮ ಯದಲ್ಲಿ ಅಲ್ಲಿರುವ ಋಷಿಗಳು ಅವನಿಗೆ "ಹನುಮಂತ"ನೆಂಬ ನಾಮವನ್ನಿಟ್ಟರು; ಆದಕಾರಣ ಜನಕರಾಜನೇ, ಹೀಗೆ ಆ ವೃಷಭಾಚಲವಲ್ಲಿ ಅಂಜನಾದೇವಿಯು ತಪಸ್ಸನ್ನುಮಾಡಿ ಪುತ್ರನನ್ನು ಪಡೆದುದರಿಂದ ಆ ಹೊತ್ತಿನ ಮೊದಲುಗೊಂಡು, ತ್ರೇತಾಯುಗದಲ್ಲಿ ಆ ಪರ್ವತಕ್ಕೆ "ಅಂಜನಾಚಲ"ವೆಂಬ ಹೆಸರು ಪ್ರಾಪ್ತವಾಯಿತು

ಆಗ ಜನಕರಾಜನು— "ಗುರುಗಳೇ, ಆ ವೈಕುಂಠಪರ್ವತಕ್ಕೆ ತ್ರೇತಾ ಯುಗದಲ್ಲಿ ಅಂಜನಾಚಲವೆಂಬ ಹೆಸರು ಹ್ಯಾಗೆ ಬಂದಿತೆಂಬುದನ್ನು ಕೇಳಿ ನನಗೆ

ಸಂತೋಷವಾಯಿತು; ಇನ್ನು ಮೇಲೆ ದ್ವಾಪರಯುಗದಲ್ಲಿ ಶೇಷಾಚಲವೆಂಬ ಹೆಸರು ಹ್ಯಾಗೆ ಪ್ರಾಪ್ತವಾಯಿತು? ಇದನ್ನು ಹೇಳಿರೆನ್ನಲು, ಶತಾನಂದಋಷಿ ಗಳು ಹೇಳತೊಡಗಿದರು,—

" ಕೇಳೈ ಜನಕರಾಜನೇ, ಒಂದಾನೊಂದು ಕಾಲದಲ್ಲಿ ದೇವಾಧಿದೇವನಾದ ಶ್ರೀವಿಷ್ಣುವು, ತನ್ನ ಸತಿಯಾದ ಲಕ್ಷ್ಮಿಯು ಕೂಡ ಕ್ರೀಡಾಸಕ್ತನಾಗಬೇಕೆಂದೆಣಿಸಿ, ತನ್ನ ವೈಕುಂಠಪುರದ ದ್ವಾರದಲ್ಲಿ ಆದಿಶೇಷನನ್ನು ಕಾವಲಾಗಿಟ್ಟು, ಒಳಗೆ ಯಾರನ್ನೂ ಬಿಡದಂತೆ ಕಟ್ಟುಮಾಡಿದನು. ಆ ಕಾಲದಲ್ಲಿ ಪ್ರಾಣಿಗಳಿಗೆ ಪತಿ ಯಾದ ವಾಯುದೇವರು ಭಗವಂತನ ದರ್ಶನಕ್ಕಾಗಿ ವೈಕುಂಠಲೋಕಕ್ಕೆ ಬಂದು, ಒಳಗೆ ಹೋಗಲುದ್ಯುಕ್ತನಾದನು. ಆಗ ಬಾಗಿಲಕಾವಲುಗಾರನಾದ ಆದಿಶೇಷನು, ಒಳಗೆ ಹೋಗಬೇಡವೆಂದು ತನ್ನ ಸುವರ್ಣದಂಡದಿಂದ ಅವನಿಗೆ ನಿರ್ಬಂಧವನ್ನು ಮಾಡಿದನು. ಆಗ ವಾಯುವು— " ಮೂರ್ಖನಾದ ಶೇಷನೇ, ನನ್ನನ್ನು ಒಳಗೆ ಹೋಗಲಿಕ್ಕೆ ಯಾಕೆ ಪ್ರತಿಬಂಧ ಮಾಡುವೆ? ನನಗೆ ಅವಸರದ ಕಾರ್ಯವಿರು ವದು; ಆದ್ದರಿಂದ ನನ್ನನ್ನು ಹೋಗಗೊಡು," ಎಂದು ಹೇಳಿದನು. ಅದಕ್ಕೆ ಶೇಷರಾಜನು—ವಾಯುವೇ, ಯಾರನ್ನೂ ಒಳಗೆ ಬಿಡಬೇಡೆಂಬದಾಗಿ ಶ್ರೀವಿಷ್ಣು ವಿನ ಆಜ್ಞೆಯಾಗಿರುವದು; ಆದ ಕಾರಣ ಒಳಗೆ ಹೋಗಬೇಡ" ಎಂದು ದರ್ಪ ದಿಂದ ನುಡಿದನು. ಆಗ ವಾಯುವು ಕೋಪದಿಂದ— "ಮೂಢನಾದ ಶೇಷನೇ, ನಿನಗೆ ಜ್ಞಾನವಿಲ್ಲವೆಂದು ನಾನು ತಿಳಿಯುತ್ತೇನೆ; ಯಾಕಂದರೆ, ಹಿಂದಕ್ಕೆ ದ್ವಾರ ರಕ್ಷಕರಾಗಿದ್ದ ಜಯ-ವಿಜಯರು ಅಜ್ಞಾನದಿಂದ ನಿನ್ನ ಹಾಗೇ ಸನಕಾದಿ ಋಷಿ ಗಳಿಗೆ ಪ್ರತಿಬಂಧ ಮಾಡಿದ್ದರಿಂದ, ಶಾಪಹೊಂದಿ ಭೂಮಿಯಲ್ಲಿ ರಾಕ್ಷಸರಾಗಿ ಹುಟ್ಟಲಿಲ್ಲವೇ? ಇದನ್ನು ನೀನು ಮರೆತೆಯಾ ಹ್ಯಾಗೆ?" ಎಂದು ನುಡಿಯಲು, ಆ ವಾಯುವಿನ ಈ ಮರ್ಮಭೇದಕವಾದ ನುಡಿಗಳನ್ನು ಕೇಳಿ, ಶೇಷನು ಅತ್ಯಂತ ಕೋಪದಿಂದ— " ವಾಯುವೇ, ಇಂಥ ದೊಡ್ಡ ಮಾತನ್ನು ಹೇಳಬೇಡ; ನಿನಗೆ ಬದುಕುವ ಅಪೇಕ್ಷೆಯಿಲ್ಲವೆಂಬಂತೆ ಕಾಣಿಸುತ್ತದೆ; ಯಾಕಂದರೆ, ಅಜ್ಞಾನದಿಂದ ಮೋಹಿತರಾದ ಜನರು ಸೂರ್ಯನ ಗತಿಯನ್ನು ತಿಳಿಯುವದಕ್ಕೆ ಹ್ಯಾಗೆ ಶಕ್ಯರಲ್ಲವೋ, ಹಾಗೆ ನೀನಾದರೂ ನನ್ನ ಪರಾಕ್ರಮವನ್ನು ತಿಳಿಯದೆ ಈ ರೀತಿಯಾಗಿ ನನಗೆ ಗರ್ವದ ಮಾತುಗಳನ್ನಾಡುತ್ತೀ, ಎಲಾ! ನನಗೆ ಬಲದ ಲ್ಲಿಯೂ, ಜ್ಞಾನದಲ್ಲಿಯೂ, ವೈರಾಗ್ಯದಲ್ಲಿಯೂ, ಶ್ರೀವಿಷ್ಣುಭಕ್ತಿಯಲ್ಲಿಯೂ

ಸರಿಯಾದವರು ಯಾರಿರುವರು ! ಇದಲ್ಲದೆ ನಾನು ಸರ್ವಕಾಲದಲ್ಲಿಯೂ ಶ್ರೀಹರಿಯ ಹಾಸಿಗೆಯಾಗಿ, ಅಂತಃಪುರದಲ್ಲಿದ್ದು ಅವನಿಗೆ ನಾನು ಪುತ್ರನಿಗಿಂತ ಹೆಚ್ಚು ಪ್ರಿಯನಾಗಿದ್ದೇನೆ; ಇದಲ್ಲದೆ ಈಗ ಸರ್ವಪ್ರಾಣಿಗಳ ಹಿತಕ್ಕಾಗಿ ಶ್ರೀಲಕ್ಷ್ಮೀನಾರಾಯಣರಿಂದ ಆಜ್ಞಪ್ತನಾಗಿ ದ್ವಾರರಕ್ಷಕನಾಗಿರುವೆನು, ಹೀಗಿರಲು, ನನ್ನಂಥ ಯೋಗ್ಯತೆಯುಳ್ಳವನಿಗೆ, ನೀನು ತಿಳಿಯದೆ ಗರ್ವೋಕ್ತಿಗಳನ್ನಾಡುತ್ತೀಯಾ ?" ಎಂದು ಬೆದರಿಸಲು, ಅದಕ್ಕೆ ವಾಯುವು ತನ್ನೊಳಗೆ— "ಈ ಶೇಷನು ಅಜ್ಞಾನದಿಂದ ನನ್ನ ಶಕ್ತಿಯನ್ನು ತಿಳಿಯದೆ, ತನ್ನಷ್ಟಕ್ಕೆ ತಾನೇ ತನ್ನ ಶಕ್ತಿಯನ್ನು ಹೊಗಳಿಕೊಳ್ಳುತ್ತಾನೆ" ಎಂದು ಅಂದುಕೊಂಡು, ಆತನ ಹುಚ್ಚುತನಕ್ಕೆ ನಕ್ಕು, ಇವನಿಗೆ ತಿಳುವಳಿಕೆಯನ್ನು ಮಾತಿನಿಂದಲೇ ಹುಟ್ಟಿಸಬೇಕೆಂದು— "ಶೇಷನೇ, ತಿಳಿದು ನೋಡು; ರಾಜಮಂದಿರದಲ್ಲಿರುವ ಬೆಕ್ಕು ಹೊರಗೆ ಇರುವ ಆನೆಗೆ ಸರಿಯಾಗುವದಿಲ್ಲ; ಮತ್ತು ರಾಜದೂತನಾದವನು ತಾನು, ರಾಜಾಜ್ಞೆಯಿಂದ ಅರಮನೆಯಲ್ಲಿ ರತ್ನಮಯವಾದ ಪರ್ಯಂಕದ ಮೇಲೆ ಮಲಗಿರುವ ಅರಸನ ಸೇವೆಯನ್ನು ಮಾತ್ರ ಮಾಡುತ್ತಾನೆ; ಆದರೆ ಆ ದೂತನು, ತಾನು ಅರಸನ ರತ್ನಮಯ ಪರ್ಯಂಕದ ಮೇಲೆ ಕುಳಿತಿರುವೆನೆಂದು ತಿಳಿಯಬಹುದೇ ? ಅವನು ರಾಜಪುತ್ರನಿಗೆ ಸರಿಯಾಗಬಲ್ಲನೇ ? ಇದರಂತೆ ನೀನಾದರೂ— "ನಾನು ಅಂತಃಪುರದಲ್ಲಿ ಸರ್ವಕಾಲದಲ್ಲಿಯೂ ಇರುತ್ತಿದ್ದು, ಶ್ರೀವಿಷ್ಣುವಿಗೆ ಪುತ್ರನಿಗಿಂತ ಅಧಿಕ ಪ್ರಿಯನು" ಎಂದು ಗಳಹುತ್ತೀಯಲ್ಲ ? ಈ ಮಾತಿನ ಭಾವವನ್ನು ತಿಳಿದು ನೋಡು ಎಂದು ವಾಯುವು ಮರ್ಮಭೇದಕವಾದ ಮಾತುಗಳನ್ನು ಆಡಿ, ಶೇಷನನ್ನು ನೋಯಿಸಿದನು. ಹೀಗೆ ಉಭಯತರಿಗೂ ವಾದವಿವಾದವು ನಡೆಯುತ್ತಿರಲು, ಅವರಿಬ್ಬರ ವಾದಧ್ವನಿಯನ್ನು ಅಂತಃಪುರದಲ್ಲಿರುವ ಲಕ್ಷ್ಮೀದೇವಿಯು ಕೇಳಿ, ತನ್ನ ಪತಿಗೆ ಹೇಳಿದಳೇನಂದರೆ,— 'ಸ್ವಾಮಿ, ದ್ವಾರದಲ್ಲಿ ವಾದವಿವಾದವು ನಡೆದಿರುತ್ತದೆ, ಅದೇನಿರುವದು ? ನೋಡಿರಿ" ಎನಲು, ಗರುಡಧ್ವಜನಾದ ಶ್ರೀಹರಿಯು ಎದ್ದು ಹೊರಗೆ ಬಂದು ನೋಡಿ, ಶೇಷನಿಗೆ— "ಶೇಷನೇ, ಇಷ್ಟೊಂದು ಸಿಟ್ಟಾಗಲಿಕ್ಕೆ ಕಾರಣವೇನು" ಎಂದು ಕೇಳಲು, ಶೇಷನು— "ಸ್ವಾಮೀ, ಏನು ಹೇಳಲಿ ! ಮಲಯಾಚಲದಲ್ಲಿ ವಾಸಮಾಡಿಕೊಂಡಿರುವ ಅತ್ಯಂತ ಗರ್ವಿಷ್ಠನೂ ದುರಭಿಮಾನಿಯೂ ಆದ ಈ ವಾಯುವು ಇಲ್ಲಿಗೆ ಬಂದು ಸುಮ್ಮನೆ ನನ್ನ ಕೂಡ ಕಲಹ ತೆಗೆದು, ನನಗೆ ದುಷ್ಟ

ವಚನಗಳನ್ನಾಡುತ್ತಾನೆ ಎಂದು ಹೇಳಲು, ಆ ಸಮಯದಲ್ಲಿ ಪುರಾಣಪುರುಷನಾದ ಶ್ರೀವಿಷ್ಣುವನ್ನು ಕಂಡು, ವಾಯುವು ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಕೈಮುಗಿದುಕೊಂಡು ನಿಂತಿರಲು, ವಾಯುವನ್ನು ಕಂಡು ಶ್ರೀಹರಿಯು ಸಂತೋಷ ಪಟ್ಟು— “ ಪುತ್ರನೇ, ಈ ಅತ್ಯಂತ ಮಾನಿಯಾದ ಶೇಷನ ಕೂಡ ಕಲಹವು ಯಾಕ ? ” ಎಂದು ಕೇಳಲು, ಆಗ ವಾಯುವು ಶ್ರೀಹರಿಯು ಆಡಿದ ತನ್ನ ಮೇಲಿನ ಪ್ರೀತಿಯ ನುಡಿಗಳನ್ನು ಕೇಳಿ, ಪರಮಸಂತೋಷವುಳ್ಳವನಾಗಿ, ತಾನು ಮಾತಾಡಬೇಕೆನ್ನುವಷ್ಟರಲ್ಲಿ ಶೇಷನು ನಡುವೆ ಬಾಯಹಾಕಿ ಅಂದನೇನಂದರೆ,— ‘ ಪೂಜ್ಯನಾದ ಶ್ರೀವಿಷ್ಣುವೇ, ನೀನೇ ಹೇಳು; ಬಲದಲ್ಲಿಯೂ, ಜ್ಞಾನದಲ್ಲಿಯೂ, ನಿನಗೆ ಹಿತಮಾಡುವ ವಿಷಯದಲ್ಲಿಯೂ ನನ್ನ ಸಮಾನ ಸಮರ್ಥನು ಭೂಲೋಕ ದಲ್ಲಿಯೂ, ಸ್ವರ್ಗಲೋಕದಲ್ಲಿಯೂ, ಸತ್ಯಲೋಕದಲ್ಲಿಯೂ ಯಾವನಿರುವನು ?” ಎಂದು ತನ್ನನ್ನು ತಾನೇ ಹೊಗಳಿಕೊಳ್ಳಹತ್ತಿದನು. ಆಗ ಅಂತರ್ಜ್ಞಾನಿಯಾದ ಶ್ರೀಹರಿಯು ತನ್ನ ಮನಸ್ಸಿನಲ್ಲಿ— “ ಈ ಅಜ್ಞಾನಿಯಾದ ಶೇಷನು ಮಹಾ ಗರ್ವದಿಂದ ಬೆರೆತಿರುವನು, ಆದ್ದರಿಂದ ಇವನ ಗರ್ವವನ್ನು ಯುಕ್ತಿಯಿಂದಲೇ ನಾಶಮಾಡಬೇಕ”ೆಂದೆಣಿಸಿ, ಶೇಷನಿಗೆ— “ ಫಣಿರಾಜನೇ, ನೀನು ಅಂಥ ಶೂರನೇ ಸರಿ, ಇದರಲ್ಲಿ ಸಂಶಯವಿಲ್ಲ, ಆದರೂ, ಬಲವುಳ್ಳವರು ಬರಿಯ ಬಾಯಿಂದ ಆಡಿ ತೋರಿಸುವದು ಉಪಯೋಗವಾದದ್ದಲ್ಲ; ಕೈಯಿಂದ ಮಾಡಿ ತೋರಿಸುವದೇ ಭೂಷಣವು; ಆದ್ದರಿಂದ ನಿಮ್ಮಿಬ್ಬರ ಶಕ್ತಿಯನ್ನು ಪರೀಕ್ಷಿಸುವದಕ್ಕೆ ನಿಮಗೆ ಒಂದು ಪಣವನ್ನು ಹೇಳುವೆನು, ಅದೇನಂದರೆ— ಇಲ್ಲಿಂದ ಉತ್ತರದಿಕ್ಕಿಗೆ ಮೇರು ಪರ್ವತದ ಪುತ್ರನಾದ “ ಆನಂದ”ವೆಂಬ ಪರ್ವತವದೆ; ಅಲ್ಲಿಗೆ ನೀನು ಹೋಗಿ, ನಿನ್ನ ಮೈಯಲ್ಲಿ ಎಷ್ಟು ಸಾಮರ್ಥ್ಯವಿರುವದೋ, ಅಷ್ಟು ಸಾಮರ್ಥ್ಯ ದಿಂದ ಆ ಪರ್ವತಕ್ಕ ನಿನ್ನ ದೇಹವೆಂಬ ಹಗ್ಗದಿಂದ ಬಿಗಿದು ವಿಷಫೂತ್ಕಾರದಿಂದ ಯುಕ್ತನಾಗಿ ಘಟ್ಟಿಯಾಗಿ ನಿಂತಿರು; ಈ ವಾಯುವು ನಿನ್ನಿಂದಸಹಿತವಾದ ಆ ಪರ್ವತವನ್ನು ಎತ್ತಿದರೆ ಅವನೇ ಶಕ್ತಿವಂತನು, ಇಲ್ಲದಿದ್ದರೆ ನೀನೇ ಪರಾಕ್ರಮಿಯು, ಎಂದು ತಿಳಿಯುವೆನು. ಈ ನಿಮ್ಮ ಬಲಾಬಲವನ್ನು ದೇವತೆಗಳು ಪರೀಕ್ಷಿಸಲಿ, ” ಎಂದು ಶ್ರೀಹರಿಯು ಹೇಳಿದನು.

ಈ ಪ್ರಕಾರ ಶ್ರೀವಿಷ್ಣುವು ಹೇಳಿದ ಮಾತು ಕೇಳಿ, ಅಜ್ಞಾನಿಯಾದ ಶೇಷನು ವಾಯುವಿನ ಶಕ್ತಿಯನ್ನು ತಿಳಿಯದೆ, ಮದೋನ್ಮತ್ತನಾಗಿ— “ ದೇವಾ

ಧಿದೇವನೇ, ಈಗಲೇ ನೀನು ಹೇಳಿದಂತೆ ಆನಂದಾದ್ರಿಯನ್ನು ಸುತ್ತಿಕೊಂಡು ನಿಲ್ಲುವೆನು; ಈ ವಾಯುವು ನನ್ನಿಂದ ಸಹಿತವಾದ ಪರ್ವತವನ್ನು ಕೀಳಲಿ ! ಈತನ ಶಕ್ತಿಯನ್ನು ನೋಡುವೆನು," ಎಂದು, ನುಡಿದು ಆ ಕ್ಷಣದಲ್ಲಿಯೇ ಹೋಗಿ, ತನ್ನ ಮೈಯನ್ನು ಉಬ್ಬಿಸಿ ಆನಂದಾದ್ರಿಯನ್ನು ತನ್ನ ದೇಹವೆಂಬ ರಜ್ಜುವಿನಿಂದ ಸುತ್ತಿಕೊಂಡು ನಿಂತನು ಇತ್ತ ಪರಾಕ್ರಮಶಾಲಿಯಾದ ವಾಯುವು ಶ್ರೀಹರಿಯ ಆಜ್ಞೆಯನ್ನು ತೆಗೆದುಕೊಂಡು, ಆನಂದಾದ್ರಿಗೆ ಬಂದು, ದೇವತೆಗಳು ನೋಡುತ್ತಿರಲು, ತನ್ನ ಕಿರಿಬೆರಳಿನಿಂದ ಶೇಷನು ಸುತ್ತುಗಟ್ಟಿರುವ ಆ ಪರ್ವತ ವನ್ನು ಚಿಮ್ಮಲು, ಆ ಶೇಷನಿಂದ ಸಹಿತವಾದ ಆನಂದಾದ್ರಿಯು ಇಪ್ಪತ್ತೊಂದು ಸಹಸ್ರಯೋಜನಗಳ ಅಂತರದ ಮೇಲೆ ದಕ್ಷಿಣದಿಕ್ಕಿಗೆ ಹೋಗಿಬಿತ್ತು. ಆ ಸಮಯದಲ್ಲಿ ಮೇರು ಪರ್ವತವು ಅತ್ಯಂತ ಬಲಿಷ್ಠನಾದ ವಾಯುವಿನ ಪರಾಕ್ರಮ ವನ್ನು ನೋಡಿ, ಅವನನ್ನು ಕೊಂಡಾಡಿ "ಬಲಿಷ್ಠನೇ, ನನ್ನ ಪುತ್ರನನ್ನು ರಕ್ಷಿಸು" ಎಂದು ಬೇಡಿಕೊಳ್ಳಲು, ಆಗ ವಾಯುವು ಆನಂದಾದ್ರಿಯನ್ನೂ ಶೇಷನನ್ನೂ ರಕ್ಷಿಸುವ ಮನಸ್ಸುಳ್ಳವನಾಗಿ, ಅಂತರಿಕ್ಷದಿಂದ ಬೀಳುತ್ತಿರುವ ಶೇಷಸಹಿತವಾದ ಪರ್ವತವನ್ನು ಬೇಗನೆ ತನ್ನ ಕೈಯಲ್ಲಿ ಹಿಡಿದುಕೊಂಡು ಸುವರ್ಣಮುಖರೀ ನದಿಯ ಉತ್ತರದಲ್ಲಿ ಇಟ್ಟನು.

ಈ ರೀತಿಯಾಗಿ ಮಹಾಗರ್ವಿತನಾದ ಶೇಷನ ಮದವು ತಗ್ಗಿತು. ಅವನು ಮರುತ್ತರಿಗೆ ಸ್ವಾಮಿಯಾದ ವಾಯುವನ್ನು ಸ್ತೋತ್ರಮಾಡಿ— "ಬಲಿಷ್ಠನಾದ ವಾಯುವೇ, ಅಜ್ಞಾನದಿಂದ ನಿನಗೆ ಗರ್ವೋಕ್ತಿಗಳನ್ನಾಡಿದೆನು. ನನ್ನನ್ನು ಕ್ಷಮಿಸು" ಎಂದು ಬೇಡಿಕೊಂಡನು. ಆಗ ಉದಾರಮನಸ್ಸಿನವನಾದ ವಾಯುವು ತನ್ನ ಮನಸ್ಸಿನಲ್ಲಿ ದ್ವೇಷಬುದ್ಧಿಯನ್ನು ಹಿಡಿಯದೆ, ಶೇಷನಿಗೆ ಅನುಗ್ರಹವನ್ನು ಮಾಡಿದನು ಆದಕಾರಣ ಜನಕರಾಜನೇ, ಆ ಶೇಷನ ದೆಸೆಯಿಂದ ದ್ವಾಪರಯುಗ ದಲ್ಲಿ ಆ ವೈಕುಂಠಪರ್ವತಕ್ಕೆ "ಶೇಷಾಚಲ"ವೆಂಬ ಹಸರು ಪ್ರಾಪ್ತವಾಯಿತು" ಎಂದು ಶತಾನಂದರು ಹೇಳಲು, ಆಗ ಜನಕರಾಜನು — "ಮಹಾಮುನಿಗಳೇ, ಇನ್ನು ಕಲಿಯುಗದಲ್ಲಿ ಆ ವೈಕುಂಠಪರ್ವತಕ್ಕೆ "ವೇಂಕಟಾಚಲ"ವೆಂಬ ಹಸರು ಹ್ಯಾಗೆ ಬಂದಿತು ! ಅದನ್ನು ಹೇಳಬೇಕು ಎನ್ನಲು, ಆಗ ಶತಾನಂದರು ಹೇಳತೊಡಗಿದರು,—

" ಕೇಳೈ ಜನಕರಾಜನೇ, ಪೂರ್ವದಲ್ಲಿ ಪುರಂದರನೆಂಬ ಒಬ್ಬ ಬ್ರಾಹ್ಮಣನು "ಕಾಲಹಸ್ತಿ" ಎಂಬ ನಗರದಲ್ಲಿದ್ದನು. ಆತನು ಸತ್ಯವಂತನೂ ಅಗ್ನಿಹೋತ್ರವನ್ನು ಮಾಡುವವನೂ ಆಗಿದ್ದನು. ಆ ಬ್ರಾಹ್ಮಣನಿಗೆ ಎಷ್ಟೋ ದಿವಸ ಮಕ್ಕಳಾಗಿದ್ದಿಲ್ಲ. ಕಡೆಗೆ ವೃದ್ಧಾಪ್ಯದಲ್ಲಿ ಪೂರ್ವಪುಣ್ಯಪ್ರಭಾವದಿಂದ ಒಬ್ಬ ಪುತ್ರನು ಆದನು. ಆತನಿಗೆ ಪುರಂದರನು "ಮಾಧವ"ನೆಂಬ ಹೆಸರನ್ನಿಟ್ಟು, ದೊಡ್ಡವನಾದ ಮೇಲೆ ಅವನ ಉಪನಯನವನ್ನು ಮಾಡಿ, ವೇದಾಭ್ಯಾಸವನ್ನು ಮಾಡಿಸಿ, ಅವನನ್ನು ಸರ್ವವಿದ್ಯದಲ್ಲಿ ಪ್ರವೀಣನನ್ನು ಮಾಡಿದನು. ಅನಂತರದಲ್ಲಿ ಆ ಬ್ರಾಹ್ಮಣನು ಚಂದ್ರರೇಖೆಯೆಂಬ ಪಾಂಡ್ಯದೇಶದ ಒಬ್ಬ ಕನ್ನಿಕೆಯನ್ನು ತಂದು ತನ್ನ ಮಗನಿಗೆ ಲಗ್ನಮಾಡಿದನು. ಮಾಧವನಾದರೂ ನಿತ್ಯದಲ್ಲಿ ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ ಭೂತಯಜ್ಞ, ಬ್ರಹ್ಮಯಜ್ಞಗಳೆಂಬ ಪಂಚಯಜ್ಞಗಳಲ್ಲಿ ಆಸಕ್ತನಾಗಿಯೂ ಶುಚಿರ್ಭೂತನಾಗಿಯೂ, ಬ್ರಹ್ಮತೇಜಸ್ಸಿನಿಂದ ಸಿಂಹನಿಗೆ ಸಮಾನವಾದ ಕಾಂತಿಯಿಂದ ಯುಕ್ತನಾಗಿಯೂ ತನ್ನ ಸುಂದರಿಯಾದ ಭಾರ್ಯೆಯೊಡನೆ ಭೋಗಗಳನ್ನು ಭೋಗಿಸುತ್ತ, ಎಪ್ಪತ್ತುಮೂರು ವರ್ಷಗಳ ವರೆಗೆ ಸುಖದಿಂದ ಇರುತ್ತಿದ್ದನು.

ಹೀಗಿರಲು, ಒಂದು ದಿವಸ ಹಗಲಿನಲ್ಲಿ, ಆ ಮಾಧವನು ತನ್ನ ಸ್ತ್ರೀಯೊಡನೆ ಭೋಗಮಾಡಬೇಕೆಂದೆಣಿಸಿ, ಕಾಮಪೀಡಿತನಾಗಿ ತನ್ನ ಪತಿವ್ರತೆಯಾದ ಹೆಂಡತಿಗೆ—" ಪ್ರಿಯಳೇ, ಈ ಸಮಯದಲ್ಲಿ ನಿನ್ನ ಕೂಡ ಸಂಗಮಾಡಬೇಕೆಂದು ನನಗೆ ಅಪೇಕ್ಷೆಯಾಗಿರುವದು; ಆದ್ದರಿಂದ ನನ್ನ ಮನೋರಥವನ್ನು ಈಗಲೇ ಪೂರ್ಣಮಾಡು" ಎಂದು ಹೇಳಲು, ಅದಕ್ಕೆ ಚಂದ್ರರೇಖೆಯು— " ಪತಿಯೇ, ಶರೀರವು ಅಸ್ಥಿಮಾಂಸ ಮೊದಲಾದವುಗಳಿಂದ ಪೂರ್ಣವಾಗಿರುವದು. ಇಂಥ ಶರೀರದಿಂದ ಶರೀರಕ್ಕೆ ಸಂಗವು, ತಮ್ಮಂಥ ನಿಷ್ಕಾಮಿಗಳಾದ ಜನರಿಗೆ ಅಯೋಗ್ಯವಾದದ್ದು. ಇದಂತಿರಲಿ! ಹಗಲಿನಲ್ಲಿ ಸಂಭೋಗಮಾಡುವದಂತೂ ಬಹಳೇ ಅಯೋಗ್ಯವೆಂದು ಶಾಸ್ತ್ರದಲ್ಲಿ ಹೇಳಿರುತ್ತದೆ. ಇಷ್ಟಾಗಿ ಮನೆಯಲ್ಲಿ ಹಿರಿಯರಾದ ನಿಮ್ಮ ಮಾತಾಪಿತೃಗಳಿರುವರು; ಮತ್ತು ಅಗ್ನಿಹೋತ್ರವಿರುವದರಿಂದ ದೇವೇಂದ್ರಾದಿ ದೇವತೆಗಳು ಈ ಮನೆಯಲ್ಲಿ ವಾಸಮಾಡಿಕೊಂಡಿರುವರು. ಇವೆಲ್ಲ ಕಾರಣಗಳಿಂದ, ನೀವು ಈ ಸಮಯದಲ್ಲಿ ನನ್ನ ಕೂಡ ಸಂಭೋಗ ಮಾಡಬೇಕೆಂಬ ನಿಮ್ಮ ಕಾಂಕ್ಷೆಯನ್ನು ಬಿಡಬೇಕು" ಎಂದು ಹೇಳಿಕೊಂಡಳು.

ಆದರೆ ಹೆಚ್ಚಾದ ಕಾಮವಿಕಾರವುಳ್ಳ ಮಾಧವನು ತನ್ನ ಪತ್ನಿಯು ಹೇಳಿದ ಶಾಸ್ತ್ರಸಮ್ಮತವಾದ ಮಾತುಗಳನ್ನು ಲೆಕ್ಕಿಸದೆ,— "ಚಂದ್ರರೇಖೆಯೇ, ನೀನು ನನ್ನ ಪತ್ನಿಯಾಗಿ, ನನ್ನ ಅಪೇಕ್ಷೆಯನ್ನು ಪೂರ್ಣಮಾಡದಿದ್ದರೆ ಉಪಯೋಗ ವೇನು? ನನ್ನಾಜ್ಞೆಯಂತೆ ನಡೆಯುವದೇ ನಿನಗೆ ತಕ್ಕದ್ದು" ಎಂದು ಹೇಳಲು, ಅದನ್ನು ಕೇಳಿ ಚಂದ್ರರೇಖೆಯು ತನ್ನ ಮನಸ್ಸಿನಲ್ಲಿ— "ನನಗೆ ಇದೊಂದು ಪರಮ ಸಂಕಟವೇ ಪ್ರಾಪ್ತವಾಯಿತಲ್ಲ! ಹ್ಯಾಗೆ ಮಾಡಲಿ? ಪತಿಯ ಆಜ್ಞೆ ಯನ್ನು ಮೀರಲಿಕ್ಕೆ ಬಾರದು, ಒಂದು ವೇಳೆ ನನ್ನ ಪತಿಯ ಇಚ್ಛೆಯನ್ನು ಪೂರ್ಣಮಾಡಬೇಕೆಂದರೆ ಅದಕ್ಕೆ ನಮ್ಮ ಮನೆಯು ಯೋಗ್ಯವಾದ ಸ್ಥಳವಲ್ಲ. ಇದಂತಿರಲಿ; ನನ್ನ ಪತಿಗೆ ಎಂದೂ ಇಲ್ಲದೆ ಹಗಲಿನಲ್ಲಿ ಸಂಭೋಗವನ್ನು ಮಾಡುವ ಇಚ್ಛೆಯು ಇವತ್ತಿನ ದಿವಸ ಹುಟ್ಟುವದಕ್ಕೆ ಕಾರಣವೇನು? ಇದು ಏನೋ ನನ್ನ ಪತಿಗೆ ಕೇಡುಗಾಲವಾಗಿ ತೋರುವದು. ಒಳ್ಳೇದು! ಆವದ್ದಾ ಗಲಿ!' ಪತಿಯ ಆಜ್ಞೆಗಿಂತ ನನಗೆ ಹೆಚ್ಚಿನದೇನೂ ಇಲ್ಲ. ಎಂದು ಆಲೋಚಿಸಿ— "ಪತಿಯೇ, ನಾನು ನೀರು ತರುವದಕ್ಕಾಗಿ ಜಲಾಶಯಕ್ಕೆ ಹೋಗುವೆನು; ನೀನು ನನಗಿಂತ ಮೊದಲೇ ಆ ಸ್ಥಳಕ್ಕೆ ಹೋಗಿ ಕುಳಿತುಕೊಂಡಿರು, ಅಂದರೆ ಆ ನಿರ್ಜನವಾದ ಪ್ರದೇಶದಲ್ಲಿ ನಿನ್ನ ಇಚ್ಛೆಯನ್ನು ನಾನು ಪೂರ್ಣಮಾಡುವೆನು" ಎಂದು ಹೇಳಿದಳು. ಆ ಮಾತಿಗೆ ಒಪ್ಪಿ, ಮಾಧವನು ದರ್ಭೆಗಳನ್ನು ತರುವ ನಿಮಿತ್ತದಿಂದ ತನ್ನ ಪತ್ನಿಯು ಹೇಳಿದ ಸ್ಥಳಕ್ಕೆ ಹೊರಟು ಹೋದನು. ಚಂದ್ರರೇಖೆಯಾದರೂ ಜಲಪಾತ್ರೆಯನ್ನು ತೆಗೆದುಕೊಂಡು ಅದೇ ಸ್ಥಳಕ್ಕೆ ಬಂದಳು.

ಇತ್ತ ಮಾಧವನು ಚಂದ್ರರೇಖೆಯು ಬಂದದ್ದನ್ನು ನೋಡಿ, ಆಕೆಯ ಬೆನ್ನಹತ್ತಿ, ಒಂದು ವೃಕ್ಷವಿರುವ ಸ್ಥಳಕ್ಕೆ ಬಂದನು. ಆ ವೃಕ್ಷದ ಕೆಳಗೆ ಒಬ್ಬ ತರುಣಿಯಿದ್ದಳು. ಅವಳು ಒಳ್ಳೇ ರೂಪಲಾವಣ್ಯಯುಕ್ತಳಾಗಿದ್ದಳು. ಆಕೆಯ ಮುಖವು ಪೂರ್ಣಚಂದ್ರನಿಗೆ ಸಮಾನವಾಗಿತ್ತು. ಆಕೆಯು ಬಿಳಿಯ ವಸ್ತ್ರ ವನ್ನುಟ್ಟುಕೊಂಡು, ನಡುವಿನಲ್ಲಿ ಒಡ್ಯಾಣವನ್ನು ಧರಿಸಿ, ಬಿಗಿಯಾಗಿ ಕುಪ್ಪಸ ವನ್ನು ತೊಟ್ಟಿದ್ದಳು. ಆಕೆಯು ಮನೋಹರವಾದ ಮೂಗಿನಿಂದಲೂ, ಸುಂದರ ವಾಗಿ ತಿದ್ದಿದಂತಿರುವ ಹುಬ್ಬುಗಳಿಂದಲೂ, ಪುಷ್ಟವಾದ ಸ್ತನಗಳಿಂದಲೂ ಒಪ್ಪು ತ್ತಿದ್ದಳು. ಕಣ್ಣುಗಳಿಗೆ ಕಾಡಿಗೆಯನ್ನು ಹಚ್ಚಿಕೊಂಡಿದ್ದಳು, ಮುಂಗುರುಳು

ಗಳಿಂದ ಒಪ್ಪುತ್ತಿರುವ ತನ್ನ ಉದ್ದ ಕೂದಲುಗಳನ್ನು ಬಿಚ್ಚಿ ಮೊಳಕಾಲಪರಿ ಯಂತರವಾಗಿ ಇಳಿಬಿಟ್ಟಿದ್ದಳು. ಹಾಗು ಮನೋಹರನಾದ ಕೋಕಿಲೆಯಂತಿರುವ ಧ್ವನಿಯಿಂದ ಮಂಜುಳವಾಗಿ ಹಾಡುತ್ತ, ಇತ್ತಿಂದ ಅತ್ತ, ಅತ್ತಿಂದ ಇತ್ತ, ಮೆಲ್ಲಗೆ ಅಡ್ಡಾಡುತ್ತಿದ್ದಳು. ಆಕೆಯ ಹೆಸರು ಕುಂತಳೆ. ಅವಳು ಅಂತ್ಯಜ ಜಾತಿಯವಳು. ಅವಳನ್ನು ಕಂಡು ಮಾಧವನು ಮೋಹವಟ್ಟು ತನ್ನ ಮನಸ್ಸಿ ನಲ್ಲಿ— ಅಹಾ! ಏನು ಈ ಸ್ತ್ರೀಯ ಮನೋಹರವಾದ ರೂಪವು? ಸೃಷ್ಟಿಕರ್ತ ನಾದ ಬ್ರಹ್ಮನು ಈಕೆಯನ್ನು ನಿರ್ಮಾಣಮಾಡಬೇಕಾದರೆ ಒಳ್ಳೇ ಶ್ರಮಪಟ್ಟಿರ ಬಹುದೆಂಬದಾಗಿ ನನಗೆ ತೋರುತ್ತದೆ. ಇಂಥ ಸ್ತ್ರೀಯು ನನಗೆ ದೊರೆತರೆ, ನನ್ನ ಸಮಾನರಾದ ಭಾಗ್ಯವಂತರು ಯಾರೂ ಆಗಲಾರರು. ಈಗಲೇ ನನ್ನ ಸ್ತ್ರೀಯನ್ನು ಮನೆಗೆ ಕಳುಹಿ, ಈ ಸುಂದರಿಯನ್ನು ಕೂಡುವದಕ್ಕೆ ಯತ್ನಮಾಡುವೆನು; ನಾನು ಕಾಮಾತುರನಾಗಿ ಇಲ್ಲಿ ಬಂದದ್ದಕ್ಕೆ ದೇವರು ನನಗಾಗಿಯೇ ಈ ಸ್ತ್ರೀರತ್ನ ವನ್ನು ತಂದು ಇಟ್ಟಿರಬಹುದೆಂದು ನನ್ನ ಬುದ್ಧಿಗೆ ತೋರುತ್ತದೆ, ಎಂದು ಕಾಮೋದ್ರೇಕದಿಂದ ಉನ್ಮತ್ತನಾದನು. ತಾನು ಒಳ್ಳೇ ವಿದ್ವಾಂಸನೂ, ಸದ್ಗುಣಿಯೂ ಆಗಿದ್ದರೂ, ಆ ಸಮಯದಲ್ಲಿ ಆ ಕುಂತಳೆಯ ಮನೋಹರವಾದ ರೂಪಲಾವಣ್ಯವನ್ನು ಕಂಡು ಮೋಹಗೊಂಡದ್ದರಿಂದ, ಆತನ ಎಲ್ಲ ವಿದ್ಯೆಯೂ ಗುಣಗಳೂ ನಷ್ಟವಾಗಿ ಹೋದವು. ಈ ಲೋಕದಲ್ಲಿ ಸ್ತ್ರೀಯೆಂಬದೊಂದು ಮೋಹಕಪದಾರ್ಥವನ್ನು ದೇವರು ನಿರ್ಮಾಣಮಾಡಿರುವನು, ಅಂತೇ ಎಂಥ ವಿದ್ವಾಂಸನಾಗಲಿ, ಪ್ರಪಂಚತ್ಯಾಗವನ್ನು ಮಾಡಿದ ಮಹಾ ಮಹಾ ಋಷಿಗಳಾಗಲಿ ಸ್ತ್ರೀಯರಿಗೆ ಮೋಹಗೊಳ್ಳುವರು, ಅಂದ ಮೇಲೆ ಕಾಮಪರವಶನಾದ ಮಾಧವನು ಆ ನಿರ್ಜನವಾದ ಪ್ರದೇಶದಲ್ಲಿ ಒಬ್ಬಳೇ ಇರುವ ಸುಂದರಿಯಾದ ಕುಂತಳೆಗೆ ಮೋಹಪಟ್ಟದ್ದೇನಾಶ್ಚರ್ಯವು? ಆ ಸಮಯದಲ್ಲಿ ಮಾಧವನು ತನ್ನ ಸತಿಯಾದ ಚಂದ್ರರೇಖೆಗೆ "ಪ್ರಿಯಳೇ, ನನ್ನ ಇಚ್ಛೆಯು ಪೂರ್ಣ ವಾಯಿತು; ಇನ್ನು ಮೇಲೆ ನೀನು ಮನೆಗೆ ಹೋಗು; ನಿನ್ನ ಭಕ್ತಿಯಿಂದಲೇ ನಾನು ಸಂತುಷ್ಟನಾದೆನು' ಎಂದು ಸಮಾಧಾನದ ಮಾತುಗಳನ್ನಾಡಲು, ಆ ಚಂದ್ರರೇಖೆಯು ತನ್ನ ಪತಿಯ ಅಂತರಂಗವನ್ನು ತಿಳಿಯದೆ, ಸಂತೋಷವುಳ್ಳವ ಳಾಗಿ ಮನೆಗೆ ಹೊರಟು ಹೋದಳು.

ಇತ್ತ ತನ್ನ ಸ್ತ್ರೀಯು ಹೋದಮೇಲೆ ಮೆಲ್ಲಮೆಲ್ಲನೆ ಆ ಮಾಧವನು ಕುಂತಳೆಯ ಸಮೀಪಕ್ಕೆ ಬರಲು, ಅವಳು ಸ್ವಲ್ಪ ಹಿಂದಕ್ಕೆ ಸರಿದು,—ಬ್ರಾಹ್ಮಣನೇ, ನನ್ನ ಸಮೀಪಕ್ಕೆ ಬರಬಾರದೆಂದು ಹೇಳಲು, ಅದಕ್ಕೆ ಮಾಧವನು ಭಯಪಡದೆ, "ಮಂಗಳಾಂಗಿಯೇ, ನೀನು ಯಾರು? ಯಾವ ಜಾತಿಯವಳು? ನಿನ್ನ ಮಾತಾಪಿತೃಗಳು ಯಾರು? ನಿನ್ನ ದೇಶವು ಯಾವದು? ಹೇಳು" ಎಂದು ಕೇಳಿದನು. ಅದಕ್ಕೆ ಕುಂತಳೆಯು—"ಬ್ರಾಹ್ಮಣನೇ, ನಾನು ಸರ್ವಕಾಲದಲ್ಲಿಯೂ ಹಿಂಸಾ ಕಾರ್ಯಗಳನ್ನು ಮಾಡುವವಳಾಗಿಯೂ, ಪಾಪಿಷ್ಠಳಾಗಿಯೂ ಅಂತ್ಯಜಕುಲದಲ್ಲಿ ಹುಟ್ಟಿದವಳಾಗಿಯೂ, ಮದ್ಯಮಾಂಸಗಳನ್ನು ಭಕ್ಷಣ ಮಾಡುವವಳಾಗಿಯೂ ಇರುವೆನು. ನನ್ನನ್ನು ಇಷ್ಟೇಕೆ ವಿಚಾರಮಾಡುವೆ? ಬ್ರಾಹ್ಮಣನೇ, ವೇದ-ಉಪನಿಷತ್ತು ಮೊದಲಾದವುಗಳನ್ನು ಕಲಿತು ಪವಿತ್ರನಾದ ನೀನು, ನನ್ನ ಮುಖವನ್ನು ಸಹ ನೋಡಬಾರದು; ಹೀಗಿದ್ದು ನನ್ನನ್ನು ಕಂಡು ನೀನು ಮೋಹಪಡುವೆಯಲ್ಲ! ಇದು ನಿನಗೆ ತಕ್ಕದ್ದಲ್ಲ"ವೆಂದು ಹೇಳಲು ಅದಕ್ಕೆ ಮಾಧವನು—"ಎಲೈ ಸುಂದರಿಯೇ, ಪಿತಾಮಹನಾದ ಬ್ರಹ್ಮನು ಸಾಕ್ಷಾತ್ ನಾರಾಯಣನಿಂದ ಹುಟ್ಟಿದ್ದು ವ್ಯರ್ಥವೇ ಸರಿ; ಏಕಂದರೆ, ನಿನ್ನಂಥ ಸ್ತ್ರೀರತ್ನವನ್ನು ಅಂತ್ಯಜಕುಲದಲ್ಲಿ ಹುಟ್ಟಿಸಿರುವದು ಅವನ ತಪ್ಪು ಅಲ್ಲವೆ? ಆದ್ದರಿಂದ ಬ್ರಹ್ಮನು ಅಂಧನಿರಬಹುದೆಂದು ನನಗೆ ತೋರುತ್ತದೆ. ಇರಲಿ! ಒಂದು ವೇಳೆ ನಿನ್ನಂಥ ಸುಂದರಿಯು ಅಂತ್ಯಜಕುಲದಲ್ಲಿ ಹುಟ್ಟಿದ್ದರೂ, ಕೆಟ್ಟ ಉಪ್ಪಿನ ಸಮುದ್ರದಲ್ಲಿ ಹುಟ್ಟಿದ ನಾನಾವಿಧವಾದ ರತ್ನಗಳು ಕಾಂತಿಯುಕ್ತಗಳಾದ ಕಾರಣದಿಂದ, ದೇವತೆಗಳು ಸಹ ಅವುಗಳನ್ನು ಅಂಗೀಕರಿಸುವ ಹಾಗೆ ನಿನ್ನನ್ನು ನಾನು ಅಂಗೀಕರಿಸುವೆನು, ಇದರಲ್ಲಿ ದೋಷವಿಲ್ಲ. ಆದರೂ ನಿನ್ನನ್ನು ನಾನು ಭೋಗಿಸಿದ ಬಳಿಕ, ಆ ದೋಷದಿಂದ ನಾನೂ, ನನ್ನ ಪಿತೃಗಳೂ ನರಕವನ್ನು ಹೊಂದುವೆವು; ಚಿಂತೆಯಿಲ್ಲ, ನಿನ್ನನ್ನು ಭೋಗಮಾಡದೆ ನಾನು ಬಿಡುವದಿಲ್ಲ"ವೆಂದು ಹೇಳಲು, ಆಗ ಕುಂತಳೆಯು ತನ್ನ ಮನಸ್ಸಿನಲ್ಲಿ—ಅಯ್ಯೋ! ಈ ಬ್ರಾಹ್ಮಣನು ಈ ನಿರ್ಜನವಾದ ಪ್ರದೇಶದಲ್ಲಿ ನನ್ನ ರೂಪವನ್ನು ನೋಡಿ ಮೋಹಪಟ್ಟು, ಕಾಮೋದ್ರೇಕದಿಂದ ಉನ್ಮತ್ತನಾಗಿ ಈ ಪ್ರಕಾರ ಅನುಚಿತ ಕಾರ್ಯವನ್ನು ಮಾಡಲಿಚ್ಛಿಸುವನಲ್ಲ! ಈಗ ಈ ಬ್ರಾಹ್ಮಣನು ನನ್ನ ಸಂಸರ್ಗವನ್ನು ಮಾಡಿದರೆ,ವ್ಯರ್ಥವಾಗಿ ಕೆಟ್ಟು ಹೋಗುವನೆಂದು ವ್ಯಸನಪಟ್ಟಳು; ಹಾಗು ಅವಳು—"ಎಲೈ ಇಂದ್ರ, ಅಗ್ನಿ, ಯಮ, ವರುಣ ಮೊದಲಾದ ದಿಗ್ದೇವತೆ

ಗಳಿರಾ, ಸ್ಥಾವರ ಜಂಗಮ ರೂಪವಾದ ವಸ್ತುಗಳಿರಾ, ಚಂಡಾಲಕನ್ನಿಕೆಯಾದ ನನ್ನನ್ನು ಇಚ್ಛಿಸುವ ಈ ಪವಿತ್ರ ಬ್ರಾಹ್ಮಣನ ಮನಸ್ಸನ್ನು ತಿರುಗಿಸಿರಿ; ನನ್ನ ಸಂಗದಿಂದ ವ್ಯರ್ಥವಾಗಿ ಮರಣವನ್ನು ಹೊಂದಲಪೇಕ್ಷಿಸುವ ಇವನನ್ನು ರಕ್ಷಿಸಿರಿ." ಎಂದು ದೇವತೆಗಳಿಗೆ ಬೇಡಿಕೊಂಡು ಮಾಧವನಿಗೆ–"ಸ್ವಾಮೀ, ನನ್ನನ್ನು ದಯಮಾಡಿ ಮುಟ್ಟಬೇಡಿರಿ, ಯಾಕಂದರೆ, ಅಗ್ನಿಯನ್ನೂ, ಉಗ್ರತರವಾದ ಹುಲಿಯನ್ನೂ, ಮದೋನ್ಮತ್ತ ಗಜವನ್ನೂ ಸ್ಪರ್ಶಮಾಡಿ ಯಾವನು ಬದುಕುವನು ! ಪರಸ್ತ್ರೀಯರೆಂದರೆ ಅಗ್ನಿಸಮಾನರೆಂದು ತಿಳಿಯಿರಿ. ನಾನು ಚಾಂಡಾಲಕನ್ನಿಕೆಯು ನನ್ನನ್ನು ಹೊಂದಿ ಅಧೋಗತಿಯನ್ನೇಕೆ ಇಚ್ಛಿಸುವಿರಿ ! ಈ ಸಮಯದಲ್ಲಿ ನಿಮ್ಮ ಮಹತ್ವವಾದ ಜ್ಞಾನವು ಎಲ್ಲಿ ಹೋಯಿತು ? ಬ್ರಾಹ್ಮಣನೇ, ಇನ್ನೂ ನಿನಗೆ ವಿವೇಕ ಬರುವ ಮಾತುಗಳನ್ನು ಹೇಳುತ್ತೇನೆ, ಕೇಳು, ದೇವರು ಸ್ತ್ರೀಪುರುಷರೆಂಬ ಎರಡು ಜಾತಿಗಳನ್ನು ನಿರ್ಮಾಣಮಾಡಿ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳ ವಿಭಾಗವನ್ನುಮಾಡಿ, ಆ ಆ ಜಾತಿಯ ಪುರುಷರಿಗೆ ಆ ಆ ಜಾತಿಯ ಸ್ತ್ರೀಯರು ಯೋಗ್ಯರೆಂದು ನಿರ್ಣಯಮಾಡಿದನು. ಹೀಗಿರಲು, ಸ್ವಜಾತಿಯ ಸ್ತ್ರೀಯನ್ನು ಬಿಟ್ಟು, ಅನ್ಯಜಾತಿಯ ಸ್ತ್ರೀಯನ್ನು ಸೇವಿಸುವದು ಧರ್ಮ ವಿರುದ್ಧವಾದದ್ದು. ಎಲೈ ಬ್ರಾಹ್ಮಣಶ್ರೇಷ್ಠನೇ, ನಿನ್ನ ದೇಹವು ವೇದಗಳಿಂದ ಪವಿತ್ರವಾಗಿರುವದು; ಯಾಕಂದರೆ, ನಿನ್ನ ತಾಯಿಯಲ್ಲಿ ಋತುಕಾಲವು ಪ್ರಾಪ್ತವಾಗಿರಲು ನಿಮ್ಮ ತಂದೆಯಿಂದ ರಾತ್ರಿಯಕಾಲದಲ್ಲಿ ವೇದಮಂತ್ರಗಳಿಂದ ಪರಿಶುದ್ಧವಾದ ರೇತಸ್ಸು ಬಿಡಲ್ಪಟ್ಟಿತು. "ಅದಕ್ಕೆ ಗರ್ಭಾಧಾನ"ವೆಂದು ಶಾಸ್ತ್ರದಲ್ಲಿ ಹೇಳಿರುತ್ತದೆ. ಹೀಗೆ ನಿನ್ನ ತಾಯಿಯ ಗರ್ಭವು ಬೆಳೆದಬಳಿಕ ವೇದಮಂತ್ರಗಳಿಂದ ಸೀಮಂತ ಸಂಸ್ಕಾರವಾಗಿ, ಹತ್ತನೆಯ ತಿಂಗಳಲ್ಲಿ ನಿನ್ನ ತಾಯಿಯು ನಿನ್ನನ್ನು ಹಡೆದಳು. ನಿಮ್ಮ ತಂದೆಯು ವೇದಮಂತ್ರಗಳಿಂದ ಯುಕ್ತವಾಗಿ ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ ಮೊದಲಾದ ಸಂಸ್ಕಾರಗಳನ್ನುಮಾಡಿ, ನಿನಗೆ ವೇದಾಧ್ಯಯನವನ್ನು ಮಾಡಿಸಿ, ವಿದ್ಯದಲ್ಲಿ ಪ್ರವೀಣನನ್ನು ಮಾಡಿದನು; ಅನಂತರ ಅಗ್ನಿ ಸಾಕ್ಷಿ ಪೂರ್ವಕವಾಗಿ ಮದುವೆಯನ್ನು ಮಾಡಿರುವನು. ಈಗ ನೀನು ಆಹಿತಾಗ್ನಿಯ ಪ್ರತಷ್ಠನಾಗಿರುವೆ. ಇಂಥ ಪರಿಶುದ್ಧವಾದ ನಿನ್ನ ದೇಹಕ್ಕೂ, ಪರಮ ಅಪವಿತ್ರವಾದ ನನ್ನ ದೇಹಕ್ಕೂ ಸಂಯೋಗವು ಹ್ಯಾಗೆ ಯೋಗ್ಯವಾದೀತು ? ಪವಿತ್ರನಾದ ಬ್ರಾಹ್ಮಣನೇ, ನೀನು ಎಂಥವನೆಂದರೆ,

ನಿನ್ನ ಕಿವಿಗಳು ಶ್ರೀಹರಿಯ ಚರಿತ್ರೆಯನ್ನು ಕೇಳಿ ಕೇಳಿ ಪರಿಶುದ್ಧವಾಗಿವೆ; ನಿನ್ನ ನಾಸಿಕವು ಶ್ರೀಹರಿಗೆ ಅರ್ಪಿತವಾದ ಸುಗಂಧವನ್ನು ಆಘ್ರಾಣಮಾಡಿ ಪವಿತ್ರವಾಗಿದೆ; ನಿನ್ನ ಜಠರವು ಪರಮಾತ್ಮನಿಗೆ ನೈವೇದ್ಯಮಾಡಿದ ಅನ್ನವನ್ನು ಉಂಡು ಶುದ್ಧವಾಗಿರುವದು; ದೇವರ ಪೂಜೆಯನ್ನುಮಾಡಿ ನಿನ್ನ ಕೈಗಳು ಪವಿತ್ರವಾಗಿವೆ; ಸರ್ವಕಾಲದಲ್ಲಿಯೂ ಶ್ರೀಹರಿಯ ನಾಮೋಚ್ಚಾರವನ್ನುಮಾಡಿ ನಿನ್ನ ನಾಲಿಗೆಯು ಪುನೀತವಾಗಿದೆ; ಪವಿತ್ರವಾದ ಕ್ಷೇತ್ರ ತೀರ್ಥಗಳಿಗೆ ಹೋಗಿ, ನಿನ್ನ ಪಾದಗಳು ಶುದ್ಧವಾಗಿರುವವು. ಈ ಪ್ರಕಾರ ಶುಚಿಯಾದದ್ದು ನಿನ್ನ ದೇಹವು. ಇನ್ನು ನನ್ನ ದೇಹವನ್ನು ವರ್ಣಿಸುವೆನು ಕೇಳು,-ಸರ್ವಕಾಲದಲ್ಲಿಯೂ ನನ್ನ ನಾಲಿಗೆಯು ಅವಾಚ್ಯ ವಚನಗಳನ್ನಾಡಿ, ತಪ್ತವಾಗಿರುವದು; ನನ್ನ ಹೊಟ್ಟೆಯು ಮದ್ಯ ಮಾಂಸಗಳನ್ನು ಸೇವಿಸಿ, ಗುಲ್ಮಯುಕ್ತವಾಗಿದೆ, ನಿತ್ಯದಲ್ಲಿಯೂ ಜಾರತ್ವ ಸಂಬಂಧವಾದ ಮಾತುಗಳನ್ನು ಕೇಳಿ ನನ್ನ ಕರ್ಣಗಳು ತಿಥಿಲವಾಗಿವೆ; ಮತ್ತು ಜಾರಪುರಷನ ಮನೆಗೆ ಅಡ್ಡಾಡಿ ನನ್ನ ಪಾದಗಳು ಕಲ್ಲಿನ ಹಾಗೆ ಗಟ್ಟಿಯಾಗಿವೆ; ಗೋವಧೆಯನ್ನು ಮಾಡಿ ಮಾಡಿ, ನನ್ನ ಕೈಗಳು ಯಮದಂಡಕ್ಕೆ ಸರಿಯಾಗಿ ಕಠಿಣವಾಗಿವೆ. ಇಂಥ ಪರಮ ಪಾಪಿಷ್ಠವಾದ ನನ್ನ ದೇಹವು ನಿನ್ನ ಪವಿತ್ರವಾದ ದೇಹದ ಸಂಯೋಗಕ್ಕೆ ಹ್ಯಾಗೆ ಯೋಗ್ಯವಾದೀತು ? ವ್ಯರ್ಥವಾಗಿ ನರಕಕ್ಕೆ ಪಾತ್ರನಾಗಬೇಡ; ಪರಸ್ತ್ರೀಸಂಗದೋಷದಿಂದ ಅನೇಕ ಜನರಿಗೆ ಅನರ್ಥವಾಗಿರುವದು; ಆದ್ದರಿಂದ ಬೇಗನೆ ನಿನ್ನ ಹುಚ್ಚತನವನ್ನು ಬಿಟ್ಟು ಮನೆಗೆ ಹೋಗಿ ನಿನ್ನ ಸ್ತ್ರೀ ಸಹಿತವಾಗಿ ಸುಖದಿಂದ ಇರು, ನಿನಗೆ ಮಂಗಳವಾಗಲಿ" ಎಂದು ಕುಂತಳೆಯು ಹೇಳಿದಳು.

ಮಾಧವನು ಆ ಮಾತಿಗೆ ಲಕ್ಷ್ಯಕೊಡದೆ ಅಧಿಕವಾದ ಕಾಮುಸ್ಸಿನಿಂದ- "ಸ್ತ್ರೀಯೇ, ಅನೇಕವರ್ಷಗಳಲ್ಲಿ ಮಾಡಿದ ನನ್ನ ಪುಣ್ಯಪ್ರಭಾವದಿಂದಲೂ, ಶ್ರೀಹರಿಯ ಅನುಗ್ರಹದಿಂದಲೂ ನೀನು ನನಗೆ ದೊರಕಿರುವೆ, ಎಂದು ತಿಳಿಯುತ್ತೇನೆ; ನಿನ್ನ ಸಂಯೋಗವು ಸಾಮಾನ್ಯವಲ್ಲ; ಶುಭಕರವಾಗಿಯೂ, ಮನಸ್ಸಿಗೆ ಆನಂದಕರವಾಗಿಯೂ, ಮುಕ್ತಿಗೆ ಸಾಧನವಾಗಿಯೂ ಇರುವದು. ಸುಂದರಿಯೇ, ನಿನ್ನ ಅಧರಾಮೃತ ಪಾನವನ್ನೇ ನಾನು ಇಚ್ಛಿಸುವೆನು. ಸ್ವರ್ಗಸುಖವನ್ನು ಸಹ ಬಯಸುವದಿಲ್ಲ; ಆದ್ದರಿಂದ ಕುಂತಳೆಯೇ, ನನಗೆ ಅನುಕೂಲಳಾಗು, ಲಜ್ಜೆಯನ್ನು ಬಿಡು; ನನ್ನ ಅಪೇಕ್ಷೆಯನ್ನು ಈಗಲೇ ಪೂರ್ಣಮಾಡು. ನೀನು, ಏನಾದರೊಂದು

ಉಪದೇಶ ಹೇಳಿ ನನ್ನ ಇಚ್ಛೆಯನ್ನು ಪೂರ್ಣವಾಡದಿದ್ದರೆ, ನನ್ನ ಪ್ರಾಣಗಳು ನಿಲ್ಲಲಾರವು; ಆದ್ದರಿಂದ ಮರಣಾಭಿಮುಖನಾದ ನನ್ನನ್ನು ಬದುಕಿಸಿ ಪುಣ್ಯವನ್ನು ಪಡೆ" ಎಂದು ದೈನ್ಯೋಕ್ತಿಯಿಂದ ಹೇಳಿಕೊಂಡನು. ಆಗ ಕುಂತಳೆಯು ತನ್ನ ಮನಸ್ಸಿನಲ್ಲಿ-"ನಾನು ಈ ಬ್ರಾಹ್ಮಣನಿಗೆ ಎಷ್ಟೋ ವಿಧದಿಂದ ಹೇಳಿದೆನು. ಆದರೂ ಇವನು ಕಾಮಸನ್ನಿಯಿಂದ ಉನ್ಮತ್ತನಾಗಿ ನನ್ನ ಮಾತುಗಳನ್ನೇ ಲಕ್ಷಿಸುವದಿಲ್ಲ, ಮುಂದೆ ಇವನ ಗತಿಯೇನು ? ನನ್ನ ಸಂಭೋಗದಿಂದ ವ್ಯರ್ಥವಾಗಿ ಈ ಬ್ರಾಹ್ಮಣನು ಕೆಡುತ್ತಾನಲ್ಲ ! ಒಳ್ಳೇದು, ನಾನು ಇಲ್ಲಿಂದ ಓಡಿಹೋಗಿಯಾದರೂ ಇವನನ್ನು ಉಳಿಸಬೇಕು," ಎಂದು ಆಲೋಚನೆಯನ್ನು ಮಾಡಿ, ಏನೂ ಉತ್ತರ ಕೊಡದೆ ಓಡಹತ್ತಿದಳು; ಆಗ ಮಾಧವನು ಆಕೆಯ ಬೆನ್ನುಹತ್ತಿ ಅವಳನ್ನು ಮುಟ್ಟಿದನು. ಆಗ ಕುಂತಳೆಯು ಆಕ್ರೋಶ ಮಾಡುತ್ತ-"ಬ್ರಾಹ್ಮಣನೇ, ನಿನ್ನ ತಾಯಿತಂದೆಗಳ ಆಣೆಯದೆ, ನಿನ್ನ ಮಾತಾಮಹನ ಆಣೆಯದೆ, ನನ್ನನ್ನು ಮುಟ್ಟಬೇಡ;" ಎಂದು ಖಂಡಿತವಾಗಿ ಹೇಳಿದಳು; ಆದರೆ ಕಾಮಪರವಶನಾದ ಮಾಧವನು ಆಣೆಯನ್ನು ಲಕ್ಷ್ಯಕ್ಕೆ ತರುವನೇ ? ಬಲಾತ್ಕಾರದಿಂದ ಅವಳನ್ನು ಹಿಡಿದು ಸಂಭೋಗ ಮಾಡಿದನು. ಬಳಿಕ ಕುಂತಳೆಯು-"ಬ್ರಾಹ್ಮಣನೇ, ಆದದ್ದು ಆಗಿಹೋಯಿತು; ಇನ್ನು ಮೇಲೆ ನೀನೇ ನನಗೆ ಪತಿಯೆಂದು ತಿಳಿದು ನಿನ್ನನ್ನು ಕೂಡಿ ಇರುವೆನು; ಆದ್ದರಿಂದ ನಿನ್ನ ಜನಿವಾರವನ್ನು ಕಿತ್ತು ಹಾಕು, ಶಿರಸ್ಸನ್ನು ಮುಂಡಣ ಮಾಡಿಸಿಕೊಂಡು ಚಂಡಿಕೆಯನ್ನು ತೆಗೆದು ಚಲ್ಲು, ನೀನು ಚಂಡಾಲತ್ವವನ್ನು ಹೊಂದಿದೆ, ಇನ್ನು ಅದಕ್ಕೆ ಯೋಗ್ಯವಾಗಿ ಮದ್ಯಗೋಮಾಂಸಗಳನ್ನು ಭಕ್ಷಣ ಮಾಡು;" ಎಂದು ಹೇಳಿದಳು. ಆಕೆಯು ಹೇಳಿದ ಹಾಗೆ ಮಾಧವನು ಚಾಂಡಾಲಾಚರಣೆಯನ್ನು ಮಾಡುವವನಾಗಿ, ಆಕೆಯನ್ನು ಕರೆದುಕೊಂಡು ಕೃಷ್ಣವೇಣಿಯು ನದೀತೀರಕ್ಕೆ ಬಂದು, ಅಲ್ಲಿ ಒಂದು ಗುಡಿಸಲಿನಲ್ಲಿದ್ದು ನಿತ್ಯದಲ್ಲಿಯೂ ಮದ್ಯಪಾನಮಾಡುತ್ತ, ಗೋಮಾಂಸವನ್ನು ತಿನ್ನುತ್ತ, ವಿವೇಕರಹಿತನಾಗಿ ಸರ್ವಕಾಲದಲ್ಲಿಯೂ ಅವಳೊಡನೆ ಕ್ರೀಡಾಸಕ್ತನಾಗಿರುತ್ತಿದ್ದನು. ಜಗತ್ತಿನಲ್ಲಿ ಮನ್ಮಥನ ಪ್ರತಾಪವು ಅಗಾಧವಾದದ್ದು. ದೈವಗತಿಯನ್ನು ಮೀರುವವರು ಯಾರು? ಹೀಗೆ ಮಾಧವನು ಕುಂತಳೆಯಲ್ಲಿ ಆಸಕ್ತನಾಗಿ ತಂದೆತಾಯಿಗಳನ್ನೂ, ಪತಿವ್ರತೆಯಾದ ತನ್ನ ಸತಿಯನ್ನೂ ಮರೆತನು. ಮೊದಲು ಅಗ್ನಿಹೋತ್ರ ಮೊದಲಾದ ಕರ್ಮಗಳನ್ನು ಮಾಡುತ್ತಿದ್ದ ಆ ಮಾಧವನು ಚಂಡಾಲನಂತೆ ಆಚರಣೆಯನ್ನು ಮಾಡುತ್ತ ಇರಹತ್ತಿದನು. ಈ

ಪ್ರಕಾರ ಹನ್ನೆರಡು ವರ್ಷಗಳವರೆಗೆ ಕಾಲಕ್ರಮಣ ಮಾಡುತ್ತಿರಲು, ದೈವಯೋಗ ದಿಂದ ಕುಂತಳೆಯು ಮೃತವಾದಳು. ಆಗ ಮಾಧವನಿಗೆ ಪರಮದುಃಖವು ಪ್ರಾಪ್ತ ವಾಗಿ, "ಕೆಟ್ಟಮೇಲೆ ಬುದ್ಧಿ ಬಂದಿತು" ಎಂಬಂತೆ ತಾನು ಮಾಡಿದ ಕೆಟ್ಟ ಕರ್ಮಕ್ಕೆ ಪಶ್ಚಾತ್ತಾಪ ಪಟ್ಟು. ವಿವೇಕ ಬುದ್ಧಿಯು ಹೊಳೆಯಲು, ತನ್ನೊಳಗೆ-ಅಯ್ಯೋ! ನಾನು ಎಂಥ ಅವಿವೇಕಿಯು! ವೃದ್ಧರಾದ ಮಾತಾಪಿತೃಗಳನ್ನೂ, ಪತಿವ್ರತೆಯಾದ ನನ್ನ ಸತಿಯನ್ನೂ ತ್ಯಾಗಮಾಡಿದೆನು ನಾನು ಅಗಲಿದ್ದರಿಂದ ಅವರ ಅವಸ್ಥೆಯು ಏನಾಗಿರುವದೋ ಏನೋ ! ಇನ್ನುಮುಂದೆ ನನ್ನ ಗತಿಯೇನು ? ಪವಿತ್ರವಾದ ಬ್ರಾಹ್ಮಣತ್ವವನ್ನು ಬಿಟ್ಟು ಚಂಡಾಲನಾದೆನು; ಇದರಿಂದ ನಾನೂ ನನ್ನ ಪಿತೃಗಳೂ ಮಹಾನರಕಕ್ಕೆ ಪಾತ್ರರಾದೆವಲ್ಲ ! ಕುಂತಳೆಯು ಚಂಡಾಲ ಜಾತಿಯವಳಾದರೂ, ನಾನು ಕೆಡಬಾರದೆಂಬದಾಗಿ ಆಕೆಯು ಪರಿಪರಿಯಿಂದ ನನ್ನನ್ನು ಬೋಧಿಸಿದಳು; ಆದರೆ ಕಾಮಾಂಧನಾದ ನಾನು ಆಕೆಯ ಮಾತು ಕೇಳದೆ ಕೆಟ್ಟು ಹೋದೆನು. ಇನ್ನು ಮೇಲೆ ನಾನು ಎಲ್ಲಿಗೆ ಹೋಗಲಿ ? ಎಂದು ವ್ಯಥೆಪಡುತ್ತ ಭ್ರಮಿಷ್ಟನ ಹಾಗೆ ಸಂಚರಿಸಹತ್ತಿದನು.

"ಈ ಲೋಕದೊಳಗೆ ಪೂರ್ವಜನ್ಮದಲ್ಲಿ ಮಾಡಿದ ಸುಕೃತವಿದ್ದರೆ, ಮನು ಷ್ಯನು ಎಷ್ಟು ಕೆಟ್ಟುಹೋದರೂ ಆ ಪುಣ್ಯಫಲದಿಂದ ಅವನಿಗೆ ಸದ್ಗತಿಯಾಗುವ ಕಾಲವು ಬಂದೊದಗುವದು." ಅದು ಹ್ಯಾಗಂದರೆ,-ಮಾಧವನು ಭ್ರಾಂತನ ಹಾಗೆ ತಿರುಗಾಡುತ್ತಿದ್ದನು. ದೈವಯೋಗದಿಂದ ಉತ್ತರ ದೇಶದ ಅನೇಕ ರಾಜರು ತಮ್ಮ ಸಂಗಡ ಮಂದಿಯನ್ನು ಕರೆದುಕೊಂಡು, ಶೇಷಾಚಲಕ್ಕೆ ಯಾತ್ರೆಯ ಸಲುವಾಗಿ ಅದೇ ದಾರಿಯಿಂದಲೇ ಹೋಗುತ್ತಿದ್ದರು. ಮಾಧವನಾದರೂ ಅವರ ಬೆನ್ನು ಹತ್ತಿ ನಡೆದನು. ಯಾತ್ರಸ್ಥರಾದ ಆ ಜನರು ಎಲ್ಲಿ ಇಳಿದು ಕೊಳ್ಳುವರೋ, ಈ ಮಾಧವನು ಅಲ್ಲಿಯೇ ಇಳಿಯುವನು; ಮತ್ತು ಅವರು ಭೋಜನ ಮಾಡಿದ ನಂತರ ಅವರು ಚಲ್ಲಿದ ಎಂಜಲವನ್ನು ತಿನ್ನುವನು. ಹೀಗೆ ಅವರು ಮಾರ್ಗಕ್ರ ಮಣ ಮಾಡಿ ಶೇಷಾಚಲಕ್ಕೆ ಬಂದು ಮುಟ್ಟಲು, ಮಾಧವನು ತಾನೂ ಶೇಷಾ ಚಲಕ್ಕೆ ಬಂದನು. ಆ ಶೇಷಪರ್ವತದಲ್ಲಿ ಆ ರಾಜರು ಕಪಿಲತೀರ್ಥದಲ್ಲಿ ಸ್ನಾನ ವನ್ನು ಮಾಡಿ, ವಪನವನ್ನು ಮಾಡಿಸಿಕೊಂಡು, ತಮ್ಮ ಪಿತೃಗಳ ಶ್ರಾದ್ಧವನ್ನು ಮಾಡಿ, ಪಿಂಡಗಳನ್ನು ಕೊಟ್ಟರು. ಆಗ ಮಾಧವನಾದರೂ ತಾನೂ ಕಪಿಲತೀ ರ್ಥದಲ್ಲಿ ಸ್ನಾನವನ್ನು ಮಾಡಿ, ತನ್ನ ಪಿತೃಗಳ ಶ್ರಾದ್ಧವನ್ನು ಪೂರೈಸಿ, ಅನ್ನದ

ಪಿಂಡಗಳನ್ನು ಮಾಡುವದಕ್ಕೆ ತನ್ನಲ್ಲಿ ಅನ್ನಕ್ಕೆ ಗತಿಯಿಲ್ಲವ್ದರಿಂದ, ಮಣ್ಣಿನ ಪಿಂಡ ಗಳನ್ನು ಮಾಡಿ ಪಿತೃಗಳಿಗೆ ಕೊಟ್ಟನು. ಹೀಗೆ ಆ ಮಾಧವನು ಪೂರ್ವಪುಣ್ಯ ಪ್ರಭಾವದಿಂದ ಶ್ರೀ ವೈಕುಂಠಗಿರಿಯಲ್ಲಿ ಕಪಿಲತೀರ್ಥ ಸ್ನಾನಮಾಡಿ ಪಿತೃಗಳಿಗೆ ಪಿಂಡಪ್ರದಾನ ಮಾಡಿದ್ದರಿಂದ ಅವನ ಪಿತೃಗಳು ಮೋಕ್ಷಕ್ಕೆ ಹೋದರು. ಮರು ದಿವಸ ಪ್ರಾತಃಕಾಲಕ್ಕೆ ಎದ್ದು ಯಾತ್ರಸ್ಥರಾದ ಜನರು ವೈಕುಂಠಗಿರಿಯನ್ನು ಹತ್ತಿದರು. ಮಾಧವನಾದರೂ ಅವರಕೂಡ ಗಿರಿಯನ್ನು ಆರೋಹಣಮಾಡಿ, ಆ ಜನರು ವಾಸಮಾಡಿದ ಸ್ಥಳದ ಹತ್ತರವೇ ವಾಸಮಾಡಿಕೊಂಡಿದ್ದನು. ಆ ಪವಿತ್ರ ಪರ್ವತದ ಸ್ಪರ್ಶಮಾತ್ರದಿಂದ ಪಾಪಿಷ್ಠನಾದ ಮಾಧವನ ಹೃದಯದಲ್ಲಿದ್ದ ಪಾಪವು ತಳಮಳಿಸಹತ್ತಿ, ನೊಣವನ್ನು ತಿಂದರೆ ಹೊಟ್ಟೆಯೊಳಗಿರುವ ಅನ್ನವು ವಾಂತಿಯಾಗುವಹಾಗೆ, ವಾಂತಿರೂಪದಿಂದ ಪಾಪವು ಹೊರಗೆ ಬಿದ್ದಿತು. ಆಗ ಅವನ ಶರೀರದಿಂದ ಹುಟ್ಟಿದ ಅಗ್ನಿಯು ಮದ-ಮಾಂಸ-ಭಕ್ಷಣದಿಂದ ಉತ್ಪನ್ನ ವಾದ ಪಾಪರೂಪ ವಾಂತಿಯನ್ನು ಸುಡಲಿಕ್ಕೆಹತ್ತಿತು. ಆ ಸಮಯದಲ್ಲಿ ಮಾಧ ವನ ಪಾಪದ ಹೊಗೆಯು ದುರ್ಗಂಧವಾಗಿ ಪಸರಿಸಹತ್ತಿತು.

ಆಗ ಬ್ರಹ್ಮರುದ್ರೇಂದ್ರಾದಿ ದೇವತೆಗಳು— "ಇದೇನಾಶ್ಚರ್ಯ"ವೆಂದು ತಮ್ಮ ಅಂತಜ್ಞಾನದಿಂದ ಈ ಅಭಿಪ್ರಾಯವನ್ನು ತಿಳಿದರು. ಅವರು ತಮ್ಮ ವಿಮಾನಗಳನ್ನು ಏರಿಕೊಂಡು ಈ ವೈಕುಂಠಪರ್ವತಕ್ಕೆ ಪ್ರಾಪ್ತರಾದರು. ಅವರು ಮಾಧವನ ಚರಿತ್ರವನ್ನು ನೋಡಿ— " ಧನ್ಯ ಧನ್ಯ " ಎಂದು ಹೊಗಳಿ, ಅವನ ತಲೆಯ ಮೇಲೆ ಹೂಮಳೆಯನ್ನು ಸುರಿದರು. ಸರಸ್ವತಿಯಿಂದ ಸಹಿತನಾದ ಬ್ರಹ್ಮನು ತನ್ನ ವಿಮಾನದಿಂದ ಇಳಿದು, ಮಾಧವನ ಸಮೀಪಕ್ಕೆ ಬಂದು, ಶ್ರೀವಿಷ್ಣುವು ಅಜಾಮಿಳನನ್ನು ಹ್ಯಾಗೆ ಉದ್ಧಾರಮಾಡಿದನೋ ಹಾಗೆ ಬ್ರಹ್ಮನು ಮಾಧವನನ್ನು ಕರೆದು, ಅವನ ಶಿರಸ್ಸನ್ನು ಆಘ್ರಾಣಿಸಿ— " ಮಾಧವನೇ, ಈಗ ನೀನು ಪಾಪದಿಂದ ರಹಿತನಾಗಿರುವೆ; ಆದ್ದರಿಂದ ಈಗ ನೀನು ಸ್ವಾಮಿಪುಷ್ಕರಣಿ ಯಲ್ಲಿ ಸ್ನಾನವನ್ನು ಮಾಡಿ, ಶ್ರೀವರಾಹಮೂರ್ತಿಯನ್ನು ನಮಸ್ಕರಿಸಿ, ಈ ನಿನ್ನ ದೇಹವನ್ನು ಬಿಡು. ನೀನು ಮುಂದಿನ ಜನ್ಮದಲ್ಲಿ ಪಾಂಡವರ ದೌಹಿತ್ರಕುಲದಲ್ಲಿ ಉತ್ಪನ್ನನಾದ ಸುಧರ್ಮರಾಜನ ಪುತ್ರನಾಗಿ, ತೋಂಡದೇಶಕ್ಕೆ ಅಧಿಪತಿಯಾಗಿ ಈ ಜಗತ್ತಿನಲ್ಲಿ ವಿಖ್ಯಾತನಾಗಿ ನಿಷ್ಕಂಟಕವಾದ ರಾಜ್ಯವನ್ನು ಪರಿಪಾಲಿಸುವೆ;

ಮತ್ತು ಜಗಜ್ಜನನಿಯಾದ ಮಹಾಲಕ್ಷ್ಮಿಯು ನಿನಗೆ ಪುತ್ರಿಯಾಗುವಳು. ಜಗತ್ಪತಿಯಾದ ಶ್ರೀವಿಷ್ಣುವು ಅಳಿಯನಾಗುವನು. ಬಳಿಕ ನೀನು ವೈಕುಂಠಲೋಕವನ್ನು ಹೊಂದುವೆ" ಎಂದು ವರವನ್ನು ಕೊಟ್ಟನು. ಅಂದಿನಿಂದ ಬ್ರಹ್ಮನು ಆ ಶೇಷಾಚಲಕ್ಕೆ "ವೇಂಕಟಾಚಲ"ವೆಂದು ಹೆಸರನ್ನು ಇಟ್ಟನು; ಅದು ಹ್ಯಾಗಂದರೆ,— "ವೇಂ, ಅಂದರೆ ಪಾಪವನ್ನು, ಕಟತೇ, ಅಂದರೆ ನಾಶಮಾಡುತ್ತದೆ." ಆದ್ದರಿಂದ "ವೇಂಕಟಾಚಲ"ವೆಂದು ಅವ್ರೊಕ್ತಿನಿಂದ ಪ್ರಸಿದ್ಧವಾಯಿತು. ಕೇಳೈ ಜನಕರಾಜನೇ, ಪ್ರಾತಃಕಾಲದಲ್ಲಿ ಎದ್ದು ಯಾವ ಮನುಷ್ಯನು ವೇಂಕಟಾಚಲವನ್ನು ಸ್ಮರಿಸುತ್ತಾನೋ ಅವನಿಗೆ ಗಂಗಾ-ಸೇತು-ಯಾತ್ರೆಗಳನ್ನು ಸಹಸ್ರವೇಳೆ ಮಾಡಿದ ಫಲವು ಪ್ರಾಪ್ತವಾಗುವದು. ಈ ಚರಿತ್ರೆಯನ್ನು ನಾನು ಗೌತಮ ಋಷಿಯ ಮುಖದಿಂದ ಕೇಳಿದ್ದೆನು. ಪುಣ್ಯಕರವಾಗಿಯೂ, ಪರಮಕಲ್ಯಾಣಕರವಾಗಿಯೂ, ಮಂಗಲಪ್ರದವಾಗಿಯೂ ಇರುವ ಈ ಕಥೆಯನ್ನು ನಿನಗೆ ಹೇಳುತ್ತೇನೆ. ಮಹಾಪವಿತ್ರವಾದ ಈ ಮಹಿಮೆಯನ್ನು ಪಠಣಮಾಡಿದ ಮನುಷ್ಯನಿಗೆ ಶ್ರೀಹರಿಯು ಮಂಗಲವನ್ನು ಕೊಡುವನು.

॥ ಇತಿ ಶ್ರೀಭವಿಷ್ಯೋತ್ತರ ಪುರಾಣದಲ್ಲಿ ಶ್ರೀವೇಂಕಟಗಿರಿಯ ಮಾಹಾತ್ಮ್ಯದಲ್ಲಿ "ಚತುರ್ಯುಗ ನಾಮ ಮಹಿಮಾವರ್ಣನ"ವೆಂಬ ಒಂದನೇ ಅಧ್ಯಾಯವು ಮುಗಿದದು ॥

# ೨ನೆಯ ಅಧ್ಯಾಯ



ಜನಕರಾಜನು ಶತಾನಂದ ಋಷಿಗಳಿಗೆ ನಮಸ್ಕರಿಸಿ, "ಸ್ವಾಮೀ ನಿಮ್ಮಿಂದ ಚತುರ್ಯುಗನಾಮಮಾಹಾತ್ಮ್ಯವನ್ನು ಕೇಳಿ ಸಂತೋಷವಾಯಿತು; ಈ ಮೊದಲು ನೀವು "ಪೂಜ್ಯನಾದ ನಾರಾಯಣನು ಶೇಷಾಚಲಕ್ಕೆ ಪ್ರಾಪ್ತನಾಗುವನೆಂದು ವಾಯುವು ಶೇಷನಿಗೆ ಹೇಳಿದನು" ಎಂದು ಹೇಳಿದಿರಲ್ಲ ! ಆ ನಾರಾಯಣನು ಶೇಷಾಚಲಕ್ಕೆ ಪ್ರಾಪ್ತವಾದ ಕಥೆಯನ್ನು ನನಗೆ ವಿಸ್ತಾರಪೂರ್ವಕವಾಗಿ ಹೇಳಿರಿ. ಶ್ರೀಮನ್ನಾರಾಯಣನು ಶೇಷಪರ್ವತಕ್ಕೆ ಯಾಕೆ ಬಂದನು ? ಮತ್ತು ಅವನು ಅಲ್ಲಿಗೆ ಬಂದು ಮಾಡಿದ ಕಾರ್ಯವೇನು ? ವೈಕುಂಠ

ಲೋಕವನ್ನು ಶ್ರೀಹರಿಯು ಯಾಕೆ ಬಿಟ್ಟುಬಂದನು? ಆ ಶ್ರೀಮಹಾವಿಷ್ಣುವಿನ ಚರಿತ್ರವನ್ನೂ, ಆ ಪರ್ವತದಲ್ಲಿರುವ ತೀರ್ಥಗಳ ಮಹಿಮೆಯನ್ನೂ, ವೇಂಕಟಾಚಲದ ಮಹಿಮೆಯನ್ನೂ, ವರಾಹರೂಪಿಯಾದ ಪರಮಾತ್ಮನ ಮಾಹಾತ್ಮ್ಯೆವನ್ನೂ ವಿಸ್ತಾರವಾಗಿ ಹೇಳಿರಿ; ಇದಲ್ಲದೆ ಆಕಾಶರಾಜನ ಚರಿತ್ರವನ್ನೂ, ಲಕ್ಷ್ಮೀದೇವಿಯು ಅವನಿಗೆ ಹ್ಯಾಗೆ ಪುತ್ರಿಯಾದಳೆಂಬದನ್ನೂ, ಆ ಜಗತ್ಪತಿಯಾದ ಶ್ರೀವಿಷ್ಣುವು ಆ ರಾಜನಿಗೆ ಜಾಮಾತನಾದ ವೃತ್ತಾಂತವನ್ನೂ, ದೇವತೆಗಳೂ, ಋಷಿಗಳೂ ವೇಂಕಟಾಚಲಕ್ಕೆ ಪ್ರಾಪ್ತರಾದ ಸಂಗತಿಯನ್ನೂ ನನಗೆ ಹೇಳಿರಿ, ಎನಲು, ಶತಾನಂದಋಷಿಗಳು ಹೇಳತೊಡಗಿದರು.

ಕೇಳೈ ಜನಕರಾಜನೇ, ಪೂರ್ವದಲ್ಲಿ ಕಶ್ಯಪ ಮೊದಲಾದ ಋಷಿಗಳೆಲ್ಲರೂ ಕೂಡಿ ಗಂಗಾನದಿಯ ತೀರದಲ್ಲಿ ಯಜ್ಞವನ್ನು ಮಾಡಲಿಕ್ಕೆ ಪ್ರಾರಂಭಿಸಿದರು. ಆ ಸಮಯದಲ್ಲಿ ಋಷಿಶ್ರೇಷ್ಠನಾದ ನಾರದನು ಅಲ್ಲಿಗೆ ಬಂದು, ಅವರು ಮಾಡುವ ಯಜ್ಞವನ್ನು ನೋಡಿ ಆ ಋಷಿಗಳಿಗೆ— "ಎಲೈ ಋಷಿಗಳಿರಾ, ಈ ಯಜ್ಞವನ್ನು ನೀವು ಏನು ಕಾರಣ ಮಾಡುತ್ತೀರಿ? ಮತ್ತು ಈ ಯಜ್ಞದ ಫಲವು ಯಾರಿಗೆ ದೊರೆಯುವದು? ಇದರಲ್ಲಿ ಅಧ್ವರ್ಯುವು ಯಾರು? ದೇವತೆಗಳು ಯಾರು? ನೀವು ಮಾಡುವ ಯಜ್ಞದ ಫಲವನ್ನು ಯಾವ ದೇವರಿಗೆ ಸಮರ್ಪಿಸುವಿರಿ? ಎಂದು ಕೇಳಿದನು. ಆಗ ನಾರದನ ಮಾತನ್ನು ಕೇಳಿ, ಎಲ್ಲ ಋಷಿಗಳೂ ಈ ಸಂಗತಿಯನ್ನು ತಿಳಿಯದೆ, ಸಂಶಯವುಳ್ಳವರಾಗಿ ತಮ್ಮ ತಮ್ಮೊಳಗೆ ಮಾತಾಡಿದರೇನಂದರೆ,— ಏನೂ ತಿಳಿಯದೆ ನಾವು ಮಾಡುವ ಯಜ್ಞದಿಂದ ಫಲವೇನು? ಈ ನಾರದನು ಆಡುವ ಮಾತು ಯೋಗ್ಯವೇ ಸರಿ; ಈ ಯಜ್ಞದ ಫಲವನ್ನು ನಾವು ಯಾವ ದೇವರಿಗೆ ಸಮರ್ಪಣ ಮಾಡಬೇಕು? ಈ ವಿಷಯದಲ್ಲಿ ವಿಚಾರ ಮಾಡದೆ, ಹಾಗೇ ನಾವು ಯಜ್ಞವನ್ನು ಮಾಡಬಾರದು, ಎಂದು ಗೊತ್ತುಮಾಡಿಕೊಂಡು, ಸರ್ವರೂ ಕೂಡಿ ಬ್ರಹ್ಮವಿದನಾಗಿಯೂ, ಶ್ರೇಷ್ಠನಾಗಿಯೂ ಇರುವ ಭೃಗುಋಷಿಯನ್ನು ಕರೆದು ನಮಸ್ಕರಿಸಿ, "ಮಹಾಬುದ್ಧಿಶಾಲಿಯಾದ ಭೃಗುಋಷಿಯೇ, ಸರ್ವದೇವತೆಗಳಲ್ಲಿ ಶ್ರೇಷ್ಠನಾದ ದೇವನು ಯಾರು? ಇದನ್ನು ನೀನು ತಿಳಿದುಕೊಂಡು ಬರಬೇಕು" ಎಂದು ಹೇಳಿದರು. ಅದಕ್ಕೆ ಭೃಗುಋಷಿಯು— "ಹಾಗೇ ಆಗಲಿ" ಎಂದು ಅಲ್ಲಿಂದ ಹೊರಟು,

ತನ್ನ ಮನಸ್ಸಿನಲ್ಲಿ— "ಸರ್ವಲೋಕಗಳಿಗೆ ಪಿತಾಮಹನಾದ ಬ್ರಹ್ಮನೇ ಸರ್ವದೇವತೆಗಳಲ್ಲಿ ಶ್ರೇಷ್ಠನಾಗಿರಬಹುದು; ಆದ್ದರಿಂದ ನಾನು ಸತ್ಯಲೋಕಕ್ಕೆ ಹೋಗಬೇಕು" ಎಂದು ಯೋಚಿಸಿ ಅಲ್ಲಿಗೆ ಹೋಗಿ, ಚತುರ್ಮುಖನಾಗಿಯೂ, ದೀರ್ಘವಾದ ಅಂಗವುಳ್ಳವನಾಗಿಯೂ, ನಾಲ್ಕು ಮುಖಗಳಲ್ಲಿಯೂ ಹೊರಡುತ್ತಿರುವ ನಾಲ್ಕು ವೇದಘೋಷಗಳಿಂದ ಸಹಿತನಾಗಿಯೂ, ಇಂದ್ರಾದಿ ದೇವತೆಗಳಿಂದ ಕೂಡಿಕೊಂಡು ಜಗನ್ನಿಯಾಮಕನಾದ ನಾರಾಯಣನನ್ನು ಸ್ತೋತ್ರ ಮಾಡುತ್ತ ಮಹಾ ತೇಜಸ್ಸಿನಿಂದ ಪ್ರಕಾಶಿಸುವನಾಗಿಯೂ, ತನಗೆ ಅಗ್ರಜನಾಗಿಯೂ ಇರುವ ಬ್ರಹ್ಮನನ್ನು ಕಂಡನು. ಮತ್ತು ಅತ್ಯಂತ ಭಕ್ತಿಯಿಂದ ಸಾಷ್ಟಾಂಗನಮಸ್ಕಾರವನ್ನು ಮಾಡಿ, ಕೈಜೋಡಿಸಿಕೊಂಡು ನಿಂತನು. ಬ್ರಹ್ಮನು ಈ ಭೃಗುಋಷಿಯನ್ನು ಕಂಡು, ಮಾತನಾಡಿಸದೆ ಸುಮ್ಮನೆ ಇದ್ದನು. ಆಗ ಭೃಗುಋಷಿಯು ತನ್ನ ಮನಸ್ಸಿನಲ್ಲಿ— "ಈ ಬ್ರಹ್ಮನು ಬಹಳ ಅಜ್ಞಾನಿಯಾಗಿ ತೋರುವನು. ಅಂತೇ ಬಂದಿರುವ ನನ್ನನ್ನು ವಿಚಾರಿಸದೆ ಸುಮ್ಮನೆ ಇರುವನು. ಆದ್ದರಿಂದ ಇವನಲ್ಲಿ ಸಾರಾಸಾರ ವಿಚಾರವಿಲ್ಲ, ಇವನು ದೇವತಾಶ್ರೇಷ್ಠನಲ್ಲ, ಮತ್ತು ನಾವು ಮಾಡುವ ಯಜ್ಞದ ಫಲವನ್ನು ಸ್ವೀಕಾರ ಮಾಡಲಿಕ್ಕೆ ಇವನು ಯೋಗ್ಯನೂ ಅಲ್ಲ"ವೆಂದು ವಿಚಾರವಮಾಡಿ, "ಇನ್ನು ಮುಂದೆ ಕೈಲಾಸಪತಿಯಾದ ಶಂಕರನಲ್ಲಿಗೆ ಹೋಗುವೆನು, ಅವನೇನಾದರೂ ಯೋಗ್ಯನೋ, ಹ್ಯಾಗೋ ತಿಳಿಯುವೆನು" ಎಂದು ಯೋಚಿಸಿ, ಅಲ್ಲಿಂದ ಕೈಲಾಸಪರ್ವತಕ್ಕೆ ಹೊರಟನು.

ಆಗ ಭೃಗುಋಷಿಯು ಕೈಲಾಸಪರ್ವತಕ್ಕೆ ಹೋಗಿ, ಕಾಮಾಸಕ್ತನಾದ ಶಂಕರನು ನಿಜಮಂದಿರದಲ್ಲಿ ಪಾರ್ವತಿಯೊಡನೆ ಕ್ರೀಡೆಯನ್ನು ಮಾಡುತ್ತಿರುವದನ್ನು ಕಂಡನು. ಕಾಮುಕನಾದ ಶಂಕರನು ಆಗ ಬಂದಿರುವ ಭೃಗುಋಷಿಯನ್ನು ಲಕ್ಷಿಸದೆ ಇದ್ದನು. ಆದರೆ ಎದುರಿಗೆ ನಿಂತಿರುವ ಭೃಗುಋಷಿಯನ್ನು ಪಾರ್ವತಿಯು ಕಂಡು ಲಜ್ಜೆಯಿಂದ ತನ್ನ ಪತಿಗೆ—"ಮಹಾಬಾಹುಶಾಲಿಯೇ, ನಮ್ಮ ಸಮ್ಮುಖದಲ್ಲಿ ಭೃಗುಋಷಿಯು ಪ್ರಾಪ್ತನಾಗಿರುವನು, ಆದ್ದರಿಂದ ನನ್ನನ್ನು ಬಿಡು" ಎಂದು ಹೇಳಲು, ಅದನ್ನು ಕೇಳಿ ರುದ್ರನು—"ಈ ಜ್ಞಾನಶೂನ್ಯನಿಗೆ ಇಂಥ ಸಮಯದಲ್ಲಿ ಇಲ್ಲಿಗೆ ಬರುವದಕ್ಕೆ ತಿಳಿಯುವದಿಲ್ಲವೇ ? ಇವನಿಗೆ ಈಗಲೇ ಶಾಸನೆ ಮಾಡುವೆನು," ಎಂದು ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು

ಹೊಡೆಯುವದಕ್ಕೆ ಧಾವಿಸಿಬಂದನು. ಆಗ ಋಷಿಯು ಕೋಪದಿಂದ ಪರಮೇಶ್ವರ ನಿಗೆ "ರುದ್ರನೇ, ಜನರಿಂದ ನೀನು ಪೂಜೆಯನ್ನು ಹೊಂದಬೇಡ, ನಿನ್ನ ಲಿಂಗವೇ ಪೂಜಿಸಲ್ಪಡಲಿ" ಎಂದು ಶಾಪವನ್ನು ಕೊಟ್ಟು, ತಾನು ಓಡಿಹೋಗಿ ಶಂಕರನ ಕೈಯೊಳಗಿಂದ ಪಾರಾದನು.

ಹೀಗೆ ಭೃಗುಋಷಿಯು ಹೋಗುತ್ತ ತನ್ನ ಮನಸ್ಸಿನಲ್ಲಿ—"ಇನ್ನು ನಾನು ಹೋಗುವದೆಲ್ಲಿ? ತ್ರಿಮೂರ್ತಿಗಳಲ್ಲಿ ಬ್ರಹ್ಮನನ್ನೂ, ರುದ್ರನನ್ನೂ ನೋಡಿದೆನು, ಅವರಿಬ್ಬರೂ ನನಗೆ ಸರಿದೋರಲಿಲ್ಲ, ಇನ್ನುಮೇಲೆ ವಿಷ್ಣು ಲೋಕಕ್ಕೆ ಹೋಗಿ, ಅಲ್ಲಿ ಶ್ರೀಮಹಾವಿಷ್ಣುವನ್ನು ಪರೀಕ್ಷಿಸುವೆನು" ಎಂದು ಯೋಚಿಸುತ್ತ ವೈಕುಂಠಲೋಕಕ್ಕೆ ಬಂದನು.

ಆ ವೈಕುಂಠ ಲೋಕವು, ಭವ್ಯವಾದ ಪ್ರಾಕಾರ ಗೋಪುರ-ಶಿಖರಗಳಿಂದ ಶೋಭಿಸುತ್ತಿರುವದು, ನವರತ್ನಗಳ ತೋರಣಗಳಿಂದ ಅಲಂಕೃತವಾದ ದ್ವಾರ ಗಳುಳ್ಳದ್ದಾಗಿರುವದು; ನಾಲ್ಕು ದಿಕ್ಕುಗಳಲ್ಲಿರುವ ನಾಲ್ಕು ದ್ವಾರಗಳಲ್ಲಿ ದ್ವಾರ ಪಾಲಕರು ಅದನ್ನು ಕಾಯುತ್ತಿರುವರು. ಭೃಗುಋಷಿಯು ಮಹಾದ್ವಾರದಿಂದ ಒಳಗೆ ಹೋಗಿ ಶಯನ ಮಂದಿರದಲ್ಲಿ ಶೇಷಶಾಯಿಯಾಗಿ, ಲಕ್ಷ್ಮೀದೇವಿಯಿಂದ ಕೂಡಿಕೊಂಡು ಶಯನ ಮಾಡಿದ ಶ್ರೀಮಹಾವಿಷ್ಣುವನ್ನು ಕಂಡನು. ಹಾಗು ತನ್ನ ಮನಸ್ಸಿನೊಳಗೆ—"ನಾನು ಎಲ್ಲಿ ಹೋದರೂ ಇದೇ ಅವಸ್ಥೆಯಾಯಿತಲ್ಲ! ಬ್ರಹ್ಮನು ಗರ್ವಿಷ್ಠನಾದನು, ಶಂಕರನು ರತಿಕ್ರೀಡಾಸಕ್ತನಾಗಿದ್ದನು, ಈ ವಿಷ್ಣುವು ನಿದ್ರಾಸಕ್ತನಾಗಿರುವನು; ಆದ್ದರಿಂದ ಇವನನ್ನು ಕಾಲಿನಿಂದ ಒದ್ದು ಎಬ್ಬಿಸಿ, ಎಚ್ಚತ್ತಮೇಲೆ ಇವನ ಪರೀಕ್ಷೆಯನ್ನು ಮಾಡುವೆನು," ಎಂದು ಭೃಗು ಋಷಿಯು ಯೋಚಿಸಿ, ತನ್ನ ಪಾದದಿಂದ ಶ್ರೀವಿಷ್ಣುವಿನ ಎದೆಗೆ ಒದ್ದನು. ಅದ ರಿಂದ ವಿಷ್ಣುವು ಎಚ್ಚತ್ತು ತನ್ನ ಹಾಸಿಗೆಯಿಂದ ಬೇಗನೆ ಎದ್ದು, ಸಮ್ಮುಖದಲ್ಲಿ ನಿಂತಿರುವ ಭೃಗುಋಷಿಯ ಪಾದಗಳಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ, ಅತ್ಯಂತ ಭಕ್ತಿಯಿಂದ ಆ ಋಷಿಯನ್ನು ಆಲಿಂಗಿಸಿ, ಆತನನ್ನು ಕುರಿತು—"ಋಷಿ ವರ್ಯರೇ, ಅತ್ಯಂತ ಕಠಿಣವಾಗಿಯೂ, ನಾಶರಹಿತವಾಗಿಯೂ, ಜರಾಮರಣ ರಹಿತವಾಗಿಯೂ, ದೇವದಾನವರಿಂದ ಸಹ ಭೇದಿಸಲಸಾಧ್ಯವಾಗಿಯೂ ಇರುವ ನನ್ನ ಶರೀರವನ್ನು ನಿಮ್ಮ ಮೃದುವಾದ ಪಾದಗಳಿಂದ ಯಾಕೆ ತಾಡನ ಮಾಡಿದಿರಿ? ವಜ್ರಕ್ಕಿಂತಲೂ ಕಠಿಣವಾದ ನನ್ನ ದೇಹವನ್ನು ತಾಡನಮಾಡಿದ್ದರಿಂದ ನಿಮ್ಮ

ಪಾದಗಳು ಎಷ್ಟು ನೊಂದಿರುವವೋ ಏನೋ!" ಎಂದು ಸಮಾಧಾನದ ನುಡಿಗಳ ನ್ನಾಡಿ, ಶ್ರೀವಿಷ್ಣುವು ಉಷ್ಣೋದಕದಿಂದ ಆ ಋಷಿಯು ಪಾದಗಳನ್ನು ತೊಳೆದು, ಮಂಗಲಕರವಾದ ಆ ಪಾದೋದಕವನ್ನು ತನ್ನ ಶಿರಸ್ಸಿನಲ್ಲಿ ಧಾರಣಮಾಡಿಕೊಂಡು, "ಸ್ವಾಮಿ, ನಿಮ್ಮ ಪಾದೋದಕದಿಂದ ನಾನು ಪವಿತ್ರನಾದೆನು. ನಿಮ್ಮಂಥವರ ದರ್ಶನದಿಂದಲೇ ಮೂರು ಲೋಕಗಳು ಪವಿತ್ರವಾಗುವವು" ಎಂದು ಸ್ತೋತ್ರ ಮಾಡಿ, ಸಮಸ್ತ ಜನರು, ಆಶ್ಚರ್ಯಪಡುವಹಾಗೆ ಶ್ರೀಹರಿಯು ಆ ಋಷಿಯು ಪಾದೋದಕವನ್ನು ತನ್ನ ಮನೆಗೂ, ಸಮಸ್ತ ಕುಟುಂಬದ ಜನರಿಗೂ, ಮನೆ ಯೊಳಗಿನ ಎಲ್ಲ ಪದಾರ್ಥಗಳಿಗೂ ಪ್ರೋಕ್ಷಣ ಮಾಡಿದನು. ಈ ಪ್ರಕಾರ ಸನ್ಮಾನ ಹೊಂದಿದ ಭೃಗುಮುನಿಯು ಸಂತೋಷಪಟ್ಟು, ಈ ವಿಷ್ಣುವೇ ಸರ್ವದೇವತೆಗಳಲ್ಲಿ ಶ್ರೇಷ್ಠನು," ಎಂದು ಭಾವಿಸಿ ಆತನ ಅಪ್ಪಣೆಯನ್ನು ತೆಗೆದುಕೊಂಡು ಭೂಲೋಕ ದಲ್ಲಿ ಯಜ್ಞಮಾಡುತ್ತಿರುವ ಗಂಗಾತೀರಕ್ಕೆ ಬಂದು, ಸಮಸ್ತ ಋಷಿಗಳನ್ನು ಕುರಿತು-"ಋಷಿಗಳಿರಾ, ಶ್ರೀವಿಷ್ಣುವೇ ಸರ್ವೋತ್ತಮನು; ಆದ್ದರಿಂದ ಅವನಿಗೇ ನೀವು ಮಾಡುವ ಯಜ್ಞದ ಫಲವನ್ನು ಅರ್ಪಣಮಾಡಿರಿ;" ಎಂದು ಉಪದೇಶ ಮಾಡಿದನು. ಅವನ ಮಾತಿಗೆ ಒಪ್ಪಿ ಸರ್ವಋಷಿಗಳು ಕೂಡಿಕೊಂಡು ಯಥಾ ಸಾಂಗವಾಗಿ ಯಜ್ಞವನ್ನು ಮಾಡಿ, ಯಜ್ಞದ ಫಲವನ್ನು ಶ್ರೀವಿಷ್ಣುವಿಗೆ ಅರ್ಪಣ ಮಾಡಿದರು.

ಇತ್ತ ವೈಕುಂಠಲೋಕದಲ್ಲಿ, ಭೃಗುಋಷಿಯು ಸ್ವಸ್ಥಾನಕ್ಕೆ ಹೋದನಂತರ ಲಕ್ಷ್ಮೀದೇವಿಯು ತನ್ನ ಪತಿಯಾದ ಶ್ರೀವಿಷ್ಣುವನ್ನು ಕುರಿತು-"ದೇವಾಧಿದೇವನೇ, ನಿನ್ನ ಸೇವಕನಾದ ವರುಣನಿಂದ ಉತ್ಪನ್ನನಾದ ಭೃಗುಋಷಿಯು ನನ್ನ ಆಲಿಂಗನ ಮಾಡಿಕೊಳ್ಳುವ ನಿನ್ನ ಪವಿತ್ರವಾದ ವೃಕ್ಷಸ್ಥಲವನ್ನು ತನ್ನ ಪಾದದಿಂದ ತಾಡನ ಮಾಡಿದ್ದರಿಂದ, ನಿನ್ನ ವೃಕ್ಷಸ್ಥಳವು ಅಪವಿತ್ರವಾಯಿತು. ಈ ಪ್ರಕಾರ ಬ್ರಾಹ್ಮಣ ನಿಂದ ನೀನು ಅಪಮಾನವನ್ನು ಹೊಂದಿರುವ ಕಾರಣ ನಾನು ಇಲ್ಲಿ ಇರುವದಿಲ್ಲ, ಕರವೀರಪುರಕ್ಕೆ ಹೋಗುವೆನು," ಎಂದು ಶ್ರೀಹರಿಯ ಸಂಗಡ ಪ್ರೇಮಕಲಹ ವನ್ನು ಮಾಡಿ ಆಕೆಯು ಕರವೀರಪುರಕ್ಕೆ ಹೋದಳು.

ಹೀಗೆ ಲಕ್ಷ್ಮೀದೇವಿಯು ಬಿಟ್ಟು ಹೋಗಲಾಗಿ ಶ್ರೀಮನ್ನಾರಾಯಣನು ದ್ವಾಪರಯುಗದ ಅಂತ್ಯಭಾಗದಲ್ಲಿ, ಅಂದರೆ ಇಪ್ಪತ್ತೆಂಟನೇ ಕಲಿಯುಗದ ಪ್ರಾರಂ ಭದಲ್ಲಿ-"ಯಾವ ದೇಶದಲ್ಲಿ, ಯಾವಕಾಲದಲ್ಲಿ, ಯಾವರೀತಿಯಿಂದ, ಲಕ್ಷ್ಮಿಯು

ಕಲಹವು ಶಾಂತವಾಗಬೇಕೋ ? ಹಾಗೆ ಮಾಡುವೆನು, " ಎಂದು, ನುಡಿದು, ಶ್ರೀವಿಷ್ಣುವು ಲೀಲೆಯಿಂದ ಮನುಷ್ಯಾಕೃತಿಯುಳ್ಳವನಾಗಿ, ಶ್ರೇಷ್ಠವಾದ ವೈಕುಂಠ ಲೋಕವನ್ನು ಬಿಟ್ಟು, ಶೇಷಾಚಲಕ್ಕೆ ಬಂದನು. ಭಾಗೀರಥೀ ನದಿಯಿಂದ ದಕ್ಷಿಣ ದಿಕ್ಕಿಗೆ ಮುನ್ನೂರುಹರದಾರಿಗಳ ಮೇಲೆ ಸುವರ್ಣಮುಖರೀ ನದಿಯ ಹತ್ತರ ಶುಕಮುನಿಗಳ, ಮತ್ತು ಅಗಸ್ತ್ಯ ಋಷಿಗಳ ಆಶ್ರಮುಸ್ಥಾನಗಳಿರುವವು. ಆ ನದಿಯಿಂದ ಉತ್ತರದಿಕ್ಕಿಗೆ ಎಂಡೂವರೆ ಹರದಾರಿಯ ಅಂತರದ ಮೇಲೆ ಸಂಪತ್ತಿ ನಿಂದ ಯುಕ್ತವಾಗಿಯೂ, ಪುಣ್ಯಪ್ರದವಾಗಿಯೂ, ಭವ್ಯವಾದ ವನಗಳುಳ್ಳದ್ದಾ ಗಿಯೂ, ಮೇರುಪರ್ವತಕ್ಕೆ ಪುತ್ರನೆಂದು ಪ್ರಸಿದ್ಧವಾಗಿಯೂ, ಸಮಸ್ತ ತೀರ್ಥ ಗಳಿಂದ ಯುಕ್ತವಾಗಿಯೂ ಇರುವ "ವೈಕುಂಠ ಪರ್ವತ"ವೆಂಬದೊಂದು ಪವಿತ್ರ ವಾದ ಸ್ಥಳವು ಇರುವದು; ಆ ಪರ್ವತವು ಸಮಸ್ತ ಧಾತುಗಳಿಂದ ಅಲಂಕೃತ ವಾಗಿಯೂ, ವೈಕುಂಠಲೋಕಕ್ಕೆ ಸಮಾನವಾದದ್ದಾಗಿಯೂ, ಶ್ರೀವಿಷ್ಣುವಿಗೆ ವಾಸ ಮಾಡಿಕೊಂಡಿರುವದಕ್ಕೆ ಯೋಗ್ಯವಾಗಿಯೂ ಇದ್ದು, ಪ್ರತ್ಯಕ್ಷ ಶೇಷಾವತಾರ ವೆಂದೆನಿಸುವದು. ಅದು ಹಿಂದಕ್ಕೆ ದ್ವಾಪರಯುಗದಲ್ಲಿ ಶೇಷ-ವಾಯುಗಳ ಸಂವಾದ ಕಾಲದಲ್ಲಿ ವಾಯುವಿನಿಂದ ಸ್ಥಾಪಿಸಲ್ಪಟ್ಟಿರುವದು. ಅದರ ವಿಸ್ತಾರವು ನೂರುಯೋಜನ ಉದ್ದವಾಗಿಯೂ, ಮೂವತ್ತು ಯೋಜನ ಅಗಲವಾಗಿಯೂ ಇರುವದು. ಈ ಪರ್ವತಕ್ಕೆ ವೇಂಕಟಾಚಲವೇ ಮುಖವಾಗಿರುವದು, ಅಹೋಬಲ ಪರ್ವತವು ಮಧ್ಯಪ್ರದೇಶವಾಗಿರುವದು, ಶ್ರೀಶೈಲಪರ್ವತವು ಪುಚ್ಛಭಾಗವಾಗಿರು ವದು; ಇವೆಲ್ಲ ಭಾಗಗಳು ಕೂಡಿ ಶೇಷಾಚಲವೆನಿಸುವದು. ಇಂಥ ಶೇಷಾಚಲಕ್ಕೆ ಶ್ರೀಹರಿಯು ಪ್ರಾಪ್ತನಾದನು.

ಆ ಶೇಷಾಚಲದಲ್ಲಿ ಎತ್ತ ನೋಡಿದತ್ತ ಮಂದಾರ, ಪನಸ, ಪ್ಲಕ್ಷ, ಔದುಂಬರ, ಕಿಂಶುಕ, ಪಿಚುಮಂದ, ಪಾರಿಜಾತ, ತಿಂತ್ರಿಣಿ, ನೇರಿಲ, ಶ್ರೀಗಂಧ, ಮಾವು, ಕೃಷ್ಣಾಗರು, ತಾಲ, ಹಿಂತಾಲ, ಪುನ್ನಾಗ, ದೇವದಾರು ಮುಂತಾದ ವೃಕ್ಷಗಳಿರುವವು. ಅದರಲ್ಲಿ ಸಮಸ್ತ ಧಾತುಗಳಿರುವವು. ಅದರ ತೀರ್ಥಗಳಲ್ಲಿ ಹಂಸಗಳು, ನೀರಕೋಳಿಗಳು ಸಂಚರಿಸುತ್ತಿರುವವು. ವನದಲ್ಲಿ ಶುಕ, ಪಿಕ, ಪಾರಿವಾಳ, ಕ್ಷೀರಹಂಸ, ಇವು ಇರುವವು. ಅರಣ್ಯದಲ್ಲಿ ಸಿಂಹ, ಶರಭ, ಶಾರ್ದೂಲ, ವ್ಯಾಘ್ರ, ಜಂಬೂಕ, ವರಾಹ, ಗಜಗಳು ಸಂಚಾರ ಮಾಡುತ್ತಿರು ವವು. ನರಿ, ಕರಡಿ, ಕಸ್ತೂರೀಮೃಗ, ಚಮರೀಮೃಗ ಮೊದಲಾದವುಗಳು

ಯಥೇಚ್ಛವಾಗಿರುವವು. ಮನುಷ್ಯರಿಂದ ರಕ್ಷಿಸಲ್ಪಡುವ ಅಶ್ವ, ಗೋ, ಮಹಿಷಿಗಳು ತುಂಬಿರುವವು. ಪುಷ್ಪವಾಟಿಕೆಯಲ್ಲಿ ಮಲ್ಲಿಕಾ, ಮಾಲತಿ, ಜಾಜಿ, ನಂದ್ಯಾವರ್ತ, ಚಂಪಕವೃಕ್ಷ, ಅಶೋಕವೃಕ್ಷ, ಪುನ್ನಾಗವೃಕ್ಷ, ಕೇತಕೀವೃಕ್ಷ ಮೊದಲಾದವುಗಳು ಶೋಭಿಸುತ್ತಿರುವವು. ಅದರಲ್ಲಿ ಮನೋಹರವಾದ ಸಂಪತ್ತಿನಿಂದ ಯುಕ್ತವಾದ, ಪುಣ್ಯಕರವಾದ ಎಷ್ಟೋ ವನಗಳು ಇರುವವು. ಹೀಗೆ ಆ ಶೇಷಾಚಲವು ರಮ್ಯವಾಗಿರುವದು. ಆ ಶೇಷಾಚಲದಲ್ಲಿ ಸರ್ವ ದೇವತೆಗಳು ವೃಕ್ಷಗಳಾಗಿರುವರು, ಋಷಿಶ್ರೇಷ್ಠರು ಮಂಗಗಳಾಗಿರುವರು, ಪಿತೃಗಳು ಪಕ್ಷಿಗಳಾಗಿರುವರು, ಯಕ್ಷಕಿನ್ನರರು ಪಾಷಾಣಗಳಾಗಿರುವರು. ಜನಕರಾಜನೇ, ಮೇರುಪರ್ವತದಿಂದ ಉತ್ಪನ್ನವಾದ ಈ ವೇಂಕಟಾಚಲದ ಪ್ರಭಾವವನ್ನೂ, ಅಲ್ಲಿ ವಾಸ ಮಾಡಿಕೊಂಡಿರುವ ಸಾಕ್ಷಾತ್ ಶ್ರೀನಿವಾಸನ ಪ್ರಭಾವವನ್ನೂ ಬ್ರಹ್ಮರುದ್ರೇಂದ್ರಾದಿ ದೇವತೆಗಳು ಸಹ ತಿಳಿಯಲಶಕ್ಯರು; ಅಂದಮೇಲೆ ಅಲ್ಪ ಸಾಮರ್ಥ್ಯವುಳ್ಳ ಮನುಷ್ಯರು ಏನು ತಿಳಿಯುವರು?"

॥ ಇತಿ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿ, ಶ್ರೀವೇಂಕಟಗಿರಿ ಮಾಹಾತ್ಮ್ಯದ "ಶೇಷಗಿರಿ ವರ್ಣನ" ವೆಂಬ ಎರಡನೇ ಅಧ್ಯಾಯವು ಮುಗಿದುದು. ॥

# ೩ನೆಯ ಅಧ್ಯಾಯ

ಶತಾನಂದ ಋಷಿಗಳು ಹೇಳುತ್ತಾರೆ, — "ಕೇಳೈ ಜನಕರಾಜನೇ, ಆ ವೇಂಕಟಾಚಲದ ಮೇಲೆ ದೇವತಾಯೋಗ್ಯವಾಗಿ ಮತ್ಸ್ಯ, ಕಚ್ಛಪ, ಜಲಕುಕ್ಕುಟ ಸರ್ಪಗಳಿಂದ ಯುಕ್ತವಾಗಿ "ಸ್ವಾಮಿ ಪುಷ್ಕರಣಿ" ಎಂಬ ಹೆಸರಿನ ಶ್ರೇಷ್ಠ ತೀರ್ಥವು ಇರುವದು. ಆ ತೀರ್ಥದ ತೀರದಲ್ಲಿ ಗಗನಚುಂಬಿತವಾದ ವೃಕ್ಷಗಳು ಇರುವವು. ಆ ಸ್ವಾಮಿಪುಷ್ಕರಣಿಯು ಭಾಗೀರಥಿಯೇ ಮೊದಲಾದ ತೀರ್ಥಗಳಿಗೆ ಜನ್ಮಭೂಮಿಯಾಗಿ ಪ್ರಕಾಶಿಸುವದು. ಆ ತೀರ್ಥದಲ್ಲಿ ಯಾವ ಮನುಷ್ಯನು ಸ್ನಾನವನ್ನು ಮಾಡುವನೋ ಅವನೇ ಧನ್ಯನು, ಅವನೇ ಪುಣ್ಯವಂತನು. ಸೂರ್ಯನು ಧನುರಾಶಿಯಲ್ಲಿ ಇರುವಾಗ್ಗೆ ಶುಕ್ಲಪಕ್ಷದ ದ್ವಾದಶಿಯು

ಅರುಣೋದಯ ಕಾಲದಲ್ಲಿ ಸಮಸ್ತ ದೇವತೆಗಳು ಆ ತೀರ್ಥದಲ್ಲಿ ಬಂದು ಸ್ನಾನ ವನ್ನು ಮಾಡುತ್ತಾರೆ; ಅಂದಮೇಲೆ ಅದರಲ್ಲಿ ಸ್ನಾನಮಾಡುವ ಮನುಷ್ಯರಿಗೆ ಬರುವ ಫಲವೆಷ್ಟೆಂತ ಹೇಳಬೇಕು ? ಆ ಸ್ವಾಮಿ ಪುಷ್ಕರಣಿಯಲ್ಲಿ ಶ್ರಾದ್ಧ ತರ್ಪಣ ಗಳನ್ನು ಮಾಡುವ ಬ್ರಾಹ್ಮಣನ ಪಿತೃಗಳು ಸಂತುಷ್ಟರಾಗಿ ಸ್ವರ್ಗವನ್ನು ಪಡೆ ಯುವರು. ಆ ಸ್ವಾಮಿಪುಷ್ಕರಣಿಯಲ್ಲಿ "ಶಂಖ" ನಾಮಕನಾದ ರಾಜನು ಸ್ನಾನ ಮಾಡಿದ್ದರಿಂದ ಸ್ವರ್ಗವನ್ನು ಪಡೆದನು. ಜನಕರಾಜನೇ, ಆಂಗಿರಸ ಋಷಿಯ ಪುತ್ರನಾದ ನಾರಾಯಣ ಋಷಿಯು ಆ ತೀರ್ಥದಲ್ಲಿ ಸ್ನಾನಮಾಡಿ, ಆ ಫಲದಿಂದ ಶ್ರೀ ಹರಿಯ ದರುಶನವನ್ನು ಹೊಂದಿ, ಸ್ವರ್ಗವನ್ನು ಪಡೆದನು ; ಮತ್ತು ದಶರಥರಾಜನ ಪುತ್ರನಾದ ರಾಮಚಂದ್ರನು ಸ್ನಾನ ಮಾಡಿದ್ದರಿಂದ, ರಾವಣಾಸುರನು ಅಪಹರಿಸಿಕೊಂಡುಹೋಗಿದ್ದ ಸೀತೆಯನ್ನು ಪಡೆದನು ; ಅದ ರಿಂದ ವೇಂಕಟಗಿರಿಯಲ್ಲಿ ಸ್ವಾಮಿ ಪುಷ್ಕರಣೀ ತೀರ್ಥವೇ ಸರ್ವ ತೀರ್ಥಗಳಲ್ಲಿ ಶ್ರೇಷ್ಠವಾಗಿರುವದು; ಮತ್ತು ಅದರ ಪಶ್ಚಿಮ ಭಾಗದಲ್ಲಿ ವರಾಹ ಮುಖವುಳ್ಳ ಶ್ರೀಹರಿಯು ಭೂದೇವಿಯು ಆಲಿಂಗನವನ್ನು ಮಾಡಿಕೊಂಡು, ಒಂದು ಅಶ್ವತ್ಥ ವೃಕ್ಷದ ಮೂಲದಲ್ಲಿ ಶೋಭಿಸುವನು. ತ್ರಿಕೋಟಿತೀರ್ಥಗಳಲ್ಲಿ ಈ ವೇಂಕಟಾ ಚಲವು ಶ್ರೇಷ್ಠವಾದದ್ದಿರುತ್ತದೆ. ಪೂಜ್ಯನಾದ ಶ್ರೀ ವಿಷ್ಣುವು ಈ ಪರ್ವತಕ್ಕೆ ಬಂದು, ಈ ಸ್ಥಳವು ವೈಕುಂಠಕ್ಕಿಂತಲೂ ಅಧಿಕವಾಗಿರುವದೆಂದು ನೋಡಿ, ಅಲ್ಲಿ ತಾನು ಗುಪ್ತ ರೀತಿಯಿಂದ ಇರುವದಕ್ಕೆ ಅತ್ತಿತ್ತ ಸ್ಥಳವನ್ನು ಹುಡುಕುತ್ತ ತಿರು ಗಾಡುತ್ತಿದ್ದನು. ಅವನು ಸ್ವಾಮಿಪುಷ್ಕರಣಿಯ ದಕ್ಷಿಣ ದಿಕ್ಕಿನಲ್ಲಿ ವಾಸಮಾಡಿ ಕೊಂಡಿರುವದಕ್ಕೆ ಯೋಗ್ಯವಾದ ತಿಂತ್ರಿಣೀ ವೃಕ್ಷದ ಮೂಲದಲ್ಲಿ ಒಂದು ಹುತ್ತನ್ನು ಕಂಡು ಸಂತೋಷದಿಂದ ತನ್ನ ಮನದೊಳಗೆ— " ಈ ಹುತ್ತು ನನಗೆ ಗುಪ್ತ ರೀತಿಯಿಂದ ವಾಸಮಾಡಿಕೊಂಡಿರುವದಕ್ಕೆ ಯೋಗ್ಯವಾದ ಸ್ಥಳವಿರು ತ್ತದೆ"ಂದು ಯೋಚಿಸಿ, ಆ ಹುತ್ತಿನಲ್ಲಿ ವಾಸಮಾಡಿದನು.

ದ್ವಾಪರ ಯುಗದ ಅಂತ್ಯ ಭಾಗದಲ್ಲಿ ಶ್ರೀಹರಿಯು ಆ ಹುತ್ತಿನೊಳಗೆ ಹತ್ತು ಸಾವಿರ ವರ್ಷಗಳ ತನಕ ಗುಪ್ತವಾಗಿ ವಾಸ ಮಾಡಿಕೊಂಡಿದ್ದನು. ಬಳಿಕ ಕಲಿಯುಗವು ಪ್ರಾರಂಭವಾಗಿ ಕೆಲವು ವರ್ಷಗಳು ಸಂದುಹೋದುವು. ಆಗ ಚೋಳನೆಂಬ ರಾಜನು ಒಬ್ಬ ನಾಗಕನ್ನಿಕೆಯ ಉದರದಿಂದ ಹುಟ್ಟಿ, ಪುಣ್ಯಾಕರ

ವಾದ ಭರತಖಂಡವನ್ನು ಪರಿಪಾಲಿಸುತ್ತಿದ್ದನು. ಆ ರಾಜನು ರಾಜ್ಯಪರಿಪಾಲನೆಯನ್ನು ಮಾಡುತ್ತಿರಲು, ಅವನ ರಾಜ್ಯದಲ್ಲಿರುವ ಗೋವುಗಳು ಬಹಳವಾಗಿ ಹಾಲನ್ನು ಕರೆಯುತ್ತಿದ್ದುವು; ಕಾಲಕಾಲಕ್ಕೆ ಪರ್ಜನ್ಯವಾಗಿ ಧಾನ್ಯಗಳು ವಿಶೇಷವಾಗಿ ಬೆಳೆಯುತ್ತಿದ್ದುವು; ಸ್ತ್ರೀಯರು ಪತಿವ್ರತೆಯರಾಗಿಯೂ, ಪುರುಷರು ತಮ್ಮ ಸ್ತ್ರೀಯರಲ್ಲಿಯೇ ಆಸಕ್ತರಾಗಿಯೂ ಇದ್ದರು; ಪುತ್ರರು ತಮ್ಮ ತಂದೆ-ತಾಯಿಗಳಲ್ಲಿ ಭಕ್ತಿವಂತರಾಗಿದ್ದರು; ಬ್ರಾಹ್ಮಣರು ಯಜ್ಞಕರ್ಮಗಳಲ್ಲಿ ಆಸಕ್ತರಾಗಿದ್ದರು. ಈ ಪ್ರಕಾರ ಚೋಳರಾಜನು ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದನು

ಇತ್ತ ಲಕ್ಷ್ಮೀದೇವಿಯು ತನ್ನ ಪತಿಯಾದ ಶ್ರೀವಿಷ್ಣುವು ವೈಕುಂಠವನ್ನು ಬಿಟ್ಟು ಗುಪ್ತ ರೀತಿಯಿಂದ ಎಲ್ಲಿರುವನೋ ಆ ಸ್ಥಳವನ್ನು ಶೋಧಮಾಡಬೇಕೆಂದು ಯೋಚಿಸಿ, ತಾನು ಗೋಪಾಲಿಕೆಯಾಗಿ, ತನ್ನ ಮಗನಾದ ಬ್ರಹ್ಮನನ್ನು ಧೇನುವಾಗಿಯೂ, ಶಂಕರನನ್ನು ಕರುವಾಗಿಯೂ ಮಾಡಿಕೊಂಡು ಧರ್ಮಿಷ್ಠನಾದ ಚೋಳರಾಜನ ರಾಜಧಾನಿಗೆ ಬಂದಳು. ಆಕೆಯು ಆಕಳನ್ನು ಕರುವು ಸಹಿತವಾಗಿ ಆ ರಾಜನಿಗೆ ಮಾರಲಿಕ್ಕೆ ಕೊಟ್ಟು, ಬ್ರಹ್ಮನಿಗೆ-"ಧೇನುವೇ, ನನ್ನ ಪತಿಯು ಇಲ್ಲಿಂದ ಸಮೀಪವಾಗಿ ಎಲ್ಲಿಯೋ ಒಂದು ಸ್ಥಳದಲ್ಲಿ ಗುಪ್ತ ರೀತಿಯಿಂದ ಇರುವನು; ಆದ್ದರಿಂದ ನೀನು ಅವನನ್ನು ಹುಡುಕು" ಎಂದು ಹೇಳಿ ಹೊರಟು ಹೋದಳು.

ಗೋಪಾಲಿಕೆಯು ರೂಪದಿಂದ ಬಂದಿರುವ ಮಹಾಲಕ್ಷ್ಮೀ ದೇವಿಯಿಂದ ಕ್ರಯಕ್ಕೆ ತೆಗೆದುಕೊಂಡ ಆಕಳು ಬಹಳವಾಗಿ ಹಾಲನ್ನು ಕೊಡುತ್ತಿರುವದರಿಂದಲೂ, ಬಹಳ ಸಭ್ಯವಿರುವದರಿಂದಲೂ ಚೋಳ ರಾಜನು ಆ ಗೋವಿನ ಮೇಲೆ ಬಹು ಪ್ರೀತಿಯನ್ನು ಮಾಡಿ, ಅದರ ಹಾಲನ್ನು ತನ್ನ ಪುತ್ರನಿಗೆ ಪ್ರಾಶನ ಮಾಡಿಸುವದಕ್ಕೆ ಗೊತ್ತುಮಾಡಿದ್ದನು. ಆ ರಾಜನ ಎರಡು ಸಾವಿರ ಆಕಳುಗಳನ್ನು ಗೋಪಾಲನು ನಿತ್ಯದಲ್ಲಿಯೂ ವೇಂಕಟಪರ್ವತಕ್ಕೆ ಮೇಯಿಸುವದಕ್ಕಾಗಿ ಹೊಡೆದುಕೊಂಡು ಹೋಗುತ್ತಿದ್ದನು. ಆ ಆಕಳುಗಳ ಕೂಡ ಈ ಗೋವು ಸಹ ಮೇಯುವದಕ್ಕೆ ಹೋಗುತ್ತಿತ್ತು. ಆಗ ಧೇನುರೂಪಿಯಾದ ಬ್ರಹ್ಮನು — "ಈ ವೇಂಕಟಾಚಲದಲ್ಲಿಯೇ ನನ್ನ ಪಿತನಾದ ಶ್ರೀಹರಿಯು

ಎಲ್ಲಿಯೋ ಗುಪ್ತವಾಗಿ ಇರುವನು" ಎಂದು ತಿಳಿದು ತಾನು ಅಲ್ಲಲ್ಲಿ ಮೂಸಿ ನೋಡುತ್ತ ಶೋಧ ಮಾಡತೊಡಗಿದನು.

ಹೀಗೆ ಧೇನು ರೂಪಿಯಾದ ಬ್ರಹ್ಮನು ಶ್ರೀಹರಿಯನ್ನು ಹುಡುಕುತ್ತಿರಲು, ಒಂದಾನೊಂದು ದಿವಸ ಸ್ವಾಮಿಪುಷ್ಕರಣಿಯ ಹತ್ತಿರ ಇರುವ ಒಂದು ಹುತ್ತಿನಲ್ಲಿ ಆತನು ಇರುವನೆಂದು ಗೊತ್ತಾಯಿತು. ಆಗ ಧೇನುವು ಸಂತೋಷಪಟ್ಟು, ತನ್ನ ಪಿತನಿಗೆ ಕ್ಷೀರಧಾರೆಗಳಿಂದ ಸೇಚನ ಮಾಡಹತ್ತಿತು. ಇದೇ ಪ್ರಕಾರ ನಿತ್ಯದಲ್ಲಿಯೂ ಆಧೇನುವು ರಾಜನ ಆಕಳುಗಳ ಕೂಡ ಹೋಗಿ,ಭಕ್ತಿಪೂರ್ವಕವಾಗಿ ಆ ವಲ್ಮೀಕಕ್ಕೆ ಬಂದು ಶ್ರೀವಿಷ್ಣುವು ಪ್ರೀತಿಯಾಗುವಂತೆ ಕ್ಷೀರಸೇಚನವನ್ನುಮಾಡುತ್ತಿತ್ತು. ಹೀಗಾದ್ದರಿಂದ ಆ ಧೇನುವು ಮನೆಯಲ್ಲಿ ಹಾಲನ್ನೇ ಕೊಡುತ್ತಿದ್ದಿಲ್ಲ. ಒಂದಾನೊಂದು ದಿವಸ ರಾಜಪತ್ನಿಯು ಇದನ್ನು ನೋಡಿ, ಗೋಪಾಲನನ್ನು ಕರೆಸಿ ಅವನಿಗೆ— "ಎಲೈ ದುರ್ಬುದ್ಧಿಯಾದ ಗೋಪಾಲನೇ, ಈಗ ನಮ್ಮ ಪುತ್ರನಿಗೋಸ್ಕರ ತೆಗೆದುಕೊಂಡ ಧೇನುವು ಹಾಲನ್ನೇ ಕೊಡುವದಿಲ್ಲವಲ್ಲ! ಇದರ ವಿಚಾರವೇನು ? ಆ ಆಕಳಹಾಲನ್ನು ನೀನೇ ಕುಡಿಯುವೆಯೋ? ಅಥವಾ ಕರುವು ಕುಡಿಯುತ್ತದೋ? ಇದನ್ನು ಸತ್ಯವಾಗಿ ಹೇಳು," ಎಂದು ಬೆದರಿಸಿ ನುಡಿಯಲು, ಏನೂ ಅರಿಯದ ಗೋಪಾಲನು ರಾಜಪತ್ನಿಯು ಆಡಿದ ಮಾತುಗಳನ್ನು ಕೇಳಿ, ಭಯದಿಂದ ಗಡಗಡನೆ ನಡುಗಿ ಮೆಲ್ಲನೆ ರಾಜಪತ್ನಿಗೆ—"ತಾಯೀ, ಆ ಆಕಳಹಾಲನ್ನು ನಾನೇನು ಕುಡಿಯುವದಿಲ್ಲ, ಕರುವು ಕುಡಿಯುವದೋ? ಅಥವಾ ಗೋವು ತಾನೇ ಕುಡಿಯುವದೋ? ಮತ್ತೆ ಎರಡನೆಯವರು ಯಾರಾದರೂ ಕುಡಿಯುವರೋ ಇದನ್ನು ನಾನರಿಯೆ. ಈ ನನ್ನ ಮಾತು ಸತ್ಯವೋ? ಮಿಥ್ಯವೋ? ನೀವೇ ವಿಚಾರಮಾಡಿರಿ;" ಎಂದು ನಿರ್ಭಯದಿಂದ ನುಡಿದನು. ರಾಜಪತ್ನಿಯು ಅದಕ್ಕೆ—'ಆ ಕೆಲಸದ ಮೇಲೆ ನಿನ್ನನ್ನು ನೇಮಿಸಿರಲಾಗಿ, "ನನಗೆ ಗೊತ್ತಿಲ್ಲೆಂ"ದು ಹೇಳುತ್ತೀಯಾ? ದುಷ್ಟನೇ, ನೀನೇ ಆ ಆಕಳ ಹಾಲನ್ನು ಕುಡಿಯುವದು ನಿಜವು; ಹೀಗಿರಲು ಏನೂ ಅರಿಯದವನಂತೆ, ಸುಳ್ಳುಮಾತುಗಳನ್ನಾಡುವೆಯಾ? ಈಗಲೇ ನಿನಗೆ ತಕ್ಕ ಶಾಸನವನ್ನು ಮಾಡುವೆನು" ಎಂದು ಆ ಗೋಪಾಲನನ್ನು ಹಗ್ಗದಿಂದ ಬಿಗಿದು ಬಾರಕೋಲಿನಿಂದ ಒಳಿತಾಗಿ ಹೊಡೆದು,—"ಇನ್ನು ಮೇಲೆ ಜಾಗ್ರತೆಯಿಂದಿರು," ಎಂದು ಹೇಳಿ ಅವನನ್ನು ಬಿಟ್ಟಳು.

ಹೀಗೆ ರಾಜಪತ್ನಿಯಿಂದ ಹೊಡಿಸಿಕೊಂಡ ಗೋಪಾಲನು ಮರುದಿವಸ, ತನ್ನ ಮನಸ್ಸಿನಲ್ಲಿ—"ನನ್ನಲ್ಲಿ ಅಪರಾಧವಿಲ್ಲದೆ ವ್ಯರ್ಥವಾಗಿ ಧೇನುವಿನ ದೆಸೆಯಿಂದ ನಾನು ಹೊಡಿಸಿಕೊಂಡೆನಲ್ಲ! ಆ ಆಕಳು ಹಾಲನ್ನು ಯಾಕೆ ಕೊಡುತ್ತಿರಲಿಕ್ಕಿಲ್ಲ? ಕರುವೂ ತಿನ್ನುವದಿಲ್ಲ, ತಾನೂ ಮೊಲೆ ಕುಡಿಯುವದಿಲ್ಲ; ಇದನ್ನು ನಾನು ನಿತ್ಯದಲ್ಲಿ ನೋಡುತ್ತಲೇ ಇರುವೆನು; ಅಂದಮೇಲೆ ಅವರ ಮೊಲೆಯೊಳಗಿನ ಹಾಲೆಲ್ಲ ಏನಾಗುವವು, ಇದರ ವಿಷಯದಲ್ಲಿ ನಾನು ಇವತ್ತಿನದಿವಸ ಪರೀಕ್ಷೆಯನ್ನು ಮಾಡಲೇಬೇಕು: ಯಾಕಂದರೆ, ರಾಜಪತ್ನಿಯು ಹೊಡೆದ ಪೆಟ್ಟುಗಳಿಂದ ನನ್ನ ಮೈಯೆಲ್ಲ ವೇದನೆಯುಳ್ಳದ್ದಾಗಿರುತ್ತದೆ; ಒಂದು ವೇಳೆ ಆ ಧೇನುವಿನ ಕಪಟವು ತಿಳಿದರೆ ಈವೊತ್ತಿನ ದಿವಸ ಅದಕ್ಕೆ ಶಾಸನವನ್ನೇ ಮಾಡುವೆನು." ಎಂದು ಯೋಚಿಸಿ, ಗೋಪಾಲನು ಆ ಆಕಳ ಮೇಲೆ ಬಹಳ ಸಿಟ್ಟುಳ್ಳವನಾಗಿ ತನ್ನ ಕೈಯಲ್ಲಿ ಕೊಡಲಿಯನ್ನು ತೆಗೆದುಕೊಂಡು, ನಿತ್ಯದಂತೆ ಎಲ್ಲ ಆಕಳುಗಳ ಕೂಡ ಆ ರಾಜನ ಗೋವನ್ನು ಹೊಡಕೊಂಡು ವೇಂಕಟಾಚಲಕ್ಕೆ ಹೋಗಿ ಅದರ ಪಾಳತಿಯಲ್ಲಿಯೇ ಇದ್ದನು.

ಆ ಸಮಯದಲ್ಲಿ, ಆ ಧೇನುವು ಎಲ್ಲ ಆಕಳುಗಳನ್ನು ಬಿಟ್ಟು ನಿರ್ಭಯದಿಂದ ತಾನೊಂದೇ ವೇಂಕಟಾದ್ರಿಯಲ್ಲಿ ಶ್ರೀವಿಷ್ಣುವಿಗೋಸ್ಕರವಾಗಿ, ವಲ್ಮೀಕದಲ್ಲಿ ತನ್ನ ಸ್ತನಗಳಲ್ಲಿದ್ದ ಕ್ಷೀರವನ್ನು ಸೇಚನ ಮಾಡುತ್ತಿತ್ತು. ಅದೇ ಪಾಳತಿಯಲ್ಲಿದ್ದ ಗೋಪಾಲಕನು ಮೆಲ್ಲಗೆ ಬಂದು ಮಹಾ ರೋಷದಿಂದ—"ಎಲೈ, ಕಪಟ ಮಾಡುವ ಪ್ರಾಣಿಯೇ, ನೀನು ನಿತ್ಯದಲ್ಲಿಯೂ ಇದೇ ಪ್ರಕಾರವಾಗಿ ಕಳವಿನಿಂದ ಇಂಥ ಕಾರ್ಯವನ್ನು ಮಾಡಿ, ರಾಜಪತ್ನಿಯಿಂದ ನನ್ನನ್ನು ಹೊಡಿಸಿದೆಯಾ ಇಕೋ! ನೋಡು, ಈಗಲೇ ನಿನಗೆ ತಕ್ಕ ಶಾಸನವನ್ನು ಮಾಡುತ್ತೇನೆ," ಎಂದು ಕ್ರೋಧದಿಂದ ತನ್ನ ಕೊಡಲಿಯನ್ನು ಎತ್ತಿ ಆ ಆಕಳನ್ನು ಕಡಿಯಬೇಕೆನ್ನುವಷ್ಟರಲ್ಲಿ, ವಲ್ಮೀಕದಲ್ಲಿದ್ದ ಸರ್ವ ಸಾಕ್ಷಿಯಾದ ಶ್ರೀಹರಿಯು ತನ್ನ ಮನಸ್ಸಿನೊಳಗೆ—"ನನ್ನಲ್ಲಿ ಪೂರ್ಣ ಭಕ್ತಿಯಿಂದ ನನ್ನ ಸೇವೆಯನ್ನು ಮಾಡುತ್ತಿರುವ ಈ ಧೇನುವನ್ನು ವ್ಯರ್ಥವಾಗಿ ಈ ದುಷ್ಟನಾದ ಗೋಪಾಲನು ಕೊಲ್ಲುವನಲ್ಲ! ಈ ಸಮಯದಲ್ಲಿ ಇದನ್ನು ನಾನು ರಕ್ಷಿಸುವೆನು; ಯಾಕಂದರೆ, ಈ ಜಗತ್ತಿನಲ್ಲಿ ಮನುಷ್ಯನು ಭಕ್ತಿಭಾವದಿಂದ ನನ್ನ ಪೂಜೆಯನ್ನು ಮಾಡಿ ಒಂದು ತುಳಸೀದಳವನ್ನು ನನಗೆ ಅರ್ಪಣ ಮಾಡಿದರೆ ಸಾಕು, ಅವನನ್ನು ಸಂರಕ್ಷಿಸುವೆನೆಂದು ನನ್ನ ಪ್ರತಿಜ್ಞೆಯು

ಇರುತ್ತದೆ. ನನ್ನ ಮೇಲೆ ಅತ್ಯಂತ ಭಕ್ತಿಯನ್ನು ಮಾಡುತ್ತಿರುವ ಈ ಧೇನುವನ್ನು ರಕ್ಷಿಸುವದು ಏನಾಶ್ಚರ್ಯವು ? ಇದಲ್ಲದೆ "ಲೋಕದಲ್ಲಿ ತನಗೋಸ್ಕರ ತನ್ನ ಭಕ್ತನನ್ನು ಸಂಹಾರ ಮಾಡಿಸುವವನು ಸೂರ್ಯ, ಚಂದ್ರ, ನಕ್ಷತ್ರಗಳು ಇರುವ ವರೆಗೆ ನರಕವನ್ನು ಅನುಭವಿಸುವನು" ಎಂಬದಾಗಿ ನನ್ನ ವಚನವಿದ್ದು, ನಾನೇ ಈ ಭಕ್ತಿಯುಳ್ಳ ಆಕಳನ್ನು ರಕ್ಷಿಸದೆ ಬಿಟ್ಟರೆ, ನನಗೆ ಅಪಕೀರ್ತಿಯು ಬರುವದು," ಎಂದು ಯೋಚಿಸಿ ಲಕ್ಷ್ಮೀಪತಿಯಾದ ಶ್ರೀನಿವಾಸನು ಆ ಕ್ಷಣದಲ್ಲಿಯೇ ಬಂದು, ಆ ಗೋಪಾಲನ ಕೊಡಲಿಯ ಪೆಟ್ಟನ್ನು ತಾನೇ ಗ್ರಹಣಮಾಡಿದನು. ಆಗ ಕೊಡಲಿಯ ಹೊಡತವು ಜಗತ್ಪತಿಯಾದ ಶ್ರೀನಿವಾಸನ ಶಿರಸ್ಸಿನಲ್ಲಿ ಬೀಳಲು, ದೊಡ್ಡ ಘಾಯವುಂಟಾಗಿ ಅದರೊಳಗಿಂದ ಏಳು ತಾಳವೃಕ್ಷಗಳಷ್ಟು ಉನ್ನತವಾಗಿ ರಕ್ತವು ಪುಟಿಯಹತ್ತಿತು. ಇಂಥ ಭಯಂಕರಸ್ಥಿತಿಯನ್ನು ನೋಡಿ, ಗೋಪಾಲನು ಗಾಬರಿಯಾಗಿ ಮರಣವನ್ನೇ ಹೊಂದಿ, ಭೂಮಿಯಲ್ಲಿ ಬಿದ್ದನು. ಆಗ ಆ ಧೇನುವು ಈ ಅನರ್ಥವನ್ನು ನೋಡಿ ದುಃಖಪಡುತ್ತ ವೇಂಕಟಾಚಲವನ್ನಿಳಿದು ಚೋಳರಾಜನಿರುವಲ್ಲಿಗೆ ಬಂದು, ಅವನ ಮುಂದೆ ಕಣ್ಣೀರನ್ನು ಸುರಿಸುತ್ತ ಹೊರಳಾಡಹತ್ತಿತು ಅದನ್ನು ನೋಡಿ ರಾಜನು—ಈ ಆಕಳು ನನ್ನ ಸಮ್ಮುಖದಲ್ಲಿ ಬಂದು ಪರಮದುಃಖದಿಂದ ಹೀಗೆ ಹೊರಳಾಡುವ ಕಾರಣವೇನಿರಬಹುದು ? ಇದಕ್ಕೆ ಏನು ಕಷ್ಟವು ಪ್ರಾಪ್ತವಾಗಿದ್ದೀತು ? ಎಂದು ಯೋಚಿಸಿ, ಒಬ್ಬ ದೂತನನ್ನು ಕರೆದು ಅವನಿಗೆ— ಎಲೈ ದೂತನೆ, ಈ ಗೋವಿಗೆ ಏನೋ ದುಃಖವಾಗಿರುವದೆಂದು ತಿಳಿಯುತ್ತದೆ; ನೀನು ಇದರ ಬೆನ್ನುಹತ್ತಿ ಇದು ಎಲ್ಲಿಗೆ ಹೋಗುವದೋ ಅಲ್ಲಿಗೆ ಹೋಗಿ, ಈ ಧೇನುವಿನ ದುಃಖದ ಕಾರಣವನ್ನು ತಿಳಿದುಕೊಂಡು ಬಾ," ಎಂದು ಆಜ್ಞಾಪಿಸಲು, ರಾಜಾಜ್ಞೆಯಂತೆ ದೂತನು ಆ ಆಕಳ ಬೆನ್ನುಹತ್ತಿ ನಡೆದನು. ಆಗ ಆಕಳು ವೇಂಕಟಗಿರಿಯನ್ನು ಹತ್ತಿ ವಲ್ಮೀಕದಹತ್ತರ ಹೋಗಿ ನಿಂತಿತು. ಆ ದೂತನಾದರೂ ವಲ್ಮೀಕದ ಸಮೀಪಕ್ಕೆ ಬಂದು, ಮೃತನಾಗಿ ಬಿದ್ದಿರುವ ಗೋಪಾಲನನ್ನೂ, ವಲ್ಮೀಕದಿಂದ ಉತ್ಪನ್ನವಾಗಿ ಪುಟಿಯುತ್ತಿರುವ ಭಯಂಕರವಾದ ರಕ್ತವೃಷ್ಟಿಯನ್ನೂ ನೋಡಿ, ಭಯದಿಂದ ಗದಗದನೆ ನಡುಗಿ, ಬೇಗನೆ ಓಡಿ ಬಂದು, ರಾಜನಿಗೆ ವಲ್ಮೀಕದಿಂದ ಹೊರಡುತ್ತಿರುವ ರಕ್ತದ ಸಂಗತಿಯನ್ನೂ, ಗೋಪಾಲನು ಮೃತನಾದದ್ದನ್ನೂ ತಿಳಿಸಿದನು. ಅದನ್ನು ಕೇಳಿ ಚೋಳರಾಜನು ಆಶ್ಚರ್ಯಪಟ್ಟು— "ಭಯಂಕರವಾದ

ಪ್ರಸಂಗವು ಪ್ರಾಪ್ತವಾಯಿತಲ್ಲ!" ಎಂದು ಬೇಗನೆ ಒಂದು ಮೇಣೆಯನ್ನು ತರಿಸಿ, ಅದರೊಳಗೆ ಕುಳಿತುಕೊಂಡು ವೇಂಕಟಾಚಲಕ್ಕೆ ಬಂದು, ಹುತ್ತಿನೊಳಗಿಂದ ಹೊರಡುತ್ತಿರುವ ರಕ್ತಪ್ರವಾಹವನ್ನೂ, ಮೃತನಾಗಿ ಬಿದ್ದಿರುವ ಗೋಪಾಲನನ್ನೂ ನೋಡಿ,— "ಅಕಟಾ! ಈ ವಲ್ಮೀಕವು ರಕ್ತಮಯವಾಗಿರುವದು! ಗೋಪಾಲನು ಮೃತನಾಗಿ ಬಿದ್ದಿರುವನು!! ಈ ಭಯಂಕರವಾದ ಕೃತ್ಯವನ್ನು ಯಾವ ಪಾಪಿಷ್ಠನು ಮಾಡಿರಬಹುದು? ಮೂಕ ಪ್ರಾಣಿಯಾದ ಧೇನುವು ಮನುಷ್ಯರಾಗೆ ವರ್ತಮಾನವನ್ನು ತಿಳಿಸಿತು, ಇದು ಎಂಥ ಆಶ್ಚರ್ಯವು! ಎಂದು ಮಾತಾಡುತ್ತಿರಲು, ಆತನ ಮಾತಗಳನ್ನು ಕೇಳಿ ವಲ್ಮೀಕದಲ್ಲಿರುವ ಜಗತ್ಪತಿಯಾದ ಶ್ರೀನಿವಾಸನು ಹೊರಗೆ ಬಂದು, ಘಾಯದ ವೇದನೆಯಿಂದ ವ್ಯಾಕುಲವಾದ ಮುಖವುಳ್ಳವನಾಗಿ, ಅಶ್ರುಪೂರಿತ ನೇತ್ರಗಳುಳ್ಳವನಾಗಿ, ಗದ್ಗದಸ್ವರವುಳ್ಳವನಾಗಿ, ಶಂಖ–ಚಕ್ರಗಳ ಕಾಂತಿಯಿಂದ ಪ್ರಕಾಶಮಾನನಾಗಿ ಬಹು ಕಷ್ಟಯುಕ್ತವಾದ ನುಡಿಗಳಿಂದ ರಾಜನಿಗೆ,— ಎಲೈ ಪಾಪಿಷ್ಠನೇ! ದುರಾಚಾರಿಯೇ!! ರಾಜೈಶ್ವರ್ಯದಿಂದ ಮದೋನ್ಮತ್ತನಾದ ಚೋಳರಾಜನೇ!!! ಅನಾಥನಾಗಿ, ಅನ್ನರಹಿತನಾಗಿ, ದರಿದ್ರನಾಗಿ, ವನಚಾರಿಯಾಗಿ, ಮಾತಾಪಿತೃಗಳಿಂದಲೂ, ಭಾರ್ಯೆಯಿಂದಲೂ, ಬಂಧು–ಬಾಂಧವರಿಂದಲೂ ರಹಿತನಾಗಿ ಇರುವ ನನ್ನ ಶಿರಸ್ಸಿಗೆ ತೀಕ್ಷ್ಣವಾದ ಕೊಡಲಿಯಿಂದ ಈ ದುಷ್ಟನಾದ ನಿನ್ನ ಗೋಪಾಲನು ತಾಡನಮಾಡಿದನು, ಆ ಹೊಡತದಿಂದ ನನಗೆ ಪರಮದುಃಖವು ಉಂಟಾಗಿರುವದು; ಎಲೈ ಚೋಳನೆ, ನಿನ್ನ ರಾಜ್ಯದಲ್ಲಿ ಇಂಥ ಅನ್ಯಾಯಗಳೇ ನಡೆಯುತ್ತವೆಂಬಹಾಗೆ ತೋರುತ್ತದೆ. ನೀನು ಹೀಗೆ ರಾಜೈಶ್ವರ್ಯಮತ್ತನಾಗಿರುವದರಿಂದ, ನಿನಗೆ ಶಾಪವನ್ನು ಕೊಡುತ್ತೇನೆ, ಗ್ರಹಣಮಾಡು; ನನಗೆ ದುಃಖಕೊಟ್ಟ ಕರ್ಮದಿಂದ ನೀನು ಪಿಶಾಚನಾಗು" ಎಂದನು. ಅದನ್ನು ಕೇಳಿ ಚೋಳರಾಜನು ಭಯದಿಂದ ಭೂಮಿಯಲ್ಲಿ ಮೂರ್ಛಿತನಾಗಿ ಬಿದ್ದು, ಒಂದು ಮುಹೂರ್ತದ ಮೇಲೆ ಎಚ್ಚತ್ತು ಕೈಮುಗಿದುಕೊಂಡು ಶ್ರೀನಿವಾಸನನ್ನು ಹೀಗೆ ಬೇಡಿಕೊಂಡನು.

॥ ಇತಿ ಶ್ರೀಭವಿಷ್ಯೋತ್ತರ ಪುರಾಣದಲ್ಲಿ ಶ್ರೀವೇಂಕಟೇಶಮಾಹಾತ್ಮ್ಯದಲ್ಲಿ "ಅವತಾರಪ್ರಶಂಸನ"ವೆಂಬ ಮೂರನೇ ಅಧ್ಯಾಯವು ಮುಗಿದುದು ॥

---

# ೪ನೆಯ ಅಧ್ಯಾಯ

ಕೇಳ್ಳೆ ಜನಕರಾಜನೆ, ಆ ಚೋಳರಾಜನು ಶ್ರೀಹರಿಗೆ ಬೇಡಿಕೊಂಡದ್ದೇನೆಂದರೆ — "ಸ್ವಾಮಿ, ಕರುಣಾನಿಧಿಯೇ, ನಿರಪರಾಧಿಯಾದ ನನಗೆ ನೀನು ವಿಚಾರಮಾಡದೆ ಶಾಪವನ್ನು ಕೊಟ್ಟೆಯಲ್ಲ! ಶ್ರೀವಿಷ್ಣುವೇ. ನಿನಗಾದ ಈ ದುಃಖಕರವಾದ ಸಂಗತಿಯನ್ನು ಸ್ವಲ್ಪವಾದರೂ ಅರಿಯೆನು; ಇದರಲ್ಲಿ ನನ್ನ ಅಪರಾಧವೇನೂ ಇರುವದಿಲ್ಲ. ದೇವಾಧಿದೇವನೇ, ನಿನಗೆ ಮಾತ್ರ ಪರಮ ದುಃಖವು ಪ್ರಾಪ್ತವಾಯಿತು. ಹಾ! ಕಷ್ಟವು! ಕಷ್ಟವು!!" ಎನ್ನುತ್ತ ತನಗೆ ಕಾರಣವಿಲ್ಲದೆ ಶಾಪವು ಬಂದದ್ದರಿಂದಲೂ, ಶ್ರೀಹರಿಗೆ ದೊಡ್ಡ ಘಾಯವು ಉಂಟಾಗಿರುವದರಿಂದಲೂ ಬಹಳ ವ್ಯಾಕುಲನಾಗಿ ರಾಜನು ನಿಂತಿರಲು, ದಯಾಸಮುದ್ರನಾದ ಶ್ರೀನಿವಾಸನಿಗೆ ಪಶ್ಚಾತ್ತಾಪವುಂಟಾಗಿ ಆತನು ರಾಜನಿಗೆ— "ಚೋಳರಾಜನೇ, ನಾನು ದುರಾಚಾರಿಯು; ಪರಮ ಪಾಪಿಷ್ಠನು; ಯಾಕಂದರೆ, ಅಪರಾಧವನ್ನು ವಿಚಾರಮಾಡದೆ ಅಜ್ಞಾನದಿಂದಲೂ, ಅತಿಶಯವಾದ ಘಾಯದಿಂದ ನನಗೆ ಉತ್ಪನ್ನವಾದ ವ್ಯಥೆಯಿಂದಲೂ, ನಾನು ನಿನಗೆ ವ್ಯರ್ಥವಾಗಿ ಶಾಪವನ್ನು ಕೊಟ್ಟೆನು; ಇದರಿಂದ ನನಗೆ ಬಹಳ ದುಃಖವಾಗಿದೆ; ಉಪಾಯವಿಲ್ಲ! ರಾಜನೇ, ನನ್ನ ಶಾಪವು ವ್ಯರ್ಥವಾಗಲಾರದು; ಆದರೂ ನಿನಗೊಂದು ಸಮಾಧಾನಕರವಾದ ಮಾತನ್ನು ಹೇಳುವೆನು ಕೇಳು; ಅದೇನಂದರೆ,— "ಈ ಕಲಿಯುಗವು ಮುಗಿಯುವ ವರೆಗೆ ಸತ್ಯಸಂಕಲ್ಪ ದೋಷದಿಂದ ನಾವಿಬ್ಬರು ದುಃಖದಿಂದ ಯುಕ್ತರಾಗಿರೋಣ; ಅಂದರೆ ನಿನ್ನ ಸಂಗಡ ನಾನೂ ದುಃಖವನ್ನನುಭವಿಸುವೆನು. ಇದಂತಿರಲಿ! ರಾಜನೇ, ಮುಂದೆ ಕೆಲವು ಕಾಲದ ಮೇಲೆ ಆಕಾಶನೆಂಬ ರಾಜನು ಹುಟ್ಟಿ, ಆತನು ತನ್ನ ಕನ್ನಿಕಯನ್ನು ನನಗೆ ಕೊಡುವನು; ಆ ಕನ್ಯಾಪ್ರದಾನಕಾಲದಲ್ಲಿ ನನಗೆ ಎರಡು ಸಾವಿರ ತೊಲೆ ತೂಕ ಸುವರ್ಣದಿಂದ ನಿರ್ಮಿತವಾಗಿಯೂ, ನವರತ್ನಗಳಿಂದ ಭೂಷಿತವಾಗಿಯೂ ಇರುವ ಕಿರೀಟವನ್ನು ವರದಕ್ಷಿಣೆಯಾಗಿ ಕೊಡುವನು; ಆ ಕಿರೀಟವನ್ನು ನಾನು ಪ್ರತಿ ಶುಕ್ರವಾರ ಸಾಯಂಕಾಲದಲ್ಲಿ ಧರಿಸುವೆನು; ಆ ಸಮಯದಲ್ಲಿ ನನ್ನ ನೇತ್ರಗಳು ಜಲದಿಂದ ಪೂರ್ಣವಾಗುವವು. ಆ ವೇಳೆಯಲ್ಲಿ ಮಾತ್ರ ಆರುಗಳಿಗೆಗಳತನಕ

ನೀನು ನನ್ನನ್ನು ನೋಡಿದರೆ ನನಗೆ ಸುಖವಾಗುವದು," ಎಂದು ಚೋಳರಾಜನಿಗೆ ತಾನು ಕೊಟ್ಟ ಶಾಪದ ಕಾಲನಿಯಮವನ್ನು ಹೇಳಿ, ಅವನಿಗೆ ಸುಖವಾಗುವ ಕಾಲವನ್ನೂ ಸೂಚಿಸಿ, ತಾನು ಮಾಡಿದ ಅವತಾರದ ಪ್ರಯೋಜನವನ್ನೂ, ಆ ಚೋಳರಾಜನಿಗೆ ತಿಳಿಸಲು, ಅವನು ಶ್ರೀಹರಿಯ ಶಾಪಕ್ಕನುಸರಿಸಿ, ಪಿಶಾಚ ರೂಪವುಳ್ಳವನಾಗಿ ವನದಲ್ಲಿ ಸಂಚಾರಮಾಡುವದಕ್ಕೆ ಹೊರಟುಹೋದನು.

ಇತ್ತ ಶ್ರೀನಿವಾಸನು ವಲ್ಮೀಕವನ್ನು ಹೊಕ್ಕು, ಕುಠಾರದಿಂದ ಉತ್ಪನ್ನವಾದ ಗಾಯವು ಇನ್ನು ಹ್ಯಾಗೆ ಮಾಯಬೇಕೆಂದು ಆಲೋಚಿಸಹತ್ತಿದನು. ಬಳಿಕ ವೈದ್ಯಶಾಸ್ತ್ರದಲ್ಲಿ ನಿಪುಣನಾದ ಬೃಹಸ್ಪತಿಯನ್ನು ಸ್ಮರಿಸಲು, ಆ ಕ್ಷಣದಲ್ಲಿಯೇ ದೇವಗುರುವು ಶ್ರೀಹರಿಯ ಸಮ್ಮುಖದಲ್ಲಿ ಬಂದು ನಿಂತನು. ಆಗ ಶ್ರೀನಿವಾಸನು—"ಬೃಹಸ್ಪತಿಯೇ, ಇದು ನೋಡು ನನ್ನ ಘಾಯವನ್ನು; ಇದಕ್ಕೆ ತಕ್ಕ ಔಷಧವನ್ನು ಹೇಳು," ಎಂದು ಕೇಳಲು, ಆಗ ಗುರುವು—"ಶ್ರೀನಿವಾಸನೇ, ಈ ಘಾಯಕ್ಕೆ ಎಕ್ಕಿಯ ಗಿಡದ ಕಾಯಿಯ ಅರಳೆಯನ್ನೂ, ಔದುಂಬರದ ಹಾಲನ್ನೂ ಕೂಡಿಸಿ ಹಚ್ಚಿದರೆ, ಸ್ವಲ್ಪ ದಿವಸಗಳಲ್ಲಿಯೇ ಮಾಯುವದು," ಎಂದುಹೇಳಿ ಹೊರಟು ಹೋದನು.

ಆಗ ಶ್ರೀನಿವಾಸನು ಗುರುವು ಹೇಳಿದಂತೆ ಔಷಧವನ್ನು ಪ್ರತಿ ತ್ಯದಲ್ಲಿಯೂ ಹಚ್ಚುತ್ತಿರುವನು. ಹೀಗೆ ಆ ವೇಂಕಟಾಚಲದಲ್ಲಿ ಲಕ್ಷ್ಮೀಪತಿಯಾದ ಶ್ರೀನಿವಾಸನು, ವಲ್ಮೀಕವೇ ಕೌಸಲ್ಯಾದೇವಿಯಾಗಿಯೂ, ತಿಂತ್ರಿಣೀ ವೃಕ್ಷವೇ ದಶರಥನಾಗಿಯೂ, ಶೇಷಾಚಲವೇ ಅನುಜನಾದ ಲಕ್ಷ್ಮಣನಾಗಿಯೂ, ವೇಂಕಟಾಚಲವೇ ಅಯೋಧ್ಯಾ ಪಟ್ಟಣನಾಗಿಯೂ, ತಿಳಿದು, ರಾಮಾವತಾರದಂತೆ ಶೋಭಿಸುತ್ತಿರುವನು; ಮತ್ತು ವಲ್ಮೀಕವೇ ದೇವಕಿಯಾಗಿಯೂ, ತಿಂತ್ರಿಣೀ ವೃಕ್ಷವೇ ವಸುದೇವನಾಗಿಯೂ, ಶೇಷಾಚಲವೇ ಬಲರಾಮನಾಗಿಯೂ, ಆ ವೇಂಕಟಾಚಲವೇ ಮಥುರಾ ಪಟ್ಟಣವಾಗಿಯೂ, ಸ್ವಾಮಿ ಪುಷ್ಕರಿಣೀ ತೀರ್ಥವೇ ಯಮುನಾನದಿಯಾಗಿಯೂ, ಸಮಸ್ತರಾದ ಯಾದವರೇ ಆ ಪರ್ವತದಲ್ಲಿರುವ ಮೃಗಗಳಾಗಿಯೂ, ಪಕ್ಷಿಗಳೇ ಗೋಪಿಕಾ ಸ್ತ್ರೀಪುರುಷರಾಗಿಯೂ, ತಿಳಿದು, ಕೃಷ್ಣಾವತಾರದಂತೆ ಕ್ರೀಡೆಯನ್ನು ಮಾಡುತ್ತಿರುವನು. ಮತ್ತು "ಬ್ರಹ್ಮ, ವಿಷ್ಣು, ಮಹೇಶ್ವರ ಆಕಾಶಗಂಗೆ ಇವರ ಆಗಮನವುಳ್ಳದ್ದಾಗಿ, ಪರಮಾತ್ಮನಿಗೆ ಅವಲಂಬನವಾಗಿರುವ

ವೇಂಕಟಾಚಲವನ್ನು ಸರ್ವಕಾಲದಲ್ಲಿಯೂ ಅನುಸರಿಸಿ ಹೋಗು;" ಎಂಬ ವೇದ ವಚನದಂತೆ ಪರ್ವತಶ್ರೇಷ್ಠವಾದ ಶೇಷಾಚಲವು ಪ್ರತ್ಯಕ್ಷ ವೇದಮಯವಾಗಿರುವದು. ಶ್ರೀನಿವಾಸನು ವಾಸಮಾಡಿದ ವಲ್ಮೀಕವು ವೈಕುಂಠಕ್ಕಿಂತಲೂ ಅಧಿಕವೆನಿಸಿತು; ಹ್ಯಾಗೆಂದರೆ,—ಆ ವೈಕುಂಠದಲ್ಲಿರುವ ವಿರಜಾನದಿಯೇ ಇಲ್ಲಿರುವ ಸುವರ್ಣಮುಖರೀ ನದಿಯು, ರಮಾಪತಿಯಾದ ನಾರಾಯಣನೇ ಇಲ್ಲಿ ವಾಸಮಾಡಿರುವ ಶ್ರೀನಿವಾಸನು, ಮುಖ್ಯಬ್ರಹ್ಮರೇ ಇಲ್ಲಿರುವ ಪಕ್ಷಿಗಳು, ಮುಕ್ತರುದ್ರರೇ ಸಿಂಹಮೊದಲಾದ ಮೃಗಗಳು, ಸನತ್ಕುಮಾರಮೊದಲಾದ ಋಷಿಗಳೇ ಕಪಿಗಳು. ಅಂಥ ಶೇಷಾಚಲಕ್ಕೆ ಹೋಗುವ ಅಪೇಕ್ಷೆಯನ್ನು ಮಾಡುವ ಧರ್ಮಿಷ್ಠನಿಗೆ ಸಮಸ್ತ ಪುಣ್ಯಕಾರ್ಯಗಳನ್ನು ಆಚರಿಸಿದ ಫಲವು ಪ್ರಾಪ್ತವಾಗುತ್ತದೆ; ಅವನು ದೇವೋತ್ತಮನಾದ ಶ್ರೀನಿವಾಸನಿಗೆ ಪ್ರಿಯನಾಗುವನು. ಇಂಥ ಸರ್ವೋತ್ತಮವಾದ ವೇಂಕಟಾಚಲದ ಮಾಹಾತ್ಮ್ಯವನ್ನು ತಿಳಿಯುವದಕ್ಕೆ ಬ್ರಹ್ಮರುದ್ರೇಂದ್ರಾದಿ ದೇವತೆಗಳು ಸಹ ಶಕ್ತರಾಗುವದಿಲ್ಲ; ಅಂದಮೇಲೆ ಅಲ್ಪಶಕ್ತರಾದ ಮನುಷ್ಯರು ಅದರ ಮಾಹಾತ್ಮ್ಯವನ್ನು ಏನು ತಿಳಿದಾರು?"

॥ ಇತಿ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿ, ಶ್ರೀ ವೇಂಕಟೇಶ ಮಾಹಾತ್ಮ್ಯದಲ್ಲಿ "ಪರ್ವತವರ್ಣನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.

## ೫ನೆಯ ಅಧ್ಯಾಯ



ಶತಾನಂದ ಋಷಿಗಳು ಹೇಳುತ್ತಾರೆ,—" ಕೇಳೈ ಜನಕರಾಜನೇ, ಶ್ರೀನಿವಾಸನು ವೈಕುಂಠಲೋಕವನ್ನು ಬಿಟ್ಟು ವೇಂಕಟಾಚಲದಲ್ಲಿ ವಾಸಮಾಡಿದ ಚರಿತ್ರವನ್ನೂ, ಆತನ ಅವತಾರ ಪ್ರಭಾವವನ್ನೂ, ಚೋಳರಾಜನಿಗೆ ಮಾಡಿದ ನಿಬಂಧನೆಯನ್ನೂ ಹೇಳಿದೆನು; ಇನ್ನು ಮುಂದೆ ಆಕಾಶರಾಜನ ಚರಿತ್ರೆಯನ್ನೂ, ಲಕ್ಷ್ಮೀದೇವಿಯು ಅವನಿಗೆ ಪುತ್ರಿಯು ಹ್ಯಾಗಾದಳೆಂಬದನ್ನೂ, ಜಗತ್ಪತಿಯಾದ ಶ್ರೀನಿವಾಸನು ಆ ರಾಜನಿಗೆ ಜಾಮಾತನಾದ ವೃತ್ತಾಂತವನ್ನೂ ಹೇಳುವೆನು ಕೇಳು,—ರಾಜನೇ, ಯಾವ ಮನುಷ್ಯನು ಶ್ರೀ ವೆಂಕಟೇಶ ಮಾಹಾತ್ಮ್ಯವೆಂಬ ಕ್ಷೀರಸಾಗರ

ದಲ್ಲಿ ನಿರಂತರ ಸ್ನಾನಮಾಡುವನೋ, ಅವನೇ ಪುಣ್ಯವಂತನು, ಅವನೇ ಕೃತಾರ್ಥನು. ಇರಲಿ, ಜನಕರಾಜನೇ, ಮುಂದಿನ ಕಥೆಯನ್ನು ಹೇಳುವೆನು, —

"ಒಂದಾನೊಂದು ಕಾಲದಲ್ಲಿ ವೇಂಕಟಾಚಲಪತಿಯಾದ ಶ್ರೀನಿವಾಸನು ತನ್ನ ಶಿರಸ್ಸಿನಲ್ಲಿ ಉಂಟಾದ ಘಾಯಕ್ಕೆ ಔಷಧವನ್ನು ತರುವವಕ್ಕಾಗಿ ಅರುಣೋದಯ ಕಾಲದಲ್ಲಿ ಎದ್ದು ಹೋಗುತ್ತಿರಲು, ಅದೇ ಸಮಯದಲ್ಲಿಯೇ ವರಾಹಮೂರ್ತಿಯಾದ ಶ್ರೀಹರಿಯು ಬೇಟೆಯನ್ನಾಡುವದಕ್ಕೆ ಅನೇಕ ಸೂಕರಗಳೊಂದಿಗೆ ಹೋಗಿ, ಶ್ಯಾಮಕಧಾನ್ಯವನ್ನು ಅಪಹರಿಸುವ ವೃಷಭನೆಂಬ ದೈತ್ಯನನ್ನು ಜಯಿಸಿ ಬರುತ್ತಿರುವಷ್ಟರಲ್ಲಿ, ಅವನಿಗೆ ಶ್ರೀನಿವಾಸನು ಭೆಟ್ಟಿಯಾದನು. ಆಗ ಮಿಕ್ಕ ವರಾಹಗಳು ಶ್ರೀನಿವಾಸನನ್ನು ನೋಡಿ "ನೀನು ಯಾರು, ನೀನು ಯಾರು ?" ಎಂದು ಗರ್ಜಿಸುತ್ತ ಬರುತ್ತಿರಲು, ಜಗತ್ಪತಿಯಾದ ಶ್ರೀನಿವಾಸನು ಆ ಸೂಕರಗಳನ್ನು ಕಂಡು ತನ್ನ ವಲ್ಮೀಕದಲ್ಲಿ ಅಡಗಿಕೊಂಡನು. ಆ ಸಮಯದಲ್ಲಿ ವರಾಹಮೂರ್ತಿಯು ಶ್ರೀನಿವಾಸನು ಅಡಗಿದ್ದನ್ನು ಕಂಡು,—"ನೀನು ಭಯಪಡಬೇಡ, ಹೊರಗೆ ಹೊರಗೆ ಬಾ" ಎಂದು ನುಡಿಯಲು, ಅವನ ಮಾತುಗಳನ್ನು ಕೇಳಿ, ಶ್ರೀನಿವಾಸನು ಹೊರಗೆ ಬಂದು ವರಾಹಮೂರ್ತಿಯನ್ನು ನೋಡಿದನು, ವರಾಹನು ಶ್ರೀನಿವಾಸನನ್ನು ಕಂಡನು, ಹೀಗೆ ಪರಸ್ಪರಾವಲೋಕನದಿಂದ ಉಭಯತರ ಕಣ್ಣುಗಳಲ್ಲಿ ಆನಂದಬಾಷ್ಪಗಳು ಸುರಿಯಹತ್ತಿದವು. ಹೀಗೆ ಪ್ರತ್ಯಕ್ಷವಾಗಿ ಎರಡು ರೂಪಗಳಿಂದ ಶೋಭಿಸುವ ವರಾಹಶ್ರೀನಿವಾಸರು ಲೋಕಕ್ಕೆ ವಿಡಂಬನವನ್ನು ತೋರಿಸುವದಕ್ಕಾಗಿ ತಮ್ಮ ತಮ್ಮೊಳಗೆ ಮಾತಾಡಹತ್ತಿದರು ಆಗ ಈ ಉಭಯತರ ಆಶ್ಚರ್ಯಕರವಾದ ಕಾರ್ಯವನ್ನು ಕಂಡು ಬ್ರಹ್ಮನೇ ಮೊದಲಾದ ದೇವತೆಗಳು, ಆ ವರಾಹ-ಶ್ರೀನಿವಾಸರ ಮೇಲೆ ಸಂತೋಷದಿಂದ ಪುಷ್ಪವೃಷ್ಟಿಯನ್ನು ಮಾಡಿ ತಮ್ಮೊಳಗೆ "ಈ ಜಗತ್ಪತಿಯಾದ ಶ್ರೀಹರಿಯು ಯುಗಾನುಸಾರವಾಗಿಯೂ, ದೇಶಾನುಸಾರವಾಗಿಯೂ, ಕಾಲಾನುಸಾರವಾಗಿಯೂ, ಮಯೇನುಸಾರವಾಗಿಯೂ ಲಕ್ಷ್ಮೀ ಸಮೇತವಾಗಿ ಅವತಾರವನ್ನು ಮಾಡಿ, ಪ್ರಾಕೃತ ಪುರುಷನಂತೆ ನಟಿಸುತ್ತಾನೆ"ಂದು ಮಾತಾಡಿ, ಆನಂದದಿಂದ ಆ ಶೇಷಪರ್ವತದ ಮಹಿಮೆಯನ್ನೂ, ರಮಾಪತಿಯಾದ ಶ್ರೀನಿವಾಸನ ವಿಚಿತ್ರಕರವಾದ ಮಾಯೆಯನ್ನೂ ಕೊಂಡಾಡಿ, ತಮ್ಮ ತಮ್ಮ ಲೋಕಗಳಿಗೆ ಹೋದರು.

ಇತ್ತ ವರಾಹಮೂರ್ತಿಯು ಶ್ರೀನಿವಾಸನಿಗೆ-"ನೀನು ವೈಕುಂಠಲೋಕ ವನ್ನು ಬಿಟ್ಟು, ಇಲ್ಲಿಗೆ ಏನುಕಾರಣ ಪ್ರಾಪ್ತನಾದೆ?" ಎಂದು ಕೇಳಲು, ಶ್ರೀನಿ ವಾಸನು-"ವರಾಹನೇ, ಏನು ಹೇಳಲಿ! ಒಂದಾನೊಂದು ಸಮಯದಲ್ಲಿ ಭೃಗು ಋಷಿಯು ವೈಕುಂಠಕ್ಕೆ ಬಂದು, ನಾನು ನಿದ್ರೆಮಾಡುತ್ತಿರಲು, ತನ್ನನ್ನು ಆದರಿಸ ಲಿಲ್ಲೆಂಬ ಸಿಟ್ಟಿನಿಂದ ನನ್ನನ್ನು ಪಾದದಿಂದ ತಾಡನಮಾಡಿದನು. ಅದರಿಂದ ಲಕ್ಷ್ಮಿಯು ತನಗೆ ಅಪಮಾನವಾಯಿತೆಂದು ನನ್ನ ಕೂಡ ಕಲಹವನ್ನು ಮಾಡಿ ಕರವೀರಪುರಕ್ಕೆ ಹೋದಳು, ಆ ದುಃಖದಿಂದ ಸಂತಪ್ತನಾಗಿ ವೈಕುಂಠವನ್ನು ಬಿಟ್ಟು ಇಲ್ಲಿಗೆ ಬಂದು ನೀನು ವಾಸಮಾಡಿಕೊಂಡಿರುವ ಸ್ಥಳದ ದಕ್ಷಿಣದಿಕ್ಕಿನಲ್ಲಿರುವದೊಂದು ಈ ವಲ್ಮೀಕದಲ್ಲಿ ಸುಖದಿಂದಿದ್ದೆನು; ಆದರೆ, ಏನು ಹೇಳಲಿ! ಚೋಳರಾಜನ ಗೋಗಳನ್ನು ಕಾಯುವ ದುಷ್ಟ ಗೋಪಾಲನು ತೀಕ್ಷ್ಣವಾದ ಕುಠಾರದಿಂದ ನನ್ನ ಶಿರಸ್ಸಿನಲ್ಲಿ ತಾಡನಮಾಡಿದನು. ಆ ಘಾಯವು ನನ್ನನ್ನು ಬಾಧಿಸುತ್ತಿರುವದು; ಆದ್ದರಿಂದ ಈ ಪರ್ವತದಲ್ಲಿ ಔಷಧವನ್ನು ತರುವದಕ್ಕಾಗಿ ನಿತ್ಯದಲ್ಲಿಯೂ ಹೋಗು ತ್ತಿರುವೆನು. ಈ ಹೊತ್ತಿನದಿನ ನಿನ್ನ ಭೆಟ್ಟಿಯಾಯಿತು, ಇದೊಂದು ನನ್ನ ಸುದೈ ವವೇ ಸರಿ; ನನ್ನ ಮನಸ್ಸಿನಲ್ಲಿ ಇದೇ ಸ್ಥಳದಲ್ಲಿರಬೇಕೆಂಬದಾಗಿರುತ್ತದೆ; ಆದ್ದ ರಿಂದ ಈ ಕಲಿಯುಗವು ಮುಗಿಯುವವರೆಗೂ ನನಗೆ ಇರಲಿಕ್ಕೆ ಸ್ಥಳವನ್ನು ಕೊಡಬೇಕು" ಎಂದು ಕೇಳಲು, ವರಾಹನು-"ಶ್ರೀನಿವಾಸನೇ, ನೀನು ಕೇಳಿದಂತೆ ಸ್ಥಳವನ್ನು ಕೊಡುವೆನು; ಆದರೆ ಕ್ರಯವನ್ನು ಕೊಡಬೇಕಾಗುವದು" ಎಂದು ಹೇಳಿದನು. ಅದನ್ನು ಕೇಳಿ ಶ್ರೀನಿವಾಸನು ಮಧುರವಾದ ಮಾತಿನಿಂದ-"ಕರುಣಾ ನಿಧಿಯಾದ ವರಾಹನೇ, ನನ್ನ ಭಕ್ತರು ಬಂದು ಮೊದಲೇ ನಿನ್ನ ದರ್ಶನವನ್ನು ತೆಗೆದುಕೊಂಡು ಕ್ಷೀರಾಭಿಷೇಕವನ್ನು ನಿನಗೆ ಪೂರ್ವದಲ್ಲಿಯೇ ಮಾಡಿ ನಿನಗೆ ನೈವೇದ್ಯವನ್ನು ಮಾಡಿದನಂತರ ನನಗೆ ಮಾಡಲಿ; ಇದೇ ನಿನಗೆ ಶ್ರೇಷ್ಠವಾದ ಕ್ರಯವು, ಎಂದು ತಿಳಿದುಕೋ. ಈ ಕ್ರಯವನ್ನು ಅಂಗೀಕಾರಮಾಡಿ ನನ್ನ ಮೇಲೆ ಕೃಪೆಯನ್ನು ಮಾಡು" ಎಂದು ಹೇಳಲು, ವರಾಹನು ಆ ಮಾತಿಗೆ ಒಪ್ಪಿ ಶ್ರೀನಿವಾಸನಿಗೆ ಶತಪಾದ ಭೂಮಿಯನ್ನು ಕೊಟ್ಟನು. ಈ ಮನುಷ್ಯಲೋಕದಲ್ಲಿ ಅಜ್ಞಾನವುಳ್ಳ ಜನರಿಗೆ ಮೋಹಪಡಿಸುವದಕ್ಕಾಗಿಯೂ, ತನ್ನ ಭಕ್ತರ ಕಾರ್ಯ ಸಿದ್ಧಿಯನ್ನು ಮಾಡುವದಕ್ಕಾಗಿಯೂ ಏಕರೂಪಿಯಾದ ಶ್ರೀನಿವಾಸ—ವರಾಹರು ಶೇಷಾಚಲದಲ್ಲಿ ಲೀಲೆಯನ್ನು ಮಾಡುತ್ತಿರುವರು.

ವರಾಹಮೂರ್ತಿಯು ಆಪ್ತೋಕ್ತಿನಿಂದ ಶ್ರೀನಿವಾಸನಿಗೋಸ್ಕರ ಪಾಕವನ್ನು ಮಾಡುವದಕ್ಕೆ ಬಕುಲಾವತಿಯೆಂಬ ಸ್ತ್ರೀಯನ್ನು ನಿಯಮಿಸಿದನು. ಹಾಗು ಅವನು ನಿತ್ಯದಲ್ಲಿ ಮಧುಸಹಿತವಾದ ಶ್ಯಾಮಾಕಾನ್ನವನ್ನು ಬಕುಲಾವತಿಯಕೂಡ ಕಳು ಹುತ್ತಿದ್ದನು; ಹೀಗೆ ಬಕುಲಾವತಿಯು ಭಕ್ತಿಪೂರ್ವಕವಾಗಿ ಅನ್ನಪಾನಾದಿಗಳಿಂದಲೂ, ಘಾಯಕ್ಕೆ ಔಷಧವನ್ನು ಹಚ್ಚುವದರಿಂದಲೂ, ಕಾಲು ಒತ್ತುವದರಿಂದಲೂ, ನಿತ್ಯದಲ್ಲಿ ಶ್ರೀನಿವಾಸನ ಸೇವೆಯನ್ನು ಮಾಡುತ್ತಿರುವಳು.

ಜನಕರಾಜನು—“ ಶತಾನಂದ ಋಷಿಗಳೇ, ಬಕುಲಾವತಿಯು ಶ್ರೀನಿವಾಸನ ಸೇವೆಯನ್ನು ಮಾಡುತ್ತಿರುವಳೆಂದು ಹೇಳಿದರಲ್ಲ? ಆ ಬಕುಲಾವತಿಯು ಯಾರೆಂಬದನ್ನು ನನಗೆ ಹೇಳಬೇಕು, ” ಎಂದು ಕೇಳಲು, ಶತಾನಂದರು—“ ರಾಜನೇ, ಆ ಬಕುಲಾವತಿಯು ಪೂರ್ವಜನ್ಮದಲ್ಲಿ ಶ್ರೀಕೃಷ್ಣನ ತಾಯಿಯಾದ ಯಶೋದೆಯಾಗಿದ್ದಳು; ಆಕೆಯು ಕೃಷ್ಣಾವತಾರದಲ್ಲಿ ಶ್ರೀಕೃಷ್ಣನ ವಿವಾಹೋತ್ಸವವನ್ನು ನೋಡದೆ ಇದ್ದದರಿಂದ ತನ್ನ ಅಂತ್ಯಕಾಲದಲ್ಲಿ “ಕೃಷ್ಣನೇ, ನಿನ್ನ ಕಲ್ಯಾಣವನ್ನು ನಾನು ನೋಡಲಿಲ್ಲ, ಆ ಮಹೋತ್ಸವವನ್ನು ನೋಡುವ ಅಪೇಕ್ಷೆಯಾಗಿರುವದು; ಅದನ್ನು ಈಗಲೇ ಪೂರ್ಣಮಾಡು, ” ಎಂದು ಬೇಡಿಕೊಳ್ಳಲು, ಕೃಷ್ಣನು–ತಾಯಿಯೇ, ನಿನ್ನ ಮನೋರಥವು ಈ ಜನ್ಮದಲ್ಲಿ ಪೂರ್ಣವಾಗುವದಿಲ್ಲ; ಮುಂದೆ ನಿನ್ನ ಇನ್ನೊಂದು ಜನ್ಮದಲ್ಲಿ ನನ್ನ ವಿವಾಹಮಹೋತ್ಸವವನ್ನು ತೋರಿಸುವೆನು,” ಎಂದು ವರವನ್ನು ಕೊಡಲು, ಆಕೆಯು ಆ ಅಪೇಕ್ಷೆಯನ್ನಿಟ್ಟುಕೊಂಡು ಕಾಲವಶವಾದಳು. ಆಗ ಶ್ರೀಹರಿಯು ಯಶೋದೆಯ ಅಪೇಕ್ಷೆಯನ್ನು ಪೂರ್ಣಮಾಡುವದಕ್ಕಾಗಿ ಇಪ್ಪತ್ತೆಂಟನೆಯ ಕಲಿಯುಗದಲ್ಲಿ ಅವತಾರವನ್ನು ಮಾಡಿ, ಜಗತ್ತಿಗೆ ಕಾರಣನಾಗಿಯೂ, ದೋಷರಹಿತನಾಗಿಯೂ ಲೀಲೆಯನ್ನು ತೋರಿಸುತ್ತಿರುವನು. ಆ ಯಶೋದೆಯೇ ಈಗ ಬಕುಲಾವತಿಯಾಗಿ ಶ್ರೀನಿವಾಸನ ವಿವಾಹ ಮಹೋತ್ಸವವನ್ನು ನೋಡಿ ತೃಪ್ತಳಾಗಬೇಕೆಂಬ ಇಚ್ಛೆಯಿಂದ ವೇಂಕಟಾಚಲದಲ್ಲಿ ಆತನ ಸೇವೆಯನ್ನು ಮಾಡುತ್ತಿರುವಳು. ” ಎಂದು ಹೇಳಿದನು. ಎಲೈ ಜನಕರಾಜನೆ, ಕಲಿಯುಗದಲ್ಲಿ ಪಾಪಾಚರಣದಲ್ಲಿ ಆಸಕ್ತರಾದ ಜನರನ್ನು ಸಂರಕ್ಷಿಸುವದಕ್ಕಾಗಿಯೂ, ದೈತ್ಯರನ್ನು ಮೋಹಪಡಿಸುವದಕ್ಕಾಗಿಯೂ, ದೇವತೆಗಳಿಗೆ ಮುಕ್ತಿಯನ್ನು ಕೊಡುವದಕ್ಕಾಗಿಯೂ, ತನ್ನನ್ನು ಭಜಿಸುತ್ತಿರುವ ವೈರಾಗ್ಯ ಶಾಲಿಗಳಾದ

ಭಕ್ತರ ಮನೋಭೀಷ್ಟಗಳನ್ನು ಪೂರ್ಣ ಮಾಡುವದಕ್ಕಾಗಿಯೂ ಲಕ್ಷ್ಮೀಪತಿಯಾದ ಶ್ರೀನಿವಾಸನು ಪ್ರಾಕೃತ ಮನುಷ್ಯರಂತೆ ರೂಪವನ್ನು ಧಾರಣಮಾಡಿ ವೇಂಕಟಾಚಲದಲ್ಲಿ ತನ್ನ ಇಚ್ಛಾನುರೂಪವಾಗಿ, ಕ್ರೀಡಿಸುತ್ತಿರುವನು. ಶ್ರೀಹರಿಯು ಸಂತುಷ್ಟನಾದರೆ, ಯಾವದೂ ಅಲಭ್ಯವಾಗುವದಿಲ್ಲ; ಯಾಕಂದರೆ,–ಯಶೋದಾ ದೇವಿಗೆ ಸಂತೋಷದಿಂದ ವರವನ್ನು ಕೊಟ್ಟ ಕಾರಣದಿಂದ ಭಗವಂತನು ಅನ್ಯ ಜನ್ಮವನ್ನು ಧರಿಸಿ, ಬಕುಲಾವತಿಯ ಇಚ್ಛೆಯನ್ನು ಪೂರ್ಣಮಾಡುವನು. ಅಂಥ ಭಕ್ತರಲ್ಲಿ ಪ್ರೇಮವುಳ್ಳ ಭಗವಂತನು ಸಂತುಷ್ಟನಾದರೆ ಜ್ಞಾನ ಸಂಪತ್ತುಗಳು ಪ್ರಾಪ್ತವಾಗುವವು. ಆ ಪರಮಾತ್ಮನ ಲೀಲೆಯನ್ನು ತಿಳಿಯುವದು ದುರ್ಲಭವು. ಯಾಕಂದರೆ, ಶ್ರೀಹರಿಯು ತಾನು ಭಕ್ತನಿಂದ ಒಮ್ಮೆ ಪೂಜೆಯನ್ನು ಸ್ವೀಕರಿಸುವನು, ಮತ್ತೊಮ್ಮೆ ತಾನೇ ಭಕ್ತನ ಸೇವೆ ಮಾಡುವನು. ಹನುಮಂತನಿಂದ ತಾನು ಪೂಜೆಯನ್ನು ಮಾಡಿಸಿಕೊಂಡರೂ, ತಾನು ತನ್ನ ಭಕ್ತನಾದ ಅರ್ಜುನನ ಸೇವೆಯನ್ನು ಮಾಡಿದನು; ಇಂಥ ಪರಮಾತ್ಮನ ಅದ್ಭುತವಾದ ಮಹಿಮೆಯನ್ನು ತಿಳಿಯಲಿಕ್ಕೆ ಯಾವನು ಶಕ್ತನಾದಾನು ? ಜನಕರಾಜನೇ, ಆ ವೇಂಕಟಾಚಲದ ಮಾಹಾತ್ಮ್ಯವೂ, ಅಲ್ಲಿರುವ ತೀರ್ಥಗಳ ಮಹಿಮೆಯೂ ಪರಮ ಪವಿತ್ರವಾಗಿರುವವು; ಯಾಕಂದರೆ, ಆ ಪರ್ವತದಲ್ಲಿ ಶ್ರೀನಿವಾಸನು ಪ್ರತ್ಯಕ್ಷವಾಗಿರುವನು, ಅದರಿಂದ ಅಲ್ಲಿ ಪುಣ್ಯಕಾರ್ಯಗಳೇ ನಡೆಯುವವು. ಬಹಳ ಜನ್ಮಗಳಲ್ಲಿ ಮಾಡಿದ ಪುಣ್ಯದಿಂದ ಕ್ಷೇತ್ರ ದರ್ಶನವಾಗುವದು; ದೇವತೆಗಳಿಗೂ ದುರ್ಲಭವಾದ ಆ ವೇಂಕಟಗಿರಿಯ ದರ್ಶನವು ಮುಕ್ತಿಪ್ರದವಾಗಿರುವದು.

॥ ಇತಿ ಶ್ರೀಭವಿಷ್ಯೋತ್ತರ ಪುರಾಣದಲ್ಲಿ, ವೇಂಕಟೇಶಗಿರಿಯ ಮಾಹಾತ್ಮ್ಯದಲ್ಲಿ ಐದನೆಯ ಅಧ್ಯಾಯವು ಮುಗಿದುದು. ॥

# ೬ನೆಯ ಅಧ್ಯಾಯ

ಶತಾನಂದ ಋಷಿಗಳು ಹೇಳುತ್ತಾರೆ,–ಕೇಳೈ ಜನಕರಾಜನೇ, ಒಂದಾನೊಂದು ದಿವಸ ಶ್ರೀನಿವಾಸನು ತಾನು ಬೇಟೆಯನ್ನಾಡಲಿಕ್ಕೆ ಹೋಗಬೇಕೆಂದೆಣಿಸಿ, ಉಚ್ಚೈಃಶ್ರವವೆಂಬ ದೇವಲೋಕದ ಕುದುರೆಯನ್ನು ಸ್ಮರಿಸಿದನು. ಆತನು ಮನಸ್ಸಿನಲ್ಲಿ ಸ್ಮರಿಸಿದ ಕೂಡಲೆ ಆ ಕುದುರೆಯು ಪ್ರತ್ಯಕ್ಷವಾಗಿ ಶ್ರೀಹರಿಯು

ಸಮ್ಮುಖದಲ್ಲಿ ಬಂದು ನಿಂತಿತು. ಆ ಸಮಯದಲ್ಲಿ ಶ್ರೀನಿವಾಸನು ಸರ್ವಾಭರಣ ಗಳಿಂದ ಭೂಷಿತನಾಗಿ, ಕಿರಾತ ರೂಪವನ್ನು ಧಾರಣಮಾಡಿದನು; ಹ್ಯಾಗಂದರೆ. ಶುಭ್ರವಾಗಿಯೂ, ಪಂಚಹಸ್ತಪ್ರಮಾಣವಾಗಿಯೂ, ಇರುವ ದೋತರ ವನ್ನುಟ್ಟುಕೊಂಡನು. ಅದರ ಮೇಲೆ ನಡುಕಟ್ಟನ್ನು ಬಿಗಿದನು. ಅದರ ಕೆಳಗೆ ಉಡುದಾರವನ್ನು ಧರಿಸಿದನು. ಕನ್ನಡಿಯಲ್ಲಿ ನೋಡಿ ತನ್ನ ಹಣೆಗೆ ಬಿಳು ಪಾದ ಗೋಪೀಚಂದನದ ನಾಮವನ್ನು ಹಚ್ಚಿಕೊಂಡನು. ಆ ನಾಮದ ಮಧ್ಯದಲ್ಲಿ ಕುಂಕುಮದ ಗೆರೆಯನ್ನು ತೆಗೆದನು. ತಾಂಬೂಲದ ಡಬ್ಬಿಯನ್ನೂ, ಕನ್ನಡಿಯನ್ನೂ ವಸ್ತ್ರದಲ್ಲಿ ಕಟ್ಟಿ ನಡುವಿನಲ್ಲಿ ಬಂಧನ ಮಾಡಿಕೊಂಡನು. ಅದರಂತೆ ಬಂಗಾರದ ಯಜ್ಞೋಪವೀತವು ದೇಹದಲ್ಲಿ ಹೊಳೆಯುತ್ತಿರಲು; ಕಂಠದಲ್ಲಿ ಅನೇಕ ಹಾರಗಳನ್ನೂ, ಕರಗಳಲ್ಲಿ ಕಂಕಣವನ್ನೂ, ಭುಜಗಳಲ್ಲಿ ಭುಜಕೀರ್ತಿಗಳನ್ನೂ, ಬೆರಳುಗಳಲ್ಲಿ ಉಂಗುರಗಳನ್ನೂ ಧರಿಸಿಕೊಂಡನು. ಸುಗಂಧ ದ್ರವ್ಯವನ್ನು ಮೈಗೆ ಹಚ್ಚಿಕೊಂಡನು. ದಿವ್ಯವಾದ ದೇಹಕಾಂತಿಯಿಂದ ಯುಕ್ತನಾಗಿ, ತನ್ನ ಕೂದಲುಗಳನ್ನು ಕೂಡಿಸಿ ಬಿಗಿದು ಕಟ್ಟಿ, ಶಿರಸ್ಸಿನಲ್ಲಿ ರಕ್ತವರ್ಣದ ರುಮಾಲನನ್ನು ಸುತ್ತಿಕೊಂಡನು; ಉದ್ದವಾದ ಪುಷ್ಪಗಳ ಹಾರ ವನ್ನು ಧರಿಸಿದನು. ಕಾಲುಗಳಲ್ಲಿ ಪಾದುಕೆಗಳನ್ನು ಮೆಟ್ಟಿ, ಧನುರ್ಬಾಣ ಗಳನ್ನು ಧಾರಣ ಮಾಡಿದನು. ಹೀಗೆ ಮನೋಹರವಾದ ರೂಪವುಳ್ಳವನಾಗಿ, ಆ ಉಚ್ಚೈಃಶ್ರವವೆಂಬ ಕುದುರೆಯ ಮೇಲೆ ಕುಳಿತುಕೊಂಡನು. ಆ ಕುದು ರೆಯು ನೀಲವರ್ಣದ ದೇಹಕಾಂತಿಯಿಂದಲೂ, ಶುಭ್ರವಾದ ನಾಲ್ಕು ಕಾಲುಗ ಳಿಂದಲೂ ಒಪ್ಪುತ್ತಿರುವದು. ಹದಿನೈದು ಮೊಳ ಎತ್ತರವಾಗಿಯೂ, ದೇವಮಣಿ ಮೊದಲಾದ ಉತ್ತಮವಾದ ಲಕ್ಷಣಗಳಿಂದ ಯುಕ್ತವಾಗಿಯೂ ಇರುವದು; ಆ ಕುದುರೆಯು ಅನೇಕ ರತ್ನಾಭರಣಗಳಿಂದ ಭೂಷಿತವಾಗಿರುವದು; ಅಂಥ ಶ್ರೇಷ್ಠ ವಾದ ಕುದುರೆಯ ಮೇಲೆ ಹತ್ತಿಕೊಂಡು ಶ್ರೀನಿವಾಸನು ಆ ಶೇಷಾಚಲವನ್ನು ಇಳಿದು, ಕೆಳಗಿರುವ ಅರಣ್ಯವನ್ನು ಹೊಕ್ಕು, ಸಿಂಹ, ಶರಭ, ಶಾರ್ದೂಲ, ಹರಿಣ, ಜಂಬೂಕ, ವನಮಹಿಷ ಮೊದಲಾದ ವನ್ಯ ಪ್ರಾಣಿಗಳನ್ನು ಸಂಹಾರ ಮಾಡಿ, ಮುಂದಕ್ಕೆ ಹೋಗುತ್ತಿರಲು, ಅಲ್ಲಿ ಒಂದು ದೊಡ್ಡ ಮದಗಜವನ್ನು ಕಂಡು ಅದರ ಬೆನ್ನು ಹತ್ತಿದನು. ಆ ಗಜವು ಶ್ರೀನಿವಾಸನ ಭಯದಿಂದ ಆ ವನ ದಲ್ಲಿ ದೂರ ಓಡಿತು; ಆದರೂ ಅವನು ತನ್ನ ಕುದುರೆಯನ್ನು ಓಡಿಸುತ್ತ ಅದರ

ಬೆನ್ನು ಹತ್ತಿ ಹೋಗುತ್ತಿದ್ದನು. ಆ ಗಜವು ಒಂದೂವರೆ ಗಾವುದ ಪರಿಯಂತರ ವಾಗಿ ಹೋಗಿ, ಆಮೇಲೆ ಮುಂದೆ ಹೋಗುವದಕ್ಕೆ ಶಕ್ತಿ ಸಾಲದೆ, ಮದವಿಳಿದು, ಇನ್ನುಮೇಲೆ ಶ್ರೀಹರಿಗೆ ಶರಣು ಹೋಗಬೇಕೆಂದೆಣಿಸಿ, ಸಾಷ್ಟಾಂಗ ನಮಸ್ಕಾರ ವನ್ನು ಮಾಡಿ, ತನ್ನ ಸೊಂಡೆಯನ್ನೆತ್ತಿ "ಶರಣಾಗತನಾಗಿದ್ದೇನೆ" ಎಂದು ದೊಡ್ಡ ಧ್ವನಿಯಿಂದ ಒದರಲಿಕ್ಕೆ ಹತ್ತಿತು. ಅದೇ ಸಮಯದಲ್ಲಿ ಅಲ್ಲಿಗೆ ಕೆಲವು ಕನ್ನಿಕೆಯರು ಬಂದಿದ್ದರು, ಎಂದು ಶತಾನಂದರು ಹೇಳಿದರು. ಆಗ ಜನಕರಾಜನು ಮಧ್ಯದಲ್ಲಿ— "ಗುರುಗಳೇ, ಆ ಕನ್ನಿಕೆಯರು ಯಾರು? ಆ ಸ್ಥಳಕ್ಕೆ ಏನು ಕಾರಣ ಬಂದಿದ್ದರು?" ಎಂದು ಕೇಳಲಾಗಿ ಶತಾನಂದರು ಹೇಳತೊಡಗಿದರು;—

ಕೇಳೈ ಜನಕರಾಜನೇ, ಪೂರ್ವದಲ್ಲಿ ದ್ವಾಪರಯುಗದ ಅಂತ್ಯಭಾಗದಲ್ಲಿ ಪಾಂಡವ-ಕೌರವರ ಭಾರತ ಯುದ್ಧವು ಮುಗಿದನಂತರ ಇಪ್ಪತ್ತೆಂಟನೆಯ ಕಲಿ ಯುಗದಲ್ಲಿ ವಿಕ್ರಮಾರ್ಕ ಮೊದಲಾದ ರಾಜರು ಆಳಿದ ಬಳಿಕ, ಸಹಸ್ರ ವರ್ಷ ಗಳಾದನಂತರ, ಚಂದ್ರವಂಶದಲ್ಲಿ ಸುವೀರನೆಂಬ ರಾಜನು ಆಳಿಹೋದನು. ಆ ಮೇಲೆ ಸುವೀರನ ಸುಧರ್ಮನೆಂಬ ಮಗನು ಆಳಿದನು; ಆ ಸುಧರ್ಮ ರಾಜನಿಗೆ ಆಕಾಶನೆಂತಲೂ, ತೋಂಡಮಾನನೆಂತಲೂ ಇಬ್ಬರು ಪುತ್ರರು ಉತ್ಪನ್ನರಾಗಿ ಧರ್ಮಿಷ್ಠರಾಗಿಯೂ, ಹರಿಭಕ್ತಿಪರಾಯಣರಾಗಿಯೂ ಇದ್ದರು, ಹಿರಿಯನಾದ ಆಕಾಶರಾಜನು ತೋಂಡದೇಶಕ್ಕೆ ಅಧಿಪತಿಯಾಗಿ ರಾಜ್ಯವನ್ನು ಆಳುತ್ತಿದ್ದನು. ಆ ರಾಜನು ರಾಜ್ಯವನ್ನಾಳುವ ಕಾಲದಲ್ಲಿ ಪ್ರಜೆಗಳೆಲ್ಲರು ತಮ್ಮ ತಮ್ಮ ಧರ್ಮ ಗಳಲ್ಲಿ ಆಸಕ್ತರಾಗಿದ್ದರು. ಗೋಗಳು ಬಹಳವಾಗಿ ಕ್ಷೀರವನ್ನು ಕೊಡುತ್ತಿದ್ದವು. ಸ್ತ್ರೀಯರು ತಮ್ಮ ತಮ್ಮ ಪತಿಗಳಲ್ಲಿ ಭಕ್ತಿಯುಳ್ಳವರಾಗಿದ್ದರು. ಹೀಗೆ ಆಕಾಶ ರಾಜನು ನಿರಾತಂಕವಾಗಿ ಧರ್ಮದಿಂದ ರಾಜ್ಯವನ್ನಾಳುತ್ತಿದ್ದನು.

ಒಂದಾನೊಂದು ದಿವಸ ಆ ರಾಜನು ತನಗೆ ಪುತ್ರರಾಗಲಿಲ್ಲೆಂಬ ವ್ಯಸನ ದಿಂದ ತನ್ನ ಗುರುಗಳಿಗೆ— "ಸ್ವಾಮಿ, ಸಕಲೈಶ್ವರ್ಯಯುಕ್ತವಾದ ರಾಜ್ಯ ಸುಖವನ್ನು ನಾನು ಅನುಭವಿಸಿದೆನು; ಮತ್ತು ತೀರ್ಥಯಾತ್ರೆಗಳಿಗೆ ಹೋಗಿ ಅನೇಕ ವಿಧವಾದ ದಾನಗಳನ್ನು ಮಾಡಿ ಬಂದೆನು; ಆದರೆ, ಪಿತೃಗಳಿಗೆ ಮುಕ್ತಿ ಯನ್ನು ಕೊಡುವ ಪುತ್ರಸೌಖ್ಯವನ್ನು ಮಾತ್ರ ನಾನು ಅನುಭವಿಸಲಿಲ್ಲ; ಆದ್ದ

ರಿಂದ ನಾನು ಪೂರ್ವಜನ್ಮದಲ್ಲಿ ಏನು ದುಷ್ಕರ್ಮವನ್ನು ಮಾಡಿರುವೆನೋ? ಯಾರ ಮಕ್ಕಳನ್ನು ಕೊಂದಿರುವೆನೋ ! ಆ ಪಾಪದಿಂದ ನನಗೆ ಮಕ್ಕಳಾಗ ಲಿಲ್ಲವೆಂದು ತಿಳಿಯುತ್ತೇನೆ. ಗುರುಗಳೇ, ನಾನು ಮಹಾ ಪಾಪಿಯಾದ್ದರಿಂದಲೇ ಪುತ್ರನ ಮುಖವನ್ನು ನೋಡಲಿಲ್ಲ; ಮತ್ತು ಪುತ್ರನು ಅಳುವ ಧ್ವನಿಯನ್ನು ಕೇಳಲಿಲ್ಲ. "ಅಪುತ್ರಸ್ಯ ಗತಿರ್ನಾಸ್ತಿ" ಎಂಬಂತೆ ಪುತ್ರರಹಿತನಾದ ನನಗೂ ನನ್ನ ಪಿತೃಗಳಿಗೂ ದುರ್ಗತಿಯು ಪ್ರಾಪ್ತವಾಗುವದಲ್ಲ! ಹಾಯ್! ಹಾಯ್!! ದೈವಹೀನನಾದ ನಾನು ಸುವರ್ಣ ಪಾತ್ರೆಯಲ್ಲಿ ಪುತ್ರನಕೂಡ ಭೋಜನವನ್ನು ಮಾಡಲಿಲ್ಲ; ಮಗನನ್ನು ತೊಡೆಯಮೇಲೆ ಕೂಡ್ರಿಸಿಕೊಂಡು ಆಭರಣಗಳಿಂದ ಅಲಂಕರಿಸಿ, ಅವನ ಲಾಲನೆ ಪಾಲನೆಗಳನ್ನು ಮಾಡಲಿಲ್ಲ; ಪಾಪಿಯಾದ ನಾನು ಪುತ್ರನಿಗೋಸ್ಕರ ಅನೇಕವಾದ ಆಭರಣಗಳನ್ನೂ, ಕವಚಗಳನ್ನೂ ಮಾಡಿಸಿ, ಅವನ್ನು ನನ್ನ ಕೈಯಿಂದ ಇಡಿಸಲಿಲ್ಲ — ತೊಡಿಸಲಿಲ್ಲ; ಹಟಮಾಡುತ್ತಿರುವ ಪುತ್ರನನ್ನು ಶಾಂತಪಡಿಸುವವಕ್ಕಾಗಿ ನನ್ನ ಹೆಂಡತಿಗೆ ಸಿಟ್ಟು ಮಾಡಿ "ಕ್ಷೀರ ವನ್ನು ಕುಡಿಸು; ಇಲ್ಲದಿದ್ದರೆ ಅವನ ಕೈಯಲ್ಲಿ ಗಂಟೆಯನ್ನಾಗಲಿ, ಗೊಂಬೆಯ ನ್ನಾಗಲಿ, ಚಂಡನ್ನಾಗಲಿ ಕೊಡು; ಅಂದರೆ ಸಮಾಧಾನವಾಗುವನು" ಎಂದು ಹೇಳುವ ದೈವವು ನನಗೆ ಇಲ್ಲ, ಬಾಲ್ಯಾವಸ್ಥೆಯಲ್ಲಿ ಪುತ್ರನಿಗೆ ಜಾತಕರ್ಮ, ನಾಮಕರಣ ಮೊದಲಾದ ಸಂಸ್ಕಾರಗಳನ್ನು ಮಾಡಲಿಲ್ಲ; ಬಾಲಕನಿಗೆ ಕವಚ ವನ್ನೂ, ರತ್ನಗಳಿಂದ ಯುಕ್ತವಾದ ಕೇಶ-ಭೂಷಣಗಳನ್ನೂ ಮಾಡಿಸಿ, ನನ್ನ ಕೈಯಿಂದಲೇ ಅವನಿಗೆ ಅಲಂಕಾರಗಳನ್ನಿಡಲಿಲ್ಲ. ಶೋಭಿಸುತ್ತಿರುವ ಪುತ್ರನನ್ನು ಕಂಡು ನಾನು ಸಂತೋಷಪಡಲಿಲ್ಲ, ಪುತ್ರನ ಮುಂಜಿ, ಲಗ್ನ ಮೊದಲಾದ ಉತ್ಸವಗಳನ್ನು ಕಾಣಲಿಲ್ಲ; ರಾಜ್ಯಪದಕ್ಕೆ ಯೋಗ್ಯನಾದ ಪುತ್ರನನ್ನು ಪಟ್ಟಕ್ಕೆ ಕೂಡ್ರಿಸಿ ಸ್ತ್ರೀಯಿಂದ ಸಹಿತನಾಗಿ ತಪೋವನಕ್ಕೆ ಹೋಗಲಿಲ್ಲ. ಹಾಯ್! ಹಾಯ್!! ಪುತ್ರಹೀನನಾದ ನನ್ನನ್ನು ಕಂಡು ಯಮದೂತರು—"ರಾಜನೇ, ಯಮಲೋಕಕ್ಕೆ ಬೇಗನೆ ಹೊರಡು," ಎಂದು ಯಮಪಾಶದಿಂದ ನನ್ನನ್ನು ಅಂತ್ಯಕಾಲದಲ್ಲಿ ಎಳೆಯುವರಲ್ಲ! ಯಮನು ನನ್ನನ್ನು ಕಂಡು,—"ಎಲೈ ದುರಾ ಚಾರಿಯೇ, ನೀನು ಅಪುತ್ರನು, ಪಾಪಿಷ್ಠನು" ಎಂದು ನನ್ನನ್ನು ಕಠಿಣವಾದ ಮಾತುಗಳಿಂದ ಹಿಂಸೆಪಡಿಸುವನು, ಅದನ್ನು ನಾನೆಂತು ಸಹಿಸಲಿ? ಹೀಗೆ ಸುಧರ್ಮವಂಶವೆಂಬ ದೀಪವನ್ನು ನಷ್ಟಮಾಡುವವನಾಗಿ, ನರಕಕ್ಕೆ ಯೋಗ್ಯ

ನಾದ ನಾನು ಈ ಲೋಕದಲ್ಲಿ ಹುಟ್ಟಿದ್ದು ವ್ಯರ್ಥವೇ ಸರಿ ಪತಿಹೀನಳಾದ ಸ್ತ್ರೀಯನ್ನು ಕಂಡರೆ ಜನರು ಸಭೆಯಲ್ಲಿ ಹ್ಯಾಗೆ ದೂಷಿಸುವರೋ, ಜಲರಹಿತ ವಾದ ಬಾವಿಯು ಹ್ಯಾಗೆ ದೂಷಣಾಸ್ಪದವೋ ಹಾಗೆ ಪುತ್ರರಹಿತನಾದ ನನ್ನನ್ನು ಜನರು ದೂಷಿಸುವರು. ಗುರುಗಳೇ, ಹ್ಯಾಗೆ ಮಾಡಲಿ ? ನನ್ನ ಗತಿಯೇನು ? ಯಾವ ದೇವರಿಗೆ ಶರಣು ಹೋದರೆ ಆತನು ನನಗೆ ಪುತ್ರನನ್ನು ಕೊಟ್ಟಾನು ? ಅನಾಥರಾದ ನಮ್ಮಂಥವರಿಗೆ ಪುತ್ರರಾಗುವದು ಪರಮ ದುರ್ಲಭವು; ಪೂರ್ವಾರ್ಜಿತ ಪುಣ್ಯವಿದ್ದರೆ ಮಕ್ಕಳಾಗುವವೇ ಹೊರತು, ಸುಮ್ಮನೆ ದುಃಖಪಟ್ಟರೆ ಆಗುವದಿಲ್ಲೆಂಬದು ನನಗೆ ತಿಳಿಯುತ್ತದೆ; ಆದರೂ ಶ್ರೀಹರಿಯ ಮಾಯೆಯಿಂದ ಮೋಹಿತನಾಗಿ ಮಕ್ಕಳ ವಿಷಯದಲ್ಲಿ ನಾನು ಪರಮ ದುಃಖವನ್ನು ಹೊಂದಿರುವೆನು. ಗುರುಗಳೇ, ಪಾಪಿಷ್ಠರಾದ ನಮಗೆ ಧರ್ಮಸಂತಾನವೆನಿಸುವ ಒಬ್ಬ ಕನ್ನಿಕೆಯಾದರೂ ಉತ್ಪನ್ನಳಾಗಲಿಲ್ಲವಲ್ಲ ! ಹ್ಯಾಗೆ ಮಾಡಲಿ ? ಹೇ, ವರಪ್ರದನಾದ ಅಚ್ಯುತನೇ, ರಂಗನಾಥನೇ, ಜಗತ್ಪತಿಯಾದ ಸುಬ್ರಹ್ಮಣ್ಯನೇ, ಕರುಣಾನಿಧಿಯಾದ ನಾರಾಯಣನೇ, ವೇಂಕಟಾಚಲಕ್ಕೆ ಸ್ವಾಮಿಯಾದ ವರಾಹಮೂರ್ತಿಯೇ, ರಾಮಚಂದ್ರನೇ, ಶ್ರೀಕೃಷ್ಣನೇ, ಶ್ರೀನಿವಾಸನೇ, ನಿಮಗೆ ನನ್ನ ನಮಸ್ಕಾರವು ಗುರುಗಳೇ, ಇನ್ನು ಮುಂದೆ ಕರ್ಮಫಲವನ್ನು ಅನುಭೋಗಿಸುವ ನಮಗೆ ಗತಿಯೇನು ? ನಾವು ಯಾವ ಕಠಿಣವಾದ ನರಕವನ್ನು ಅನುಭೋಗಿಸುವೆವೋ, ಯಾವ ಲೋಕವನ್ನು ಹೊಂದುವೆವೋ ತಿಳಿಯೆನು. ಮಹಾಪ್ರಾಜ್ಞರೇ, ಇನ್ನು ಮುಂದೆಯಾದರೂ ನಮಗೆ ಪುತ್ರರಾಗುವ ಉಪಾಯವನ್ನು ಹೇಳಿರಿ" ಎಂದು ಕೇಳಿದನು.

ಅದಕ್ಕೆ ಗುರುವು—" ರಾಜನೇ, ನೀನು ಮಕ್ಕಳಿಲ್ಲೆಂದು ಈ ಪ್ರಕಾರ ದುಃಖವನ್ನು ಮಾಡುವದುಂಟೇ ? ಪುತ್ರಕಾಮೇಷ್ಟಿಯನ್ನು ಮಾಡು; ಅಂದರೆ ಆ ಯಜ್ಞದ ಫಲದಿಂದ ನಿನಗೆ ಪುತ್ರನಾಗುವನು" ಎಂದು ಆ ಯಜ್ಞಮಾಡುವ ವಿಧಾನವನ್ನು ಹೇಳಿದನು. ರಾಜನು ತನ್ನ ಗುರುಗಳ ಮಾತನ್ನು ಕೇಳಿ ಸಂತೋಷಪಟ್ಟು, ಯಜ್ಞವನ್ನು ಮಾಡುವದಕ್ಕಾಗಿ ಸ್ಥಳವನ್ನು ಗೊತ್ತು ಮಾಡಿ, (ಬ್ರಾಹ್ಮಣರು ವೇದಘೋಷಮಾಡುತ್ತಿರಲು ) ( ಸುವರ್ಣಮಯವಾದ ರಂಟೆಗಳಿಂದ ) ಭೂಮಿಯನ್ನು ಶೋಧನ ಮಾಡಹತ್ತಿದನು. ಆಗ ಆ ಭೂಮಿಯೊಳಗೆ ಸಹಸ್ರಪತ್ರಗಳುಳ್ಳ ಒಂದು ವಿಸ್ತೀರ್ಣವಾದ ಕಮಲವನ್ನು ಕಂಡನು,—" ಇದೇನಾಶ್ಚ

ರ್ಯವು ! ಇಂಥ ಕಮಲವನ್ನು ಈ ಭೂಮಿಯಲ್ಲಿ ನಾನು ಈವೊತ್ತೇ ನೋಡಿ ದೆನು;" ಎಂದು ರಾಜನು ಅವರ ಸಮೀಪಕ್ಕೆ ಹೋಗಿ, ಅದರಲ್ಲಿ ಮಂಗಳಕರ ಳಾದ ಲಕ್ಷ್ಮೀದೇವಿಯ ಆಕಾರವುಳ್ಳ, ಕಮಲಪತ್ರದಂತೆ ನೇತ್ರಗಳುಳ್ಳ ಒಂದು ಹೆಣ್ಣುಕೂಸನ್ನು ಕಂಡನು. ಅದರಿಂದ ಸಂತೋಷಬಟ್ಟು ತನ್ನೊಳಗೆ—"ಅಹಾ! ನಾನು ಮಕ್ಕಳಿಲ್ಲವೆಂದು ದುಃಖಪಡುವದನ್ನು ನೋಡಿ ಶ್ರೀಹರಿಯು ನನಗೆ ಈ ಪುತ್ರಿಯನ್ನು ಕೊಟ್ಟನು; " ಎಂದು ಆ ಕೂಸನ್ನು ಜಾಗ್ರತೆಯಾಗಿ ಎತ್ತಿ ಕೊಂಡು—"ಶ್ರೀಹರಿಯ ಮಾಯೆಯು ಬಹಳ ಹೆಚ್ಚಿನದು; ಯಾಕಂದರೆ ಈ ಕೂಸನ್ನು ಕಂಡ ಕೂಡಲೆ, ಮಕ್ಕಳನ್ನು ಕಾಣದೆ ಇರುವ ನಾನು ಇದನ್ನು ತೆಗೆದುಕೊಂಡೆನು; ಆದರೆ ಈ ಕನ್ನಿಕೆಯನ್ನು ನಾನೇ ತೆಗೆದುಕೊಳ್ಳತಕ್ಕದ್ದೋ ಅಥವಾ ಇದನ್ನು ಅನ್ಯರಿಗೆ ಕೊಡತಕ್ಕದ್ದೋ? ಎಂಬದು ನನಗೆ ತಿಳಿಯಲಿಲ್ಲ; ರಾಜನಾದ ನಾನು ದೇವಾಜ್ಞೆಯಿಲ್ಲದೆ, ಇದನ್ನು ತೆಗೆದುಕೊಳ್ಳುವ ಬಗೆ ಹ್ಯಾಗೆ? " ಎಂದು ಆಲೋಚನೆಯನ್ನು ಮಾಡುತ್ತಿದ್ದನು. ಆ ಸಮಯದಲ್ಲಿ—"ಆಕಾಶರಾಜನೇ ಈ ಕನ್ನಿಕೆಯು ನಿನಗೆ ಪುಣ್ಯಪ್ರದಳಾಗಿಯೂ, ಬಹು ಕೀರ್ತಿಯನ್ನು ಕೊಡುವವ ಳಾಗಿಯೂ ಇರುವಳು, ಆದ್ದರಿಂದ ಈ ಕೂಸನ್ನು ನೀನೇ ಸಂರಕ್ಷಿಸು " ಎಂದು ಅಂತರಿಕ್ಷದಲ್ಲಿ ಉತ್ಪನ್ನವಾದ ವಾಣಿಯು ನುಡಿಯಿತು. ಅದನ್ನು ಕೇಳಿ ರಾಜನು ಅತ್ಯಂತ ಹರ್ಷದಿಂದ ಆ ಕನ್ನಿಕೆಯನ್ನು ಎತ್ತಿಕೊಂಡು ಶೀಘ್ರವಾಗಿ ಮಂದಿರಕ್ಕೆ ಬಂದು ತನ್ನ ಸ್ತ್ರೀಯ ಕೈಯಲ್ಲಿ ಕೊಟ್ಟು,—"ಪ್ರಿಯಳೇ ಮಕ್ಕಳಿಲ್ಲದೆ ದುಃಖಪಡುತ್ತಿರುವ ನಮ್ಮಮೇಲೆ ಈವೊತ್ತಿನ ದಿವಸ ಅಂತಃಕರಣವನ್ನು ಮಾಡಿ, ಶ್ರೀನಿವಾಸನು ನಮಗೆ ಈ ಕನ್ನಿಕೆಯನ್ನು ಕೊಟ್ಟಿರುವನು; ಆದ್ದರಿಂದ ಇದನ್ನು ನೀನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಪುತ್ರಿಯಂತೆ ಸಂರಕ್ಷಿಸು, " ಎಂದು ಹೇಳಿ ಅನೇಕ ದಾನಧರ್ಮಗಳನ್ನು ಮಾಡಿದನು. ರಾಜಪತ್ನಿಯಾದ ಧರಣೀ ದೇವಿಯು— "ಈವೊತ್ತಿನ ದಿವಸ ನನ್ನ ಬಂಜೆತನವು ಹೋಯಿತು, ದೇವರೇ ನಮಗೆ ಈ ಕನ್ನಿಕೆಯನ್ನು ಕೊಟ್ಟನು " ಎಂದು ಸಂತೋಷಪಟ್ಟು, ಆ ಕೂಸನ್ನು ಪ್ರೀತಿ ಯಿಂದ ರಕ್ಷಿಸಹತ್ತಿದಳು. ಹೀಗೆ ರಾಜನೂ ರಾಜಪತ್ನಿಯೂ ಪರಮಹರ್ಷ ಯುಕ್ತರಾಗಿದ್ದರು.

ಇತ್ತ ಶ್ರೀಹರಿಯ ಅನುಗ್ರಹದಿಂದಲೂ, ಕನ್ನಿಕೆಯಾಗಿ ಬಂದಿರುವ ಲಕ್ಷ್ಮೀದೇವಿಯ ಆಗಮನದ ಪುಣ್ಯದಿಂದಲೂ ಆಕಾಶರಾಜನ ಪತ್ನಿಯು ಗರ್ಭಿಣಿ

ಯಾದಳು. ಆ ರಾಜನು ಗರ್ಭಿಣಿಯಾದ ತನ್ನ ಸ್ತ್ರೀಯನ್ನು ಕಂಡು, ಹರುಷಿತ ನಾಗಿ ಐದನೇ ತಿಂಗಳಲ್ಲಿ ಬ್ರಾಹ್ಮಣರ ಕೈಯಿಂದ ಯಜುರ್ವೇದಯುಕ್ತವಾದ ಮಂತ್ರಗಳಿಂದ ಸೀಮಂತಕಾರ್ಯವನ್ನು ಮಾಡಿಸಿದನು. ಮುಂದೆ ಆ ರಾಜ ಪತ್ನಿಯು ಒಂಬತ್ತು ತಿಂಗಳು ತುಂಬಿ ಹತ್ತನೇ ತಿಂಗಳಲ್ಲಿ ಸೂರ್ಯನು ಕನ್ಯಾರಾಶಿಯಲ್ಲಿರಲಾಗಿ, ರೋಹಿಣೀ ನಕ್ಷತ್ರಯುಕ್ತವಾದ ಶುಕ್ಲ ಪಕ್ಷದ ದಶಮೀ ಗುರುವಾರ ಸಾಯಂಕಾಲದಲ್ಲಿ ಶ್ರೇಷ್ಠನಾದ ಪುತ್ರನನ್ನು ಹಡೆದಳು. ಆಗ ರಾಜನು ಪುತ್ರನ ಉತ್ಪತ್ತಿಕಾಲ, ನಕ್ಷತ್ರ, ಗ್ರಹಬಲ ಮುಂತಾದವುಗಳನ್ನು ಹೇಳುವ ಬ್ರಾಹ್ಮಣರಿಗೆ ಸಮಸ್ತವಾದ ವಸ್ತುಗಳ ದಾನವನ್ನು ಮಾಡಿ, ಸಹಸ್ರ ಕೋಟಿ ಗೋಗಳನ್ನೂ, ಹತುಸಾವಿರ ಕುದುರೆಗಳನ್ನೂ, ನವವಿಧಧಾನ್ಯಗಳನ್ನೂ ದಾನಕೊಟ್ಟನು. ಬಳಿಕ ಆಕಾಶರಾಜನು ಸ್ನಾನಮಾಡಿ ಪುಣ್ಯಾಹವಾಚನೆಯನ್ನು ಮಾಡಿಸಿಕೊಂಡು, ಜಾತಕರ್ಮವನ್ನು ಮಾಡಿ, ಹನ್ನೆರಡನೆಯ ದಿವಸ, ಬ್ರಾಹ್ಮಣ ರನ್ನು ಭೋಜನ, ತಾಂಬೂಲ, ದಕ್ಷಿಣೆಗಳಿಂದ ಸಂತೋಷಪಡಿಸಿ, ತನ್ನ ಪುತ್ರನಿಗೆ "ವಸುದಾನ"ನೆಂದು ನಾಮವನ್ನು ಇಟ್ಟನು.

ಜನಕರಾಜನು ಕೇಳುತ್ತಾನೆ,—. ಗುರುಗಳೇ, ಆಕಾಶರಾಜನು ಲಕ್ಷ್ಮಿಯು ಅವತಾರವಾದ ಆ ಕನ್ನಿಕೆಯ ಹೆಸರನ್ನು ಏನು ಇಟ್ಟನೆಂಬದನ್ನು ನೀವು ಹೇಳಲಿಲ್ಲ; ಅದನ್ನು ಹೇಳಬೇಕು" ಎನಲು ಶತಾನಂದರು— " ರಾಜನೇ, ಆ ಕನ್ನಿಕೆಯು ಕಮಲಕ್ಕೆ ಸಮಾನವಾದ ಉದರವುಳ್ಳವಳಾಗಿಯೂ, ಕಮಲಮುಖಿ ಯಾಗಿಯೂ, ಪದ್ಮದಲ್ಲಿ ಉತ್ಪನ್ನಳಾದವಳಾಗಿಯೂ, ಲಕ್ಷ್ಮೀದೇವಿಯು ಅವತಾರ ವಾಗಿಯೂ ಇರುವಕಾರಣ ಅವಳಿಗೆ ಆಕಾಶರಾಜನು ಪದ್ಮಾವತಿಯೆಂಬ ಹೆಸರನ್ನಿಟ್ಟನು. "

ಇತ್ತ ಆಕಾಶರಾಜನು ಕಲಂಕರಹಿತರಾದ ತನ್ನ ಮಕ್ಕಳು ದಿನದಿನಕ್ಕೆ ಅಭಿವೃದ್ಧಿಹೊಂದುವದನ್ನು ನೋಡಿ ಬಹಳ ಸಂತೋಷವನ್ನು ಹೊಂದಿದನು. ಆಗ ಅವನು ತನ್ನ ಮನಸ್ಸಿನಲ್ಲಿ— " ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯದಿಂದ ನಾನು ಮಕ್ಕಳನ್ನು ನೋಡಿದೆನು" ಎಂದು ಬಹು ಸಂತೋಷಪಟ್ಟನು.

ಈ ಪ್ರಕಾರ ರಾಜಪುತ್ರಿಯೂ, ರಾಜಪುತ್ರನೂ ದಿನ ದಿನಕ್ಕೆ ಬೆಳೆದು ದೊಡ್ಡವರಾಗಲು, ಅವರಲ್ಲಿ ಪದ್ಮಾವತಿಯು ಯೌವನಾವಸ್ಥೆಯನ್ನು ಹೊಂದಿ

ದಳು. ಆಗ ಆಕಾಶರಾಜನು ಲಗ್ನಕ್ಕೆ ಯೋಗ್ಯಳಾದ ತನ್ನ ಮಗಳನ್ನು ಕಂಡು, ಮನಸ್ಸಿನಲ್ಲಿ— "ಈ ನನ್ನ ಪುತ್ರಿಯನ್ನು ಯಾರಿಗೆ ಕೊಡಬೇಕು" ಎಂದು ಆಲೋಚಿಸಿ, ತನ್ನ ಮಗಳಿಗೆ ಯೋಗ್ಯನಾದ ಪತಿಯನ್ನು ಶೋಧಮಾಡಹತ್ತಿದನು. ಆಕಾಶರಾಜನು ಎಷ್ಟು ಹುಡುಕಿದರೂ ಯೋಗ್ಯ ವರನು ಸಿಗದೆ ಇದ್ದದರಿಂದ ಬಹಳ ಚಿಂತಾಯುಕ್ತನಾದನು; ಮತ್ತು ದೊಡ್ಡವನಾದ ತನ್ನ ಪುತ್ರನಿಗೆ ಉಪನಯನವನ್ನು ಮಾಡಿದನು.

ಹೀಗಿರಲಾಗಿ ಒಂದಾನೊಂದು ದಿವಸ ಯೌವನಸ್ಥಳಾದ ಪದ್ಮಾವತಿಯು ಅನೇಕ ಅಲಂಕಾರಗಳಿಂದ ಶೃಂಗಾರವಾಗಿ, ತನ್ನ ಸಖಿಯರನ್ನು ಕೂಡಿಕೊಂಡು, ಮನೋಹರವಾದ ಪುಷ್ಪಗಳನ್ನು ತರುವದಕ್ಕಾಗಿ ವನಕ್ಕೆ ಬಂದಿದ್ದಳು. ಕೇಳೈ ಜನಕರಾಜನೇ, ಇದೇ ಆ ಕನ್ನಿಕೆಯ ವೃತ್ತಾಂತವು. ನಾನು ಹಿಂದೆ ಹೇಳಿದಂತೆ ಆಗ ಆ ಕನ್ನಿಕೆಯೂ ಆಕೆಯ ಸಖಿಯರೂ ವನದಲ್ಲಿ ಹೂಗಳನ್ನು ಎತ್ತುತ್ತಿದ್ದರು. ಆಗ ವಸಂತಕಾಲದ ಉಗ್ರವಾದ ಬಿಸಿಲಿನಿಂದ ಘಾಸಿಯಾಗಿ, ಆ ಹೆಂಗಳೆಯರು ಒಂದು ವೃಕ್ಷದ ನೆರಳಿನಲ್ಲಿ ಬಂದು ಕುಳಿತಿದ್ದರು. ಆ ಸಮಯದಲ್ಲಿ ಜಟಾಧಾರಿಯಾಗಿಯೂ, ಭಸ್ಮದಿಂದ ಲಿಪ್ತವಾದ ದೇಹವುಳ್ಳವನಾಗಿಯೂ, ಕರ್ಪೂರಕ್ಕೆ ಸಮಾನವಾದ ದೇಹಕಾಂತಿಯಿಂದ ಯುಕ್ತನಾಗಿಯೂ, ವೃದ್ಧನಾಗಿಯೂ ಇರುವ ನಾರದಋುಷಿಯು ಆ ಕನ್ನಿಕೆಯರಿರುವ ಸ್ಥಳಕ್ಕೆ ಬಂದನು. ಆಗ ಪದ್ಮಾವತಿಯು— "ಸಖಿಯರೇ, ಈ ನಿರ್ಜನವಾದ ವನದಲ್ಲಿ ಬಂದಿರುವ ಈ ಭವ್ಯನಾದ ಮುನಿಯು ಯಾರು ? ಎಂಬದನ್ನು ವಿಚಾರಮಾಡಿರಿ," ಎಂದು ಹೇಳಲು, ಅದನ್ನು ಕೇಳಿ, ಕನ್ನಿಕೆಯರು— "ಮಹಾಪ್ರಾಜ್ಞನಾದ ಬ್ರಾಹ್ಮಣನೇ, ನೀನು ಯಾರು ? ಇಲ್ಲಿಗೆ ಏನು ಕಾರಣ ಬಂದಿರುವೆ ?" ಎಂದು ಕೇಳಲು, ನಾರದನು— "ಕನ್ನಿಕೆಯರೇ, ಈ ಪದ್ಮಾವತಿಯ ಕುಲಗುರುವು ನಾನು," ಎಂದು ಹೇಳಿ, ಪದ್ಮಾವತಿಗೆ— "ಪದ್ಮಾವತಿಯೇ, ನಿನ್ನ ಹಸ್ತವನ್ನು ತೋರಿಸು; ಅಂದರೆ ನಿನ್ನ ಲಕ್ಷಣಗಳನ್ನು ಹೇಳುವೆನು" ಎಂದು ಹೇಳಿದನು. ಅದಕ್ಕೆ ಪದ್ಮಾವತಿಯು ಎರಡನೆಯವರ ಕೈಯಲ್ಲಿ ನನ್ನ ಹಸ್ತವನ್ನು ಹ್ಯಾಗೆ ಕೊಡಲಿ ? ಎಂಬ ಸಂಶಯದಿಂದ— "ಬ್ರಾಹ್ಮಣನೇ, ನನ್ನ ಸಾಮುದ್ರಿಕಲಕ್ಷಣಗಳನ್ನು ಹೇಳುವೆಯೇನು ?" ಎಂದು ಬೇಸರದಿಂದ ನುಡಿಯಲು, ಅದಕ್ಕೆ ನಾರದನು— "ಪದ್ಮಾವತಿಯೇ, ನನ್ನ

ಕೈಯಲ್ಲಿ ಹಸ್ತವನ್ನು ಕೊಡುವದಕ್ಕೆ ಸಂಶಯಪಡುವೆ; ಆದರೆ ನಾನು ನಿನಗೆ ಪಿತೃಸಮಾನನೆಂದರಿ" ಎಂದು ಹೇಳಿದನು. ಪದ್ಮಾವತಿಯು ಆಗ ಸಂಶಯವನ್ನು ಬಿಟ್ಟು ನಾರದನ ಕೈಯಲ್ಲಿ ತನ್ನ ಹಸ್ತವನ್ನು ಕೊಡಲು, ನಾರದನು ಆಕೆಯ ಹಸ್ತವನ್ನು ತನ್ನ ಕೈಯಲ್ಲಿ ತೆಗೆದುಕೊಂಡು, ನೋಡಿ, ಪರೀಕ್ಷಿಸಿ,— "ಪದ್ಮಾವತಿಯೇ ಜಗತ್ಪತಿಯಾದ ಶ್ರೀನಿವಾಸನೇ ನಿನಗೆ ಪತಿಯಾಗುವನು. ನಿನ್ನ ಹಸ್ತಗಳು ಪದ್ಮತಲದಂತೆ ಪ್ರಕಾಶಿಸುತ್ತವೆ; ಪಾದಗಳಲ್ಲಿ ಸ್ವಸ್ತಿಕಾ ಚಿಹ್ನವಿರುವದು. ನಿನ್ನ ಸುಂದರವಾದ ಮುಖವು ಚಂದ್ರನಂತೆಯೂ, ನೇತ್ರಗಳು ಕಮಲಪತ್ರಗಳಂತೆಯೂ ನಾಸಿಕವು ತಿಲಪುಷ್ಪದಂತೆಯೂ ಶೋಭಿಸುತ್ತವೆ. ನಿನ್ನ ಗಲ್ಲಗಳು ಕನ್ನಡಿಯಂತೆ ಹೊಳಪಾಗಿರುವವು. ಹುಬ್ಬುಗಳು ಧನುಸ್ಸಿಗೆ ಸಮಾನವಾಗಿರುವವು. ಹಲ್ಲುಗಳು ದಾಡಿಮಫಲದ ಬೀಜಗಳಂತಿರುವವು. ಅಧರವು ಕೆಂಪುಕಮಲದ ವರ್ಣವುಳ್ಳದ್ದಾಗಿರುವದು ಜಿಹ್ವೆಯು ಅತಿಕೋಮಲವಾಗಿರುವದು. ನಿನ್ನ ಕೇಶಗಳು ಬಹಳ ಕಪ್ಪಾಗಿಯೂ, ಮುಂಗುರುಳುಗಳಿಂದ ಯುಕ್ತವಾಗಿಯೂ ಇರುವವು. ನಿನ್ನ ಹಣೆಯು ರತ್ನಮಯವಾದ ಪೀಠದಂತೆ ಕಾಂತಿಯುಕ್ತವಾಗಿ ಹೊಳೆಯುತ್ತದೆ. ನಿನ್ನ ಕಂಠವು ಬಾಲಸೂರ್ಯನ ಕಿರಣಗಳಿಗೆ ಸಮಾನವಾದ ಕಾಂತಿಯುಳ್ಳದ್ದಾಗಿ, ತಾಂಬೂಲದ ರಸವನ್ನು ಹೊರಗೆ ತೋರಿಸುವಂಥಾದ್ದಾಗಿರುವದು. ಸ್ತನಗಳು ಪುಷ್ಟವಾಗಿಯೂ, ಉದರವು ಬಾಳೆಯ ಎಲೆಯಂತೆ ತೆಳುವಾಗಿಯೂ, ನಾಭಿಯು ಕಮಲವುಳ್ಳದ್ದಾಗಿಯೂ ಇರುತ್ತದೆ. ಇದಲ್ಲದೆ, ನಿನ್ನ ತೊಡೆಗಳು ಬಾಳೆಯ ಕಂಬಗಳಿಗೆ ಸಮಾನವಾದ ಆಕಾರವುಳ್ಳವಾಗಿವೆ. ಪದ್ಮಾವತಿಯೇ, ನೀನು ಏನು ಪುಣ್ಯಮಾಡಿದೆಯೋ ಏನೋ! ಸರ್ವಲಕ್ಷಣಗಳು ಶ್ರೇಷ್ಠವಾಗಿರುತ್ತವೆ" ಎಂದು ಹೇಳಿ ನಾರದಋಷಿಯು ಅಂತರ್ಧಾನನಾಗಿ ಮನಸ್ಸಿನಲ್ಲಿ ಲಕ್ಷ್ಮೀದೇವಿಯನ್ನು ಸ್ತೋತ್ರಮಾಡುತ್ತ ಅಲ್ಲಿಂದ ಹೊರಟು ಶ್ರೀಮನ್ನಾರಾಯಣನಿಗೆ ವಾಸಸ್ಥಾನವಾಗಿರುವ ಶೇಷಾಚಲಕ್ಕೆ ಹೋದನು.

॥ ಇತಿ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿ, ವೇಂಕಟೇಶಮಾಹಾತ್ಮ್ಯದಲ್ಲಿ ಆರನೆಯ ಅಧ್ಯಾಯವು ಮುಗಿದುದು ॥

# ೭ನೆಯ ಅಧ್ಯಾಯ



ಕೇಳೈ, ಜನಕರಾಜನೇ, ಮುಂದಿನ ವೃತ್ತಾಂತವನ್ನು ಹೇಳುವೆನು ಕೇಳು,— ನಾನು ಹಿಂದೆ ಹೇಳಿದಂತೆ ಕಿರಾತರೂಪಿಯಾದ ಶ್ರೀನಿವಾಸನಿಂದ ಓಡಿಸಲ್ಪಟ್ಟ ಮದಗಜವು ಗರ್ಜನೆಯನ್ನು ಮಾಡುತ್ತ ಪದ್ಮಾವತಿಯೂ ಆಕೆಯ ಸಖಿಯರೂ ಕುಳಿತಿರುವ ವೃಕ್ಷದ ಸಮೀಪಕ್ಕೆ ಬಂದಿತು. ಅದನ್ನು ಹಿಂಬಾಲಿಸಿ ಶ್ರೀನಿವಾಸನು ಅಶ್ವವನ್ನು ಓಡಿಸುತ್ತ ಬಂದನು. ಅಷ್ಟರಲ್ಲಿ ಗರ್ಜಿಸುತ್ತ ತಮ್ಮ ಕಡೆಗೆ ಬರುತ್ತಿರುವ ಗಜವನ್ನು ಕಂಡು ಆ ಕನ್ನಿಕೆಯರು ಅಂಜಿ ಗಿಡದ ಮರೆಗೆ ಅಡಗಿಕೊಂಡರು. ತಮ್ಮ ಕಣ್ಣುಗಳನ್ನು ಮುಚ್ಚಿ, ಒಬ್ಬರಮೇಲೊಬ್ಬರು ಬಿದ್ದುಕೊಂಡು ಒಮ್ಮೊಮ್ಮೆ ತಮ್ಮ ಕಣ್ಣುಗಳನ್ನು ತೆರೆದು, ಗಜರಾಜನು ಹೋದನೋ ಇಲ್ಲವೋ ? ಎಂದು ನೋಡುತ್ತಿದ್ದರು. ಆ ಕನ್ನಿಕೆಯರು ಹೀಗೆ ನೋಡುತ್ತಿರಲು ತಮ್ಮ ಎದುರಿನಲ್ಲಿ, ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವನಾಗಿಯೂ, ರತ್ನಾಭರಣಗಳಿಂದ ಭೂಷಿತನಾಗಿಯೂ ಇರುವ ಒಬ್ಬ ಪುರುಷನು ಅಶ್ವವನ್ನೇರಿ ಬರುತ್ತಿರುವದನ್ನು ಕಂಡು ಆಶ್ಚರ್ಯಚಕಿತರಾದರು. ಅಷ್ಟರಲ್ಲಿ ಆ ಮದಗಜವು ತನ್ನ ಗರ್ವವನ್ನು ಬಿಟ್ಟು ಶ್ರೀನಿವಾಸನಿಗೆ ಸೊಂಡೆಯನ್ನೆತ್ತಿ ನಮಸ್ಕಾರವನ್ನು ಮಾಡಿ, ಗರ್ಜಿಸುತ್ತ ವನದಲ್ಲಿ ಹೊರಟುಹೋಯಿತು. ಇದನ್ನೆಲ್ಲ ಆ ಕನ್ನಿಕೆಯರು ಕಣ್ಣಾರೆ ನೋಡಿ, ಶ್ರೀನಿವಾಸನಕಡೆಗೆ ಬೆರಳುಮಾಡಿ ತೋರಿಸುತ್ತ ತಮ್ಮ ತಮ್ಮೊಳಗೆ ಮಾತನಾಡುತ್ತಿದ್ದರು.ಅವರಲ್ಲಿ ಒಬ್ಬಳು ಮತ್ತೊಬ್ಬಳಿಗೆ,—"ಸಖಿಯೆ, ನೋಡಿದೆಯಾ, ಕಮಲದಂತೆ ನೇತ್ರವುಳ್ಳವನಾದ ಈ ಕಿರಾತರೂಪಿಯನ್ನು! ಇಂಥ ತ್ರಿಲೋಕಸುಂದರನನ್ನೂ, ಶಕ್ತಿವಂತನನ್ನೂ ನಾನು ಎಲ್ಲಿಯೂ ನೋಡಿದ್ದಿಲ್ಲ. ಏನು ಇವನ ಸಾಮರ್ಥ್ಯವು ! ಮಹತ್ತಾದ ಗಜವು ಇವನಿಗೆ ಶರಣಾಗತವಾಗಿ ಹೊರಟುಹೋಯಿತು." ಎಂದು ಹೇಳಿದಳು ಪದ್ಮಾವತಿಯು ಆ ಶ್ರೀನಿವಾಸನನ್ನು ಕಣ್ತುಂಬ ನೋಡಿ, ಅತನ ಮನೋಹರವಾದ ರೂಪವನ್ನು ಕಂಡು ಆಶ್ಚರ್ಯಪಟ್ಟು, ತನ್ನ ಸಖಿಯರಿಗೆ—"ಸಖಿಯರೇ, ಈ ಅಶ್ವಾರೂಢನಾಗಿ ನಮ್ಮ ಸಮ್ಮುಖದಲ್ಲಿರುವ ಈ ಕಿರಾತರೂಪಿಯು ಯಾರು ? ಇವನ ಮಾತಾಪಿತೃಗಳನ್ನೂ ಕೇಳಿರಿ," ಎಂದು ಹೇಳಿದಳು. ಆಗ ಸಖಿಯರು ಶ್ರೀನಿವಾಸನಿಗೆ —" ಮಹಾ

ಪುರುಷನೇ, ನೀನು ಯಾರು ? ಇಲ್ಲಿಗೆ ಏನು ಕಾರಣ ಬಂದಿರುವೆ ? ಪುರುಷರಿಲ್ಲದ ಈ ಸ್ಥಳದಲ್ಲಿ ನಮ್ಮ ಹತ್ತರ ವಿಶೇಷ ವೇಳೆ ನಿಲ್ಲದೆ, ನಿನ್ನ ವೃತ್ತಾಂತವನ್ನು ಹೇಳಿ, ಇಲ್ಲಿಂದ ಹೋಗು" ಎಂದು ಹೇಳಿದರು. ಅದಕ್ಕೆ ಅಶ್ವಾರೂಢನಾದ ಶ್ರೀನಿವಾಸನು—"ಕನ್ನಿಕೆಯರೇ, ನೀವು ಕೇಳಿದ್ದಕ್ಕೆ ನಾನು ಎಲ್ಲ ಸಂಗತಿಗಳನ್ನು ಸಮರ್ಪಕವಾಗಿ ಹೇಳುವದು ನನ್ನ ಕರ್ತವ್ಯವು; ಆದ್ದರಿಂದ ಹೇಳುವೆನು ಕೇಳಿರಿ,— ಈಗ ಮುಖ್ಯವಾಗಿ (ಪದ್ಮಾವತಿಯ ಕಡೆಗೆ ಬೆರಳುಮಾಡಿ ತೋರಿಸಿ,) ಈ ರಾಜಪುತ್ರಿಯು ಕಡೆಗೆ ನನ್ನ ಕಾರ್ಯನಿಮಿತ್ತವಿರುವದು; ಆದಕಾರಣ ಬಂದಿರುವೆನು," ಎಂದು ಹೇಳಿ ಪದ್ಮಾವತಿಯ ಅಪ್ರತಿಮ ರೂಪವನ್ನು ಕಂಡು ಮನದಲ್ಲಿ ಮೋಹಿಸಿ ಆಕೆಯನ್ನು ಕಣ್ಣು ಮುಚ್ಚದೆ ನೋಡಹತ್ತಿದನು. ಪದ್ಮಾವತಿಯಾದರೂ ಪರಮ ಸುಂದರನಾದ ಶ್ರೀನಿವಾಸನನ್ನು ತನ್ನ ಕಡೆನೋಟದಿಂದ ನೋಡುತ್ತಿದ್ದಳು. ಸಖಿಯರು ಪುನಃ ಶ್ರೀನಿವಾಸನನ್ನು ಕುರಿತು — ಪರಮಪುರುಷನೇ, ಈ ನಮ್ಮ ರಾಜಪುತ್ರಿಯ ಕಡೆಗೆ ನಿನ್ನ ಕಾರ್ಯವೇನಿರುವದು; ಬೇಗನೆ ಹೇಳು; ನಿನ್ನ ವಾಸಸ್ಥಳವು ಯಾವದು ? ನಿನ್ನ ಮಾತಾಪಿತೃಗಳೂ, ಅಣ್ಣತಮ್ಮಂದಿರೂ ನಿನ್ನ ಕುಲ, ಶೀಲ ಗೋತ್ರಗಳೂ ಯಾವವು ?" ಎಂದು ಕೇಳಿದರು.

ಅದಕ್ಕೆ ಶ್ರೀನಿವಾಸನು—"ಕನ್ನಿಕೆಯರೇ, ನನ್ನದು ಚಂದ್ರಕುಲವು, ವಸುದೇವ ದೇವಕಿಯರು ನನ್ನ ತಂದೆತಾಯಿಗಳು, ಬಲರಾಮನು ನನ್ನ ಅಗ್ರಜನು, ಸುಭದ್ರೆಯು ನನ್ನ ತಂಗಿಯು, ಪಾಂಡವರು ನನಗೆ ಬಾಂಧವರು, ನನ್ನನ್ನು ಕೃಷ್ಣನೆಂದು ಕರೆಯುವರು; ನಾನು ಕೃಷ್ಣಪಕ್ಷದಲ್ಲಿ ಜನಿಸಿದವನು; ನನ್ನ ತಾಯಿಯಂತೆ ಕೃಷ್ಣವರ್ಣದವನಾಗಿರುವೆನು; ಅದರಿಂದ ನನಗೆ ಕೃಷ್ಣನೆಂಬ ಹೆಸರು ಬೀಳಲಿಕ್ಕೆ ಕಾರಣವಾಯಿತು; ಕನ್ಯಾಪೇಕ್ಷೆಯೇ ನನ್ನ ಮುಖ್ಯ ಕೆಲಸವು. ಅದಕ್ಕಾಗಿಯೇ ನಾನು ಇಲ್ಲಿಗೆ ಬಂದಿರುವೆನು. ರಾಜಪುತ್ರಿಯೇ, ನನ್ನ ಸಂಗತಿಯನ್ನೆಲ್ಲ ಹೇಳಿದೆನು; ಇನ್ನು ಮೇಲೆ ನಿನ್ನ ಕುಲ, ಗೋತ್ರ, ನಾಮಗಳನ್ನು ಹೇಳು," ಎಂದು ಕೇಳಿದನು. ಪದ್ಮಾವತಿಯು—"ಕಿರಾತರೂಪಿಯಾದ ಪುರುಷನೇ, ನಾನು ತೋಂಡದೇಶಕ್ಕೆ ಅಧಿಪತಿಯಾದ ಆಕಾಶರಾಜನ ಪುತ್ರಿಯು, ಪದ್ಮಾವತಿಯೆಂಬದು ನನ್ನ ನಾಮವು, ನಮ್ಮದು ಚಂದ್ರಕುಲವು, ಅತ್ರಿಗೋತ್ರವು, ಇಷ್ಟೇ ನನ್ನ ವೃತ್ತಾಂತವು; ಇದನ್ನೆಲ್ಲ ಕೇಳಿ ನೀನು ಮಾಡುವದೇನು ? ಇಲ್ಲಿಂದ ಬೇಗನೆ ಹೊರ

ಟುಹೋಗು!" ಎಂದು ಹೇಳಿದಳು. ಅದಕ್ಕೆ ಶ್ರೀನಿವಾಸನು—"ಪದ್ಮಾವತಿಯೇ, ನಿಷ್ಠುರವಾದ ವಾಕ್ಯಗಳಿಂದ ನನ್ನ ಮನಸ್ಸನ್ನು ಯಾಕೆ ನೋಯಿಸುತ್ತೀ? ಮೃದುವಚನಗಳಿಂದ ಮಾತಾಡಲಿಕ್ಕೆ ನಿನಗೆ ಬರುವದಿಲ್ಲವೇ ಹ್ಯಾಗೆ? ರಾಜಪುತ್ರಿಯೇ, ನಾನು ಇಲ್ಲಿಂದ ಹೊರಟುಹೋಗಲಿಕ್ಕೆ ಬಂದಿಲ್ಲ; ನಿನ್ನ ಮೇಲಿನ ಅಪೇಕ್ಷೆಯಿಂದಲೇ ಬಂದಿರುವೆನೆಂಬ ತಿಳಿ. ಪದ್ಮಾಕ್ಷಿಯೇ, ಅನ್ನಾಪೇಕ್ಷೆಯುಳ್ಳವರಿಗೆ ಅನ್ನವನ್ನೂ, ಜಲಾಪೇಕ್ಷೆಯುಳ್ಳವರಿಗೆ ಜಲವನ್ನೂ ಕೊಟ್ಟವರು ಬಹು ಪುಣ್ಯವನ್ನು ಹೊಂದುವರು. ಅದರಂತೆ ನಾನು ಕಾಮಾಪೇಕ್ಷೆಯಿಂದ ನಿನ್ನ ಬಳಿಗೆ ಬಂದಿರುತ್ತೇನೆ. ಯೋಗ್ಯನಾಗಿರುವ ನನ್ನ ಅಪೇಕ್ಷೆಯನ್ನು ಪೂರ್ಣಮಾಡಿ, ಆನಂದವನ್ನು ಹೊಂದು; ಮತ್ತು ಈ ಪುಣ್ಯ ಪ್ರಭಾವದಿಂದ ಸ್ವರ್ಗವನ್ನು ಪಡೆ, ಎಂದು ಹೇಳಲು. ಆ ಮಾತುಗಳನ್ನು ಕೇಳಿ, ಪದ್ಮಾವತಿಯು ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು,—"ಅವಿವೇಕಿಯಾದ ಕಿರಾತರೂಪಿಯೇ, ಅಜ್ಞಾನದಿಂದ ಅವಾಚ್ಯವಚನಗಳನ್ನಾಡುತ್ತೀಯಾ? ನಿನಗೆ ಜೀವದಾಶೆಯಿಲ್ಲೆಂಬ ಹಾಗೆ ತೋರುತ್ತದೆ. ನಮ್ಮ ತಂದೆಯಾದ ಆಕಾಶರಾಜನು ಇಂಥ ನುಡಿಗಳನ್ನಾಡುವ ನಿನ್ನನ್ನು ಕಂಡರೆ, ಸಂಹಾರ ಮಾಡದೆ ಬಿಡಲಿಕ್ಕಿಲ್ಲ; ಆದ್ದರಿಂದ "ನೀನು ಅಜ್ಞಾನದಿಂದ ಇಂಥ ಮಾತುಗಳನ್ನಾಡುತ್ತೀ" ಎಂದು ತಿಳಿದು ಇದೊಂದು ಸಾರೆ ಕರುಣಿಸಿ ಕ್ಷಮೆಮಾಡಿ ಬಿಟ್ಟದ್ದೇನೆ; ನಮ್ಮ ತಂದೆಗೆ ಈ ಮಾತು ತಿಳಿಯುವದರೊಳಗಾಗಿಯೇ ಶೀಘ್ರವಾಗಿ ಇಲ್ಲಿಂದ ಹೊರಟು ಹೋಗು." ಎಂದು ಹೇಳಿದಳು.

ಅದಕ್ಕೆ ಶ್ರೀನಿವಾಸನು ಹೆದರದೆ,—"ಪದ್ಮಾವತಿಯೇ, ನೀನಾಡುವ ಮಾತುಗಳಿಗೆ ಬೆದುರುವೆನೆಂದು ತಿಳಿದೆಯಾ? ಇದರಲ್ಲಿ ನಾನು ಮಾಡಿದ ಅನ್ಯಾಯವೇನು? ನೀನು ಕನ್ಯೆಯು, ನಾನು ವರನು; ನಿಮ್ಮ ತಂದೆಯು ಕೊಂದು ಹಾಕಿಸುವನೆಂದು ಹೇಳುತ್ತೀಯಲ್ಲ? ಅನ್ಯಾಯವಿಲ್ಲದೆ ಅವನು ನನ್ನ ತಲೆಯನ್ನು ಹೊಡಿಸುವನೋ ಹ್ಯಾಗೆ? ಈ ನಿನ್ನ ಮಾತು ಸುಮ್ಮನೆ ನನಗೆ ಹೆದರಿಕೆಯನ್ನು ಹುಟ್ಟಿಸುವದಲ್ಲವೇ?" ಎಂದು ನುಡಿದನು. ಅದಕ್ಕೆ ಪದ್ಮಾವತಿಯು—"ಮೂರ್ಖನಾದ ಪುರುಷನೇ, ಬಾಲಭಾವದಿಂದ ಮಾತಾಡುವದರಿಂದಾಗುವ ಪ್ರಯೋಜನವೇನು? ಆಕಾಶರಾಜನು ನಿನ್ನನ್ನು ಒಂದು ವೇಳೆ ಸಂಹಾರಮಾಡದಿದ್ದರೂ, ಕನ್ಯೆಯಾದ ನನಗೆ ಇಂಥ ಮಾತುಗಳನ್ನಾಡಿದ ಅಪರಾಧಕ್ಕಾಗಿ, ನಿನಗೆ ದೇಡಿಸುನ್ನೇ ಹಾಕಿಸ

ವನು; ಇದು ನಿಶ್ಚಯವೆಂದು ತಿಳಿ." ಎಂದು ಹೇಳಿದಳು. ಅದಕ್ಕೆ ಶ್ರೀನಿವಾಸನು "ಪ್ರಿಯಳೇ, ನಿನ್ನ ಕಡೆಗಣ್ಣ ನೋಟವೆಂಬ ಬೇಡಿಯಿಂದ ನನ್ನ ಮನಸ್ಸನ್ನು ಮೊದಲೇ ಬಿಗಿದಿರುತ್ತೀ. ಅಂದಮೇಲೆ ಇನ್ನು ರಾಜನಿಂದ ಬೇಡಿಯನ್ನು ಬಿಗಿಸುವದೆಲ್ಲಿ? ಇದಲ್ಲದೆ ನನ್ನ ದೈವದಲ್ಲಿದ್ದದ್ದನ್ನು ತಪ್ಪಿಸುವದು ಯಾರಿಂದಲೂ ಆಗದು;" ಎಂದು ಹೇಳಿದನು. ಆಗ ಪದ್ಮಾವತಿಯು ತನ್ನ ಮನಸ್ಸಿನಲ್ಲಿ—"ಈ ಕಿರಾತರೂಪಿಯು ಎಂಥ ಗಟ್ಟಿಗನು, ನಾನಂವ ಮಾತುಗಳಿಗೆ ಸ್ವಲ್ಪವಾದರೂ ಭಯಪಡಲೊಲ್ಲನು; ಅಂದ ಮೇಲೆ ಈಗ ಹ್ಯಾಗೆ ಮಾಡಬೇಕು?" ಎಂದು ಯೋಚಿಸಿ,—"ನಿಷಾದಶ್ರೇಷ್ಠನೇ, ನಿನಗೆ ಆಕಾಶರಾಜನ ಆಣೆ, ವರಾಹಮೂರ್ತಿಯ ಆಣೆ, ವೇಂಕಟೇಶನ ಆಣೆ, ಇಲ್ಲಿಂದ ಹೋರಟು ಹೋಗು, ನಿನ್ನ ಪ್ರಾಣಗಳನ್ನು ರಕ್ಷಿಸಿಕೊಂಡು ಕ್ಷೇಮದಿಂದ ನಿನ್ನ ಗೃಹಕ್ಕೆ ಹೊರಟುಹೋಗು;" ಎಂದು ಹೇಳಿದಳು. ಆ ಮಾತುಗಳನ್ನು ಲಕ್ಷಿಸದೆ ಶ್ರೀನಿವಾಸನು ತನ್ನ ಕುದುರೆಯನ್ನು ಮತ್ತಿಷ್ಟು ಪದ್ಮಾವತಿಯ ಸಮೀಪಕ್ಕೆ ತಂದು,—"ನೀನು ಆಣೆಗಳನ್ನಿಟ್ಟರೂ ನಾನು ಅವುಗಳನ್ನು ಲಕ್ಷಿಸುವದಿಲ್ಲೆಂದು ಖಂಡಿತವಾಗಿ ತಿಳಿ. ಇಕೋ ನೋಡು! ಮತ್ತಿಷ್ಟು ನಿನ್ನ ಸಮೀಪಕ್ಕೆ ಬಂದೆನು," ಎಂದನು. ಪದ್ಮಾವತಿಯು—ವನಚರನೇ, "ಪುರುಷನಾದ ನಾನು ನಿರ್ಜನವಾದ ಸ್ಥಳದಲ್ಲಿ ಬಲಾತ್ಕಾರವನ್ನು ಮಾಡಿದರೂ ಈ ಕನ್ನಿಕೆಯರಿಂದೇನಾಗುವದು?" ಎಂದು ನೀನು ಮನಸ್ಸಿನಲ್ಲಿ ತಿಳಿದಿರುವೆಯಾ ಹ್ಯಾಗೆ? ಮಾತಾಪಿತೃಗಳನ್ನೂ, ನಿನ್ನ ಬಂಧು ಬಾಂಧವರನ್ನೂ ತ್ಯಾಗ ಮಾಡಿ, ವ್ಯರ್ಥವಾಗಿ ಈ ವನದಲ್ಲಿ ಅನಾಥಮರಣವನ್ನು ನಮ್ಮ ಕೈಯಿಂದ ಹೊಂದೀ. ಕಾಕ—ಗೃಧ್ರಗಳ ಪಾಲಾಗಿ. ಹೋಗುವ ಪ್ರಸಂಗವು ಬಂದೊದಗೀತು ಇದು ಸತ್ಯವೆಂದು ತಿಳಿ, ನಿನ್ನ ಜೀವವನ್ನುಳಿಸಿಕೊಂಡು ಬೇಗನೆ ಇಲ್ಲಿಂದ ಹೋಗು" ಎಂದು ನಿಷ್ಠುರವಾದ ವಚನಗಳನ್ನಾಡಿದಳು. ಆ ಮಾತಿಗೂ ಹೆದರದೆ ಶ್ರೀನಿವಾಸನು "ಪದ್ಮಾವತಿಯೇ, ನನ್ನ ಹಣೆಯಲ್ಲಿ ಬ್ರಹ್ಮನು ಬರೆದಂತೆ ಆಗುವದು, ಅದಕ್ಕೆ ಅಂಜಿದರೆ ಆಗುವದೇನು? ಇಕೋ ನೋಡು, ಈ ಕಾಲದಲ್ಲಿ ನನಗೆ ಜಯವೇ ಆಗಲಿ ಅಪಜಯವೇ ಆಗಲಿ, ನಿನ್ನನ್ನು ಭೋಗಿಸುವೆನೆಂದು ಖಂಡಿತವಾಗಿ ತಿಳಿ." ಎಂದು ನುಡಿಯಲು, ಶ್ರೀನಿವಾಸನ ಈ ದೃಢನಿಶ್ಚಯವನ್ನು ಕಂಡು ಪದ್ಮಾವತಿಯು ತನ್ನ ಮನಸ್ಸಿನಲ್ಲಿ ಸಂತೋಷಹೊಂದಿದರೂ, ಅದನ್ನು ಸಖಿಯರಿಗೆ ತೋರಗೊಡದೆ ಮೊದಲಿನಂತೆಯೇ ಪ್ರೇಮಕಲಹವನ್ನು ಮಾಡಿ ಇವ

ನನ್ನು ಪರಾಜಯಪಡಿಸಬೇಕೆಂದು ಬಹಿರಂಗದಲ್ಲಿ ಬಹಳ ಸಿಟ್ಟಾದವಳ ಹಾಗೆ ತೋರಿಸುತ್ತ ಶ್ರೀನಿವಾಸನಿಗೆ—"ಹಾಗಾದರೆ, ಮೂಢನೇ, ನನ್ನನ್ನು ಭೋಗಿಸುವೆಯೋ ? ಅಥವಾ ನಿನ್ನ ಭೋಗವನ್ನು (ದೈವದಲ್ಲಿದ್ದದ್ದನ್ನು) ಭೋಗಿಸುವೆಯೋ? ನೋಡು, ಈಗಲೇ ತೋರಿಸುವೆನು;" ಎಂದು ತನ್ನ ಸಖಿಯರಿಗೆ— "ಏನು ನೋಡುತ್ತೀರಿ? ಹಿಡಿಯಿರಿ, ನಿಮ್ಮ ಕೈಯೊಳಗೆ ದೊಡ್ಡದೊಡ್ಡ ಕಲ್ಲುಗಳನ್ನು ತಕ್ಕೊಂಡು ಅವುಗಳಿಂದ ಈ ಕಿರಾತರೂಪಿಯ ಸಮಾಚಾರವನ್ನು ತೆಗೆದುಕೊಳ್ಳಿರಿ ಎಂದು ಹೇಳಿ, ಪದ್ಮಾವತಿಯು ತನ್ನ ಕೈಯಲ್ಲಿ ಕಲ್ಲುತೆಗೆದುಕೊಂಡು, ಶ್ರೀನಿವಾಸನ ಮೇಲೆ ಎಸೆಯಹತ್ತಿದಳು; ಕೂಡಲೆ ಉಳಿದ ಕನ್ನಿಕೆಯರೆಲ್ಲರೂ ತಮ್ಮ ತಮ್ಮ ಕೈಗಳಲ್ಲಿ ಕಲ್ಲುಗಳನ್ನು ತೆಗೆದುಕೊಂಡು ಕುದುರೆಗೆ ಹೊಡೆಯಲಾರಂಭಿಸಿದರು. ಆ ಕನ್ನಿಕೆಯರ ಶಿಲೆಗಳಿಂದ ಹೊಡೆಸಿಕೊಳ್ಳಲ್ಪಟ್ಟ ಅಶ್ವವು ಪೆಟ್ಟುಗಳನ್ನು ತಾಳಲಾರದೆ ಭೂಮಿಯಲ್ಲಿ ಬಿದ್ದು ಪ್ರಾಣಗಳನ್ನು ಬಿಟ್ಟಿತು. ತನ್ನ ಕುದುರೆಯು ಈ ಅವಸ್ಥೆಯನ್ನು ಕಂಡು ಶ್ರೀನಿವಾಸನು, ಒತ್ತಟ್ಟಿಗೆ ಬಿದ್ದಿರುವ ತನ್ನ ರುಮಾಲವನ್ನು ಬಗಲಲ್ಲಿ ಹಿಡಕೊಂಡು, ಬಿಚ್ಚಿದ ತಲೆಗೂದಲುಗಳನ್ನು ಸಹ ಕಟ್ಟಿಕೊಳ್ಳದೆ, ತನ್ನ ಮನಸ್ಸಿನಲ್ಲಿ—"ಇನ್ನು ಇಲ್ಲಿ ನಿಂತರೆ ನನ್ನ ಅವಸ್ಥೆಯು ಏನಾಗುವದೋ ತಿಳಿಯದು! ಇಲ್ಲಿಂದ ಓಡಿಹೋಗಿ, ಪಾರಾಗುವದೇ ಲೇಸು. ಈ ಕನ್ನಿಕೆಯರು ಒಳ್ಳೆಯವರಲ್ಲ, ಕುದುರೆಗಾದ ಅವಸ್ಥೆಯನ್ನು ನನಗೆ ಸಹ ಮಾಡುವದಕ್ಕೆ ಹೇಸುವದಿಲ್ಲ;" ಎಂದು ಯೋಚಿಸಿ ಭ್ರಾಂತನಹಾಗೆ ದಿಕ್ಕುಗಳನ್ನು ನೋಡುತ್ತ ಓಡಲಾರಂಭಿಸಿದನು. ಹೋಗುವಾಗ ಜಗತ್ಪತಿಯಾದ ಶ್ರೀನಿವಾಸನು ತನ್ನ ಮನದೊಳಗೆ—"ನಾನು ಮನೆಯಿಂದ ಹೊರಡುವಾಗ ನನ್ನ ತಾಯಿಯ (ಬಕುಲಾವತಿಯ) ಆಜ್ಞೆಯನ್ನು ತೆಗೆದುಕೊಂಡು ಬಂದಿದ್ದರೆ ಈ ಅವಸ್ಥೆಯು ಆಗುತ್ತಿದ್ದಿಲ್ಲ; ನಾನು ಹಾಗೇ ಬಂದಕಾರಣ ಈ ಹೊತ್ತಿನದಿವಸ ನನಗೆ ಈ ಸಂಕಟವು ಪ್ರಾಪ್ತವಾಯಿತು," ಎಂದು ಅನ್ನುತ್ತ ಉತ್ತರದಿಕ್ಕಿಗೆ ನಡೆದನು.

ಜನಕರಾಜನೇ, ಆ ಶ್ರೀನಿವಾಸನು ಜಗದೀಶನಾಗಿಯೂ, ದೋಷರಹಿತನಾಗಿಯೂ, ತತ್ವಾವಧಾರಣ-ಸಮರ್ಥನಾಗಿಯೂ ಇದ್ದರೂ, ಲೋಕವಿಡಂಬನವನ್ನು ತೋರಿಸುವದಕ್ಕಾಗಿ ಮನುಷ್ಯರಂತೆ ಈ ಪ್ರಕಾರ ನಟಿಸಿ, ತನ್ನ ವಾಸಸ್ಥಳವಾದ ವಲ್ಮೀಕದೊಳಗೆ ಹೋಗಿ, ಪ್ರಳಯಕಾಲದಲ್ಲಿ ವಟಪತ್ರದಮೇಲೆ ಶಯನ ಮಾಡುವಹಾಗೆ, ತನ್ನ ಶಯ್ಯಾಸ್ಥಾನದಲ್ಲಿ ಮಲಗಿದನು.

॥ ಇತಿ ಶ್ರೀಭವಿಷ್ಯೋತ್ತರ ಪುರಾಣದಲ್ಲಿ, ವೇಂಕಟೇಶ ಮಾಹಾತ್ಮ್ಯದಲ್ಲಿ "ಶ್ರೀನಿವಾಸಾಪಜಯ" ವೆಂಬ ೭ನೆಯ ಅಧ್ಯಾಯವು ಮುಗಿದುದು. ॥

# ೮ನೆಯ ಅಧ್ಯಾಯ



ಶತಾನಂದ ಋಷಿಗಳು ಹೇಳುತ್ತಾರೆ,–ಕೇಳೈ ಜನಕರಾಜನೇ, ಶ್ರೀನಿವಾಸನು ತನಗೆ ಪದ್ಮಾವತಿಯಿಂದ ಅಪಮಾನವಾಗಿದ್ದರೂ ಆಕೆಯ ವಿರಹತಾಪದಿಂದ ತನ್ನ ಹಾಸಿಗೆಯಮೇಲೆ ಮುಸುಕುಹಾಕಿಕೊಂಡು ಮಲಗಿದನು. ಇತ್ತ ಬಕುಲಾವತಿಯು ಶ್ರೀನಿವಾಸನ ದೆಸೆಯಿಂದ ಪರಿಪರಿಯ ಅನ್ನವನ್ನು ಮಾಡಿಕೊಂಡು ವಲ್ಮೀಕವನ್ನು ಪ್ರವೇಶಮಾಡಿ, ಶ್ರೀನಿವಾಸನ ಸಮೀಪಕ್ಕೆ ಬಂದು ನೋಡುತ್ತಿರಲು ಆ ಜಗತ್ಪತಿಯು ಪರ್ಯಂಕದಲ್ಲಿ ತನ್ನ ಶಾಲಿನಿಂದ ಮೋರೆಯಮೇಲೆ ಮುಸುಕು ಹಾಕಿಕೊಂಡು, ದೀರ್ಘಶ್ವಾಸೋಚ್ಛ್ವಾಸಗಳಿಂದ ನೇತ್ರೋದಕಗಳನ್ನು ಸುರಿಸುತ್ತ, ದುಃಖದಿಂದ ಮೌನವಾಗಿ ಮಲಗಿದ್ದನು. ಆಗ ಬಕುಲಾವತಿಯು— "ಶ್ರೀನಿವಾಸನೇ, ನೀನು ಏನುಕಾರಣ ಮಲಗಿರುವೆ? ಏಳು ಏಳು. ನೀನು ಒಮ್ಮೆಯಾದರೂ ಹಗಲಿನಲ್ಲಿ ಮಲಗಿದವನಲ್ಲ; ನೀನು ಎಂದೂ ದುಃಖಪಡುವವನಲ್ಲ; ಇವತ್ತಿನದಿವಸದಲ್ಲಿಯೇ ಏನುಕಾರಣ ಶೋಕಪಡುವೆ? ಆ ದುಃಖದ ಕಾರಣವನ್ನು ನನಗೆ ಹೇಳು. ಜಗದಾನಂದ—ಮೂರ್ತಿಯೇ, ಪರಮಾನ್ನವನ್ನು ಮಾಡಿ ತಂದಿರುವೆನು; ಹೊತ್ತು ಬಹಳವಾಗಿರುವದು, ಹಸಿವೆಯಿಂದ ಬಳಲುತ್ತಿರುವೆ, ಬೇಗನೆ ಏಳು; ಸ್ವಲ್ಪ ಭೋಜನಮಾಡಿದರೆ ಸಮಾಧಾನವಾಗುವದು;" ಎಂದು ಹೇಳಲು, ಶ್ರೀನಿವಾಸನು ಅದಕ್ಕೆ ಉತ್ತರವನ್ನೇ ಕೊಡಲಿಲ್ಲ, ಆಗ ಬಕುಲಾವತಿಯು ವ್ಯಸನದಿಂದ ಪುನಃ—ಸ್ವಾಮಿ, ಸರ್ವಲೋಕಗಳ ದುಃಖವನ್ನು ನಾಶಮಾಡುವವನಾದ ನೀನು ಈ ಕಾಲದಲ್ಲಿ ಶೋಕಮಾಡುವ ನಿಮಿತ್ತವೇನು? ಹಸಿವೆಯಿಂದ ಬಾಧೆಪಡುತ್ತಿರುವ ನಿನ್ನನ್ನು ನೋಡಿ ನನಗೆ ಪರಮ ದುಃಖವಾಗುವದು; ಆದ್ದರಿಂದ ನಿನ್ನ ದುಃಖದ ಕಾರಣವನ್ನು ನನಗೆ ಹೇಳಿ, ಭೋಜನವನ್ನು ಮಾಡು; ಒಂದುವೇಳೆ ನೀನು ಕಾರಣವನ್ನು ಹೇಳದಿದ್ದರೆ ವಸುದೇವ, ದೇವಕಿ, ಬಲರಾಮರ ಆಣೆಯದೆ, ಸತ್ಯವಾಗಿ ಹೇಳು; ನೀನು ಬೇಟೆಯನ್ನಾಡುವದಕ್ಕಾಗಿ ಹೋದ

ಸಮಯದಲ್ಲಿ ವನದೊಳಗಿರುವ ದುಷ್ಟಮೃಗಗಳನ್ನಾಗಲಿ, ಚೋರರನ್ನಾಗಲಿ, ಭೂತಪಿಶಾಚಗಳನ್ನಾಗಲಿ ಕಂಡು ಅಂಜಿದೆಯಾ ಹ್ಯಾಗೆ? ಹಾಗಿದ್ದರೆ ಭಸ್ಮದಿಂದ ಮಂತ್ರಿಸಿ ಯಂತ್ರ-ಮೂಲಿಕಾದಿಗಳನ್ನು ಬಂಧನಮಾಡಿ, ರಕ್ಷೆಯನ್ನು ಮಾಡು ವೆನು; ಇಲ್ಲವೆ ವನದಲ್ಲಿ ಯಾವಳಾದರೂ ಕನ್ನಿಕೆಯನ್ನಾಗಲಿ ಗಂಧರ್ವಸ್ತ್ರೀಯ ನ್ನಾಗಲಿ ಕಂಡು ಆ ಸ್ತ್ರೀಯ ಭೋಗವನ್ನು ಇಚ್ಛಿಸಿ, ಆಕೆಯ ವಿರಹ ವೇದನೆ ಯಿಂದ ನೀನು ಇಷ್ಟು ವ್ಯಥೆಯನ್ನು ಹೊಂದಿರುವೆಯಾ ಹ್ಯಾಗೆ? ಶ್ರೀನಿವಾಸನೇ, ಅಂಥ ಪುಣ್ಯವಂತಳಾದ ಯಾವ ಕನ್ನಿಕೆಯು ಬಾಲಕನಾದ ನಿನ್ನನ್ನು ಕಂಡು ಮೋಹಪಡಿಸಿ ಭ್ರಾಂತನನ್ನಾಗಮಾಡಿದಳು? ಹೇಳು; ಆ ನಿನ್ನ ಇಷ್ಟ ಕಾರ್ಯ ವನ್ನು ಈಗಲೇ ಮಾಡಿ ಕೊಡುವೆನು." ಎಂದು ನುಡಿಯಲು, ಆ ಮಾತಿಗೂ ಶ್ರೀನಿವಾಸನು ಏನೂ ಉತ್ತರವನ್ನು ಕೊಡದೆ ಸುಮ್ಮನೆ ಇದ್ದನು.

ಆಗ ಬಕುಲಾವತಿಯು ತಾನು ತಂದಿದ್ದ ಭೋಜನ ಪದಾರ್ಥಗಳನ್ನು ಕೆಳಗೆ ಇಟ್ಟು, ಶ್ರೀನಿವಾಸನ ತೀರ ಸಮೀಪಕ್ಕೆ ಬಂದು. ಅವನಮೈಮೇಲೆ ಕೈಯಾಡಿಸಿ, ಅವನು ಹೊದ್ದುಕೊಂಡಿದ್ದ ಮೋರೆಯ ಮುಸಕನ್ನು ಬೇರೆ ಒತ್ತಟ್ಟಿಗೆ ಸರಿಸಿ, ತನ್ನ ಕೈಯಿಂದ ಅವನ ಕಣ್ಣೀರನ್ನು ಒರಸಿ,—"ಜಗತ್ತಿಗೆ ಸ್ವಾಮಿಯಾದ ವೇಂ ಕಟೇಶನೇ, ನಿನ್ನ ಮನಸ್ಸಿನಲ್ಲಿರುವ ದುಃಖವನ್ನು ಬೇಗ ಹೇಳು; ಸಂಶಯವನ್ನು ಮಾಡದೆ, ಲಜ್ಜೆಯಿಂದ ಭಯಪಡದೆ ಯಥಾರ್ಥವಾಗಿ ಹೇಳು; ನನ್ನ ಶಕ್ತಿಮೀ ರಿದ ಕಾರ್ಯವಿದ್ದರೂ ಅದನ್ನು ನಿಶ್ಚಯವಾಗಿ ಮಾಡುತ್ತೇನೆ;" ಎಂದು ಸ್ಪಷ್ಟ ವಾಗಿ ಹೇಳಿದಳು. ಆಗ ಶ್ರೀನಿವಾಸನು ಅತಿ ದುಃಖದಿಂದ ತನ್ನ ಮನಸ್ಸಿನೊಳ ಗಿರುವ ಅಭಿಪ್ರಾಯವನ್ನು ಮೆಲ್ಲನೆ ಹೇಳತೊಡಗಿದನು,—"ಬಕುಲಾವತಿಯೇ, ಗಂಧರ್ವಪುತ್ರಿಯಾಗಲಿ, ಋಷಿಪುತ್ರಿಯಾಗಲಿ, ರಾಕ್ಷಸಿಯಾಗಲಿ ನನ್ನನ್ನು ಮೋಹಪಡಸಲಿಲ್ಲ; ನಾನು ವನಕ್ಕೆ ಹೋದ ಸಮಯದಲ್ಲಿ ಭೂತ-ಪ್ರೇತ-ಪಿಶಾಚ ಗಳನ್ನೂ, ಕ್ರೂರ ಮೃಗಗಳನ್ನೂ, ಚೋರರನ್ನೂ ಕಂಡು ಅಂಜಿದವನಲ್ಲ; ತಾಯಿಯೇ, ಆ ಭೂತಾದಿಗಳು ನನ್ನ ನಾಮಸ್ಮರಣದಿಂದಲೇ ದಿಕ್ಕುಪಾಲಾಗಿ ಓಡಿ ಹೋಗುವವು; ಹೀಗಿರಲು ಅವುಗಳಿಂದ ನಾನು ಭಯಪಡುವವನೇ? ನಾನು ಮೃತ್ಯುವಿಗೆ ಮೃತ್ಯುವೆಂದು ತಿಳಿ. ಬಕುಲಾವತಿಯೇ, ನನ್ನ ವ್ಯಸನದಕಾರಣವು ಬೇರೆ ಇರುವದು.—ನಾನು ವನಕ್ಕೆ ಹೋದ ಸಮಯದಲ್ಲಿ "ಪದ್ಮಾವತಿ"ಯೆಂಬ

ಒಬ್ಬ ರಾಜಕನ್ನಿಕೆಯನ್ನು ಕಂಡೆನು, ಅದರಿಂದ ನನ್ನ ಮನಸ್ಸು ಮೋಹಿತವಾಗಿ ಭ್ರಾಂತಿಯನ್ನು ಹೊಂದಿರುವದು; ಆಕೆಯ ರೂಪವನ್ನು ಎಷ್ಟಂತ ಹೇಳಲಿ ? ಆ ಸುಂದರಿಯ ಮನೋಹರವಾದ ಕುಡಿಹುಬ್ಬುಗಳು, ಮುಂಗುರುಳುಗಳಿಂದ ಶೋಭಿತವಾದ ನೀಲಕುಂತಳಗಳು, ಷೋಡಶಕಲೆಗಳಿಂದ ಪೂರ್ಣನಾದ ಚಂದ್ರನಿಗೆ ಸಮಾನವಾದ ಮುಖವು, ನೀಲ ಮಾಣಿಕ್ಯದಂತೆ ಪ್ರಕಾಶಿಸುವ ದೇಹಕಾಂತಿಯು, ಇವೆಲ್ಲವುಗಳಿಂದ ಶೋಭಿಸುತ್ತಿರುವ ಆ ಕನ್ನಿಕೆಯು ಲಕ್ಷ್ಮಿಗೆ ಸಮಾನಳಾಗಿರುವಳು. ಆ ಕನ್ನಿಕೆಯ ಸಲುವಾಗಿಯೇ ನನ್ನ ಅವಸ್ಥೆಯು ಈ ಪ್ರಕಾರವಾಗಿರುವದು. ಜನ್ಮಾಂತರದಲ್ಲಿ ಮಾಡಿದ ಪುಣ್ಯವಿದ್ದರೆ ಆ ಕನ್ನಿಕೆಯು ಪ್ರಾಪ್ತಳಾಗುವಳು; ಆ ಸುಂದರಿಯನ್ನು ನೋಡಿದ ಮಾತ್ರದಿಂದಲೇ ನಾನು ಪುಣ್ಯವಂತನೆಂದು ತಿಳಿಯುತ್ತೇನೆ; ಅಂದಮೇಲೆ ಆಕೆಯು ನನಗೆ ದೊರೆತರಂತೂ ನನ್ನ ಭಾಗ್ಯಕ್ಕೆ ಎಣೆಯೇ ಇಲ್ಲವೆಂದು ತಿಳಿ. ಬಕುಲಾವತಿಯೇ, ಅನ್ನಪಾನಾದಿಗಳಿಂದ ರಹಿತನಾದ ಜಡಮತಿಯ ಹೊರತು, ಮನುಷ್ಯದೇಹವನ್ನು ಧರಿಸಿದ ಯಾವ ಪುರುಷನು ಆ ಕನ್ನಿಕೆಯನ್ನು ಅಪೇಕ್ಷಿಸದೆ ಇರುವನು ? ಆದ್ದರಿಂದ ಬಕುಲಾವತಿಯೇ, ನನಗೆ ಆ ಕನ್ನಿಕೆಯ ಘಟನೆಯನ್ನು ಮಾಡು, ನನ್ನ ಮನಸ್ಸಿನ ಇಚ್ಛೆಯು ಪೂರ್ಣವಾಗದಿದ್ದರೆ, ನಾನು ಬದುಕಿ ಫಲವೇನು ? ಆ ಪದ್ಮಾವತಿಯ ಹೊರತು ನಾನು ಜೀವಿಸುವದಿಲ್ಲವೆಂದು ತಿಳಿ. ವನದಲ್ಲಿ ಆ ಸುಂದರಿಯು ತನ್ನ ಗೆಳತಿಯರನ್ನು ಕೂಡಿಕೊಂಡು ಕಲ್ಲುಗಳಿಂದ ಹೊಡೆದು, ನನ್ನ ಕುದುರೆಯನ್ನೇ ಕೊಂದುಬಿಟ್ಟಳು; ಆದರೂ ಆಕೆಯ ಮೇಲೆ ನನ್ನ ಸಿಟ್ಟಿಲ್ಲ. ಬಕುಲಾವತಿಯೇ, ಆ ಪದ್ಮಾವತಿಯ ದೆಸೆಯಿಂದಲೇ ನಾನು ಅವತಾರವನ್ನು ಮಾಡಿರುತ್ತೇನೆಂದು ತಿಳಿ. ತಾಯಿಯೇ, ನನ್ನ ಪುತ್ರನಾದ ಬ್ರಹ್ಮನು ನನಗೆ ವೈರಿಯಾಗಿರುವನು; ಯಾಕಂದರೆ ಅವನು ಆ ಶ್ರೇಷ್ಠಳಾದ ಕನ್ನಿಕೆಯನ್ನು ಮಾತ್ರ ನಿರ್ಮಾಣ ಮಾಡಿದನು; ಆದರೆ ನನಗೇ ಆ ಕನ್ನಿಕೆಯ ಘಟನೆಯನ್ನೇಕೆ ಮಾಡಬಾರದು ? ನಾನು ಅವನಿಗೆ ಏನು ಅನ್ಯಾಯವನ್ನು ಮಾಡಿರುವೆನೋ ಏನೋ ? ಈಗ ಆ ನನ್ನ ಪುತ್ರನು ವೈರತ್ವವನ್ನು ಸಾಧಿಸಿದನು. ಅದು ಹ್ಯಾಗೇ ಇರಲಿ, ಆ ಪದ್ಮಾವತಿಯು ನನಗೆ ನಿಶ್ಚಯವಾಗಿ ಸಿಗುವಳು; ಆದ್ದರಿಂದ ಬಕುಲಾವತಿಯೇ, ಆ ಕನ್ನಿಕೆಯ ಘಟನೆಯನ್ನು ಮಾಡುವದಕ್ಕೆ ಸಹಾಯವನ್ನು ಮಾಡು; ಒಂದು ವೇಳೆ ಈ ವಿಷಯದಲ್ಲಿ ನೀನು ಸಹಾಯ ಮಾಡದಿದ್ದರೆ, ನನಗೆ ಮರಣವೇ ನಿಶ್ಚಯವೆಂದು ತಿಳಿ; ಅಂಥ ನನ್ನನ್ನು ಬದುಕಿ-

ಸುವದಕ್ಕೆ ನೀನು ಪ್ರಯತ್ನವನ್ನು ಮಾಡಿದರೆ ಸ್ವರ್ಗವನ್ನು ಪಡೆಯುವೆ. ವಿಶೇಷ ವಾಗಿ ಹೇಳುವದೇನು ? ನೀನೇ ನನಗೆ ತಾಯಿಯು, ತಂದೆಯು, ಸಹೋದರನು, ಮಾತುಳನು; ಎಲ್ಲ ಬಳಗವೂ ನೀನೇ, ಎಂದು ತಿಳಿದಿರುವೆನು; ಮತ್ತು ನನ್ನ ಭಕ್ತರಾದ ಪ್ರಹ್ಲಾದನು, ಅಕ್ರೂರನು,, ಧ್ರುವರಾಜನು, ಗಜೇಂದ್ರನು ಉದ್ಧವನು, ಅರ್ಜುನನು, ಬಲಿಚಕ್ರವರ್ತಿಯು ಅಜಾಮಿಳನು ದ್ರೌಪದಿಯು ಇವರೆಲ್ಲರೂ ನೀನೇ ಎಂತಲೂ ತಿಳಿದಿರುವೆನು. ತಾಯಿಯೇ ನಿನಗೆ ಹೇಳಿದ ಈ ಭಕ್ತರೆಲ್ಲರೂ ನನ್ನ ಪ್ರಾಣಕ್ಕೆ ಸಮಾನರಾದವರು; ಇದಲ್ಲದೆ ಇನ್ನೂ ಅನ್ಯ ಭಕ್ತರು ಇರುವರು, ಅವರು ಸಹ ನೀನೇ ಎಂದು ನಿಶ್ಚೈಸಿರುವೆನು; ಆದ್ದರಿಂದ ಈ ಕಾರ್ಯವನ್ನು ಮಾಡು; ನನ್ನ ಕಲ್ಯಾಣಕ್ಕಾಗಿಯೇ ದೇವರು ನಿನ್ನನ್ನು ಹುಟ್ಟಿಸಿರುವನು, ಬಕುಲಾವತಿಯೇ, ಮತ್ತೂ ನಿನಗೆ ಹೇಳುವದೇನಂದರೆ, —ಸಹಸ್ರಕೋಟಿ ಗೋಗಳನ್ನೂ, ಹತ್ತು ಸಹಸ್ರ ಕುದರೆಗಳನ್ನೂ, ಸುವರ್ಣಮಯವಾದ ತಿಲಗಳನ್ನೂ ದಾನಮಾಡುವದರಿಂದ ಬರುವ ಪುಣ್ಯವು ನನ್ನ ಒಂದು ಲಗ್ನವನ್ನು ಮಾಡಿದರೆ ನಿನಗೆ ಬರುತ್ತದೆ; ತಾಯಿಯೇ, ಇದೆಲ್ಲ ಒತ್ತಟ್ಟಿಗಿರಲಿ! ಆಕೆಯನ್ನು ನೀನು ಕಣ್ಮುಟ್ಟ ನೋಡಿದರೆ ಆ ಕನ್ನಿಕೆಯನ್ನು ಎಂದಿಗೂ ಬಿಡಲಿಕ್ಕಿಲ್ಲ; ನಾನು ಹೇಳುವದೆಲ್ಲ ನಿಜವೋ? ಸುಳ್ಳೋ ? ಎಂಬದು ನೀನು ನೋಡಿದ ಬಳಿಕ ತಿಳಿಯುವದು; ” ಎಂದು ಶ್ರೀನಿವಾಸನು ವಿಧವಿಧದಿಂದ ಬಣ್ಣಿಸಿ ಹೇಳಿದನು, ಆಗ ಬಕುಲಾವತಿಯು—“ ಶ್ರೀನಿವಾಸನೇ, ನೀನು ನೋಡಿದ ಆ ಕನ್ನಿಕೆಯು ಎಲ್ಲಿರುವಳು, ಹೋಗುವ ಮಾರ್ಗವನ್ನು ಹೇಳು; ನಿಶ್ಚಯವಾಗಿ ನಿನಗೆ ಆ ಕನ್ಯೆಯ ಘಟನೆಯನ್ನು ಮಾಡಿಸುವೆನು. ಅದಂತಿರಲಿ ! ಆ ಪದ್ಮಾವತಿಯು ಪೂರ್ವಜನ್ಮದಲ್ಲಿ ಯಾರು ? ಮತ್ತು ಈ ಲೋಕದಲ್ಲಿ ಕನ್ನಿಕೆಯಾಗಿ ಯಾಕೆ ಜನಿಸಿರುವಳು ? ಈ ಎಲ್ಲ ವೃತ್ತಾಂತವನ್ನು ನನಗೆ ಹೇಳಬೇಕು ” ಎನಲು, ಶ್ರೀನಿವಾಸನು ಆ ಪದ್ಮಾವತಿಯ ಪೂರ್ವಜನ್ಮದ ವೃತ್ತಾಂತವನ್ನು ಹೇಳತೊಡಗಿದನು,—

ಕೇಳೌ ಬಕುಲಾವತಿಯೇ, ನಾನು ತ್ರೇತಾಯುಗದಲ್ಲಿ ರಾಮನಾಗಿ ಅವತಾರಮಾಡಿ, ದಶರಥರಾಜನ ಆಜ್ಞೆಯಂತೆ ನನ್ನ ಸತಿಯಾದ ಸೀತೆಯಿಂದಲೂ, ತಮ್ಮನಾದ ಲಕ್ಷ್ಮಣನಿಂದಲೂ ಕೂಡಿ ಹೋಗಿ ದಂಡಕಾರಣ್ಯದಲ್ಲಿ ವಾಸಮಾಡಿಕೊಂಡಿದ್ದೆನು. ಆಗ ಲೋಕಕಂಟಕನಾದ ರಾವಣನೆಂಬ ದೈತ್ಯನು, ನನ್ನ

ಹೇಳಿದಂತೆ ಆ ಪದ್ಮಾವತಿಯು ನಿನ್ನ ಭಾಗದವಳೇ ಸರಿ. ಆಕೆಯ ಘಟನೆಯನ್ನು ಮಾಡಿಸುವದಕ್ಕಾಗಿ, ಆಕಾಶರಾಜನಲ್ಲಿಗೆ ಹೋಗುವೆನು;" ಎಂದು ಹೇಳಿದಳು. ಅದಕ್ಕೆ ಸಂತೋಷಪಟ್ಟು ಜಗತ್ಪತಿಯಾದ ಶ್ರೀನಿವಾಸನು ಮಾಯೆಯಿಂದ ಒಂದು ಕುದುರೆಯನ್ನು ನಿರ್ಮಿಸಿ, ಬಕುಲಾವತಿಗೆ ಕೊಡಲು ಅವಳು ಸಂತೋಷದಿಂದ ಅದನ್ನು ಹತ್ತಿಕೊಂಡು ಆಕಾಶರಾಜನ ಪಟ್ಟಣಕ್ಕೆ ಹೋಗುವ ಮಾರ್ಗವನ್ನು ಕೇಳಿದಳು. ಆಗ ಶ್ರೀನಿವಾಸನು—"ಬಕುಲಾವತಿಯೇ, ಈ ಶೇಷಾಚಲದ ಕೆಳಗೆ ಕಪಿಲಋಷಿಯಿಂದ ಪೂಜಿಸಲ್ಪಡುವ "ಕಪಿಲೇಶ್ವರನು" ಇರುತ್ತಾನೆ ಅವನ ಸಮೀಪದಲ್ಲಿ ಕಪಿಲತೀರ್ಥವಿರುವದು. ಆ ತೀರ್ಥದಲ್ಲಿ ನೀನು ಸ್ನಾನ ಮಾಡು, ಆತನ ದರ್ಶನವನ್ನು ತೆಗೆದುಕೋ—"ಕಪಿಲೇಶ್ವರನೇ, ಶ್ರೀನಿವಾಸನು ನಿನಗೆ ನಮಸ್ಕಾರವನ್ನು ಹೇಳಿರುವನು" ಎಂದು ಆತನಿಗೆ ಹೇಳು; ಸ್ವಾಮಿಯೇ, ಶ್ರೀನಿವಾಸನ ವಿವಾಹವನ್ನು ಮಾಡು, ಎಂದು ಅವನಿಗೆ ಪ್ರಾರ್ಥನೆಯನ್ನು ಮಾಡು. ಆ ಮೇಲೆ ಶುಕರ ಆಶ್ರಮಕ್ಕೆ ಹೋಗು, "ಬಾಲಕನಾದ ಶ್ರೀನಿವಾಸನು ನಿಮಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡುವನು" ಎಂದು ಅವರಿಗೆ ಹೇಳು; ಮತ್ತು ಅವನ ಅಭೀಷ್ಟವನ್ನು ಪೂರ್ಣ ಮಾಡಿರಿ, ಎಂದು ಅವರನ್ನು ಬೇಡಿಕೋ. ಅಲ್ಲಿಂದ ಪದ್ಮಸರೋವರಕ್ಕೆ ಹೋಗು; ಅಲ್ಲಿರುವ ರಾಮ-ಕೃಷ್ಣರಿಗೆ ಭಕ್ತಿಯಿಂದ ನಮಸ್ಕಾರವನ್ನು ಮಾಡು. ಆ ಸರೋವರದಲ್ಲಿರುವ ಕಮಲಗಳನ್ನು ತೆಗೆದುಕೊಂಡು ನೀನು ಅವರ ಪೂಜೆಯನ್ನು ಮಾಡು; ಮತ್ತು "ರಾಮ-ಕೃಷ್ಣರೇ, ನಿಮ್ಮ ತಮ್ಮನಾದ ಶ್ರೀನಿವಾಸನು ನಿಮಗೆ ನಮಸ್ಕಾರವನ್ನು ಹೇಳಿರುವನೆಂದು ಹೇಳು; ಆಮೇಲೆ ಸುವರ್ಣಮುಖರೀನದಿಯನ್ನು ದಾಟಿ, ಆಕಾಶರಾಜನ ಪಟ್ಟಣಕ್ಕೆ ಹೋಗು. ಅಲ್ಲಿ ಕನ್ನಿಕೆಯ ದೆಶೆಯಿಂದ ಯೋಗ್ಯವಾದ ವಚನಗಳನ್ನಾಡಿ ಘಟನೆಯನ್ನು ಮಾಡಿಸು" ಎಂದು ಹೇಳಿದನು.

ಆಗ ಬಕುಲಾವತಿಯು ಶ್ರೀನಿವಾಸನಿಂದ ಅಪ್ಪಣೆಯನ್ನು ತೆಗೆದುಕೊಂಡು ಶೇಷಾಚಲವನ್ನು ಇಳಿದು ಮೆಲ್ಲಮೆಲ್ಲನೆ ಮಾರ್ಗವನ್ನು ಕ್ರಮಿಸಿ, ಅವನು ಹೇಳಿದಂತೆ ಆ ಆ ಸ್ಥಳಗಳಿಗೆ ಹೋಗಿ, ಕಾರ್ಯಗಳನ್ನು ನೆರವೇರಿಸಿ, ಸುವರ್ಣಮುಖರೀ ನದಿಯನ್ನು ದಾಟಿ ಅಗಸ್ತ್ಯಾಶ್ರಮಕ್ಕೆ ಬಂದಳು.

ಆಕೆಯು ಅಗಸ್ತ್ಯೇಶ್ವರನ ದರ್ಶನವನ್ನು ತಕ್ಕೊಂಡು, ಅಲ್ಲಿ ಕೆಲವು ಕನ್ನಿಕೆಯರನ್ನು ನೋಡಿದಳು. ಆಗ ಬಕುಲಾವತಿಯು ಅವರಿಗೆ—"ನೀವು ಯಾರು?

ಇಷ್ಟುಮಂದಿ ಇಲ್ಲಿಗೆ ಯಾತಕ್ಕೆ ಬಂದಿರುವಿರಿ ?" ಎಂದು ಕೇಳಲು, ಅದಕ್ಕೆ ಕನ್ನಿಕೆಯರು—" ಅಮ್ಮಾ, ನಾವು ಆಕಾಶರಾಜನ ಪುತ್ರಿಯಾದ ಪದ್ಮಾವತಿಯ ಸಖಿಯರು; ನಿನ್ನಿನ ದಿವಸ ನಾವು ಪದ್ಮಾವತಿಯಿಂದ ಸಹಿತರಾಗಿ ವನಕ್ಕೆ ಹೋಗಿದ್ದೆವು, ಅಲ್ಲಿ ಮನ್ಮಥಾಕಾರನಾದ ಒಬ್ಬ ಪುರುಷನು ಕುದುರೆಯನ್ನೇರಿಕೊಂಡು ನಮ್ಮ ಪದ್ಮಾವತಿಯ ಸಮೀಪಕ್ಕೆ ಬರಲು, ಕಿರಾತರೂಪಿಯಾದ ಆ ಪುರುಷನನ್ನು ಕಂಡು ಅಂಜಿ ಅವಳು ಜ್ವರತಾಪದಿಂದ ಮನೆಯಲ್ಲಿ ಮಲಗಿರುವಳು; ಆದ್ದರಿಂದ ಆಕೆಯ ಜ್ವರಶಾಂತಿಯಾಗುವದಕ್ಕಾಗಿ ರಾಜಾಜ್ಞೆಯಂತೆ ಅಗಸ್ತ್ಯೇಶ್ವರನ ಅಭಿಷೇಕವನ್ನು ಮಾಡಿಸುವದಕ್ಕೆ ಬಂದಿರುವೆವು, ಎಂದು ಹೇಳಿದರು. ಬಕುಲಾವತಿಯು ಮುಂದೆ ನಡೆದ ಎಲ್ಲ ವೃತ್ತಾಂತವನ್ನು ತಿಳಿಯುವ ಇಚ್ಛೆಯಿಂದ ಆ ಕನ್ನಿಕೆಯರನ್ನು ಕುರಿತು—' ಕನ್ನಿಕೆಯರೇ, ಕಿರಾತರೂಪಿಯು ನಿಮ್ಮ ಸಮೀಪದಲ್ಲಿ ಹ್ಯಾಗೆ ಬಂದನು ? ಮುಂದೇನಾಯಿತು ? ಆ ವೃತ್ತಾಂತವನ್ನು ಹೇಳಿರಿ " ಎಂದು ಕೇಳಲು, ಆ ಕನ್ನಿಕೆಯರು ಹೀಗೆ ಹೇಳಿದರು: —

ಕೇಳೌ ತಾಯಿಯೇ, ಒಂದಾನೊಂದು ದಿವಸ ನಾವು ಪದ್ಮಾವತಿಯಿಂದ ಸಹಿತರಾಗಿ ವನಮಧ್ಯದಲ್ಲಿ ಪುಷ್ಪಗಳನ್ನು ತೆಗೆಯುತ್ತಿರಲು, ಆ ಸ್ಥಳಕ್ಕೆ ಒಬ್ಬ ಪುರುಷನು ಅಶ್ವವನ್ನೇರಿ ನಮ್ಮ ಕಡೆಗೆ ಬಂದು, ಪದ್ಮಾವತಿಗೆ ಅವಾಚ್ಯಶಬ್ದಗಳನ್ನಾಡಿದನು; ಆ ವಚನಗಳನ್ನು ಕೇಳಿ ರಾಜಪುತ್ರಿಯು ತಿರುಗಿ ಅವನಿಗೆ ಮಾತನಾಡಿದಳು, ಹೀಗೆ ಉಭಯತರಿಗೂ ವಾದವಿವಾದವಾಗಿ ಕಲಹವು ಬೆಳೆಯಿತು; ಕಡೆಗೆ ನಾವೆಲ್ಲರೂ ಕೂಡಿ, ಆ ಕಿರಾತರೂಪಿಯ ಅಶ್ವವನ್ನು ಕಲ್ಲಿನಿಂದ ಹೊಡೆದು ಕೊಂದು ಬಿಟ್ಟೆವು. ಆಮೇಲೆ ಕಿರಾತರೂಪಿಯು ಭೂಮಿಯಲ್ಲಿ ಬಿದ್ದ ಅಶ್ವವನ್ನು ಬಿಟ್ಟು, ಉತ್ತರದಿಕ್ಕಿನ ಕಡೆಗೆ ಹೊರಟುಹೋದನು. ಬಳಿಕ ಪದ್ಮಾವತಿಯು ಮೂರ್ಛಿತಳಾಗಿ ಭೂಮಿಯಲ್ಲಿ ಬಿದ್ದಳು. ಕೂಡಲೆ ನಾವು ಒಂದು ಯಾನದಲ್ಲಿ ಅವಳನ್ನು ಮಲಗಿಸಿ ಅರಮನೆಗೆ ಕರಕೊಂಡು ಹೋಗಿ, ಆಕಾಶರಾಜನಿಗೆ ಎಲ್ಲ ಸಂಗತಿಗಳನ್ನು ತಿಳಿಸಿದೆವು. ಅವನು ಬೇಗನೆ ಬಂದು ತನ್ನ ಮಗಳನ್ನು ತೊಡೆಯ ಮೇಲೆ ಮಲಗಿಸಿಕೊಂಡು, ಎಷ್ಟು ಮಾತಾಡಿಸಿದರೂ ಮಾತಾಡದೆ ಇರಲು, ದುಃಖದಿಂದ—"ಈ ನನ್ನ ಪುತ್ರಿಗೆ ಏನಾಗಿರಬಹುದು ?" ಎಂದು ಚಿಂತಿಸುತ್ತ, ನಮ್ಮ ಗುರುವಾದ ಬೃಹಸ್ಪತ್ಯಾಚಾರ್ಯರು ಈಕೆಯ ರೋಗವನ್ನು ತಿಳಿಯುವರು,

ಎಂದು ತನ್ನ ಮಗನನ್ನು ಕಳುಹಿ, ಅವರನ್ನು ಕರೆಯಿಸಿದನು. ಗುರುಗಳು ಬಂದ ದ್ದನ್ನು ಕಂಡು ರಾಜನು, ಅವರನ್ನು ಆಸನಾದ್ಯುಪಚಾರಗಳಿಂದ ಸತ್ಕರಿಸಿ, ಭೋಜನವನ್ನು ಮಾಡಿಸಿದನಂತರ ಆಕಾಶರಾಜನು ತನ್ನ ಮಗಳ ವೃತ್ತಾಂತವನ್ನು ಹೇಳಿ, ಇದಕ್ಕೆ ಉಪಾಯವೇನೆಂದು ಕೇಳಿದನು. ಅದಕ್ಕೆ ಬೃಹಸ್ಪತ್ಯಾಚಾರ್ಯರು ರಾಜನನ್ನು ಸಮಾಧಾನಪಡಿಸಿ,—"ನಿನ್ನ ಮಗಳು ವನಕ್ಕೆ ಹೋದಸಮಯದಲ್ಲಿ ಅಲ್ಲಿ ಒಬ್ಬ ಪುರುಷನನ್ನು ನೋಡಿ ಭೀತಳಾಗಿರುವಳು; ಅದಕ್ಕಾಗಿ ಶಾಂತಿಯನ್ನು ಮಾಡತಕ್ಕದ್ದು; ಅಗಸ್ತ್ಯೇಶ್ವರನಿಗೆ ಹನ್ನೊಂದುವೇಳೆ ಅಭಿಷೇಕವನ್ನು ಮಾಡಿಸು, ಅಂದರೆ ನಿನ್ನ ಮಗಳಿಗೆ ಸಮಾಧಾನವಾಗುವದು;" ಎಂದು ಹೇಳಿದರು. ಆಗ ರಾಜನು ನಮ್ಮನ್ನು ಕರೆದು—"ಗುರುಗಳ ಆಜ್ಞೆಯಂತೆ ಅಗಸ್ತ್ಯೇಶ್ವರನ ಅಭಿಷೇಕವನ್ನು ಮಾಡುವ ಬ್ರಾಹ್ಮಣರ ಕೂಡ, ಸರ್ವ ಪೂಜಾಸಾಹಿತ್ಯಗಳನ್ನು ತೆಗೆದುಕೊಂಡು ಹೋಗಿರಿ," ಎಂದು ಹೇಳಿದನು. ರಾಜಾಜ್ಞೆಯಂತೆ ನಾವು ಬ್ರಾಹ್ಮಣರನ್ನು ಕರೆದುಕೊಂಡು, ಇಲ್ಲಿಗೆ ಬಂದಿರುವೆವು;" ಎಂದು ಹೇಳಲು, ಬಕುಲಾವತಿಯು ತನ್ನ ಮನಸ್ಸಿನಲ್ಲಿ—"ಶ್ರೀನಿವಾಸನು ಹೇಳಿದ್ದಕ್ಕೂ, ಇವರು ಹೇಳುವದಕ್ಕೂ ಕೂಡಿತು; ಆದರೆ ಪುರಾಣಪುರುಷನಾದ ಆತನ ಮಹಾತ್ಮ್ಯವನ್ನು ತಿಳಿಯದೆ, ನಾನು ಆ ಪಾಪರಹಿತನಾದ ಹರಿಯನ್ನು ನನ್ನ ಮಗನೆಂದು ತಿಳಿದು ವ್ಯರ್ಥವಾಗಿ ಪುನಃ ಜನಿಸಿದೆನು, ನನ್ನ ಅಜ್ಞಾನಕ್ಕೆ ಧಿಕ್ಕಾರವಿರಲಿ!" ಎಂದು ತನ್ನನ್ನು ತಾನೇ ಹಳಿದುಕೊಂಡಳು. ಆಗ ಕನ್ನಿಕೆಯರು—"ಅಮ್ಮಾ, ನೀನು ಯಾರು? ಎಲ್ಲಿಗೆ ಹೋಗುತ್ತೀ? ನೀನು ಇಲ್ಲಿಗೆ ಬಂದ ಕಾರಣವೇನು? ಎಂದು ಕೇಳಲು, ಆಗ ಬಕುಲಾವತಿಯು—"ಕನ್ನಿಕೆಯರೇ, ನಾನು ವೇಂಕಟಾಚಲವಾಸಿಯಾದ ಶ್ರೀನಿವಾಸನ ಸೇವಕಳು, ಆಕಾಶರಾಜನಪತ್ನಿಯಾದ ಧರಣೀದೇವಿಯ ಬಳಿಯಲ್ಲಿ ನನ್ನ ಕೆಲಸ ವಿರುವದು; ಆದರೆ ನಾನು ಪರಸ್ಥಳವಾಸಿಯು, ನಿಮ್ಮ ರಾಜಧಾನಿಯಾದ ನಾರಾಯಣಪುರವು ದೊಡ್ಡದಿರುವದು, ಅದರಲ್ಲಿ ಪ್ರವೇಶಮಾಡುವದು ನಮ್ಮಂಥವರಿಗೆ ಅಸಾಧ್ಯವು; ಹ್ಯಾಗೂ ನೀವು ಅರಮನೆಗೆ ಹೋಗತಕ್ಕವರು, ಅಂದಮೇಲೆ ನಿಮ್ಮಕೂಡ ನಾನೂ ಅರಮನೆಗೆ ಬರುವೆನು;" ಎಂದು ಹೇಳಿ, ಆ ಕನ್ನಿಕೆಯರೊಡನೆ ಬಕುಲಾವತಿಯು ಆಕಾಶರಾಜನ ಪಟ್ಟಣವನ್ನು ಪ್ರವೇಶ ಮಾಡಿದಳು.

ಇತ್ತ ಶ್ರೀನಿವಾಸನು ಬಕುಲಾವತಿಯನ್ನು ಆಕಾಶರಾಜನ ಪಟ್ಟಣಕ್ಕೆ ಕಳುಹಿ ತನ್ನ ಮನಸ್ಸಿನಲ್ಲಿ—"ಈ ಬಕುಲಾವತಿಯಿಂದ ನನ್ನ ಕಾರ್ಯವು ಪೂರ್ಣವಾಗಲಿಕ್ಕಿಲ್ಲ; ಯಾಕಂದರೆ, ಆಕಾಶರಾಜನೇ ಮೊದಲಾದವರು ಆಕೆಯ ಮಾತಿನಮೇಲೆ ವಿಶ್ವಾಸವಿಡಲಿಕ್ಕಿಲ್ಲ, ಮತ್ತು ಆ ರಾಜಮಂದಿರದಲ್ಲಿ ಆಕೆಯನ್ನು ಯಾರೂ ಮಾತಾಡಿಸಲಿಕ್ಕಿಲ್ಲ ಸಹ; "ಒಬ್ಬ ಮಗನು ಮಗನಲ್ಲ; ಒಂದು ಕಣ್ಣು ಕಣ್ಣಲ್ಲ; ಸ್ತ್ರೀಯರು ಮಾಡುವ ಕಾರ್ಯವು ಫಲಪ್ರದವಾಗುವದಿಲ್ಲ." ಎಂಬ ವಾಕ್ಯದಂತೆ ಹೆಂಗಸಾದ ಬಕುಲಾವತಿಯಿಂದ ಈ ಕಾರ್ಯವು ಆಗುವದಿಲ್ಲ"ವೆಂದು ಖಂಡಿತವಾಗಿ ನಿರ್ಣಯಿಸಿ, ಮಾಯಾವಿಯಾದ ಶ್ರೀನಿವಾಸನು ಕೊರವಂಜಿಯ ರೂಪವನ್ನು ಆ ಕ್ಷಣದಲ್ಲಿಯೇ ಧರಿಸಿದನು.

ಹ್ಯಾಗೆಂದರೆ—ನಾರವಸ್ತ್ರವನ್ನುಟ್ಟನು, ಹರಕಕುಪ್ಪಸವನ್ನು ತೊಟ್ಟುಕೊಂಡನು, ತನ್ನ ತಲೆಯಮೇಲಿನ ಕೇಶಗಳನ್ನು ಹರವಿ, ಅಯ್ದುನೂರು ವರುಷದ ಮುದುಕಿಯಂತೆ ಆದನು, ಕೆಂಪುಮಣಿಗಳಿಂದಲೂ, ಬಿಳಿಮಣಿಗಳಿಂದಲೂ ಯುಕ್ತವಾದ ಹಾರಗಳನ್ನು ಕೊರಳಲ್ಲಿ ಧರಿಸಿಕೊಂಡನು, ಲಂಬೋದರಿಯಾಗಿಯೂ, ದೊಡ್ಡ ಕಿವಿಗಳುಳ್ಳವಳಾಗಿಯೂ, ಜೋತಾಡುತ್ತಿರುವ ಮೊಲೆಗಳುಳ್ಳವಳಾಗಿಯೂ, ಬಾಯೊಳಗೆ ಒಂದಾದರೂ ಹಲ್ಲುಗಳಿಲ್ಲದೆ, ಶುಷ್ಕವಾದ ಮುಖವುಳ್ಳವಳಾಗಿಯೂ ಇರುವ ವೃದ್ಧಳಾದ ಕೊರವಂಜಿಯ ರೂಪವನ್ನು ಧರಿಸಿದನು. ತನ್ನ ನಾಭಿಕಮಲದಲ್ಲಿ ಉತ್ಪನ್ನನಾದ ಬ್ರಹ್ಮನನ್ನು ಏಳುತಿಂಗಳ ಕೂಸನ್ನಾಗಿ ಮಾಡಿಕೊಂಡನು. ಆ ಕೂಸು ಸರ್ವದಾ ರೋದನ ಮಾಡುತ್ತಿರುವದು, ಎರೆಯದೆ ಎಷ್ಟೋ ದಿವಸಗಳಾದಂತೆ ಒಣಗಿದ ಮೋರೆಯುಳ್ಳದ್ದಾಗಿರುವದು, ಕೃಶವಾದ ಶರೀರವುಳ್ಳದ್ದೂ ಉದ್ದವಾದ ಕೈಗಳುಳ್ಳದ್ದೂ ಇರುವದು; ಇಂಥ ಕೂಸನ್ನು ತನ್ನ ಹರಕು ಅರಿವೆಯಲ್ಲಿ ಕಟ್ಟಿಕೊಂಡನು, ಜಗದಾಧಾರವಾದ ಬ್ರಹ್ಮಾಂಡವನ್ನೇ ತನ್ನ ತಲೆಯಮೇಲಿನ ಬುಟ್ಟಿಯನ್ನು ಮಾಡಿಕೊಂಡನು. ಆ ಬುಟ್ಟಿಯಲ್ಲಿ ನವಧಾನ್ಯಗಳನ್ನು ತುಂಬಿದನು. ಶಂಕರನನ್ನು ತನ್ನ ಕೈಯೊಳಗಿನ ಕೋಲನ್ನು ಮಾಡಿಕೊಂಡನು, "ತನಗೆ ಧರ್ಮದೇವತೆ"ಯೆಂಬ ಹೆಸರನ್ನಿಟ್ಟುಕೊಂಡನು.

ಈ ಪ್ರಕಾರ ಜಗದೀಶ್ವರನಾದ ಶ್ರೀನಿವಾಸನು ಕೊರವಂಜಿಯಾಗಿ ಪದಗಳನ್ನು ಹಾಡುತ್ತ ನೃತ್ಯವನ್ನು ಮಾಡುತ್ತ ನಾರಾಯಣಪುರದಲ್ಲಿ ಪ್ರವೇಶಮಾಡಿ

"ಸ್ತ್ರೀಯರೇ, ನಿಮಗೆ ಪುತ್ರರಾಗುವದನ್ನು ಹೇಳಬಲ್ಲೆನು, ಕನ್ಯೆಯರಿಗೆ ಪತಿಗಳಾಗುವದನ್ನು ಹೇಳಬಲ್ಲೆನು, ನಿಮ್ಮ ಮನದೊಳಗಿನ ಕಾರ್ಯಗಳನ್ನು ಹೇಳಬಲ್ಲೆನು, ನಾನು ಸರ್ವವನ್ನೂ ಹೇಳಬಲ್ಲೆನು;" ಎಂದು ಬೀದಿ ಬೀದಿಗಳಲ್ಲಿ ಹೇಳುತ್ತ ಬರುತ್ತಿದ್ದಳು. ಆ ಕೊರವಂಜಿಯ ಮಾತುಗಳನ್ನು ಕೇಳಿ, ಒಬ್ಬ ಸ್ತ್ರೀಯು ತನ್ನ ಮನಸ್ಸಿನಲ್ಲಿ—"ನಮ್ಮ ರಾಜಪುತ್ರಿಯಾದ ಪದ್ಮಾವತಿಯು ಜ್ವರದಿಂದ ಮಲಗಿರುವಳು, ಆ ರಾಜಪುತ್ರಿಯ ವಿಷಯದಲ್ಲಿ ಈ ಕೊರವಂಜಿಯು ಹೇಳಬಲ್ಲಳು; ಅಂದ ಮೇಲೆ ಈ ವರ್ತಮಾನವನ್ನು ನಮ್ಮ ರಾಜಪತ್ನಿಗೆ ತಿಳಿಸಬೇಕು" ಎಂದು ಯೋಚಿಸಿ ಅರಮನೆಗೆ ಬಂದು, ಧರಣೀದೇವಿಗೆ—"ಅಮ್ಮಾ, ರಾಜಪತ್ನಿಯೇ, ಬದರಿಕಾಶ್ರಮದಿಂದ ಧರ್ಮದೇವತೆಯೆಂಬ ಹೆಸರಿನ ಒಬ್ಬ ಕೊರವಂಜಿಯು ಇಲ್ಲಿಗೆ ಬಂದಿರುವಳು, ಆಕೆಯು ಮಹಾಜ್ಞಾನವಂತಿಯೆಂಬದಾಗಿ ತೋರುವದು; ಯಾಕಂದರೆ ಅವಳು "ಜನರ ಮನಸ್ಸಿನೊಳಗಿನ ಎಲ್ಲ ಮಾತುಗಳನ್ನು ಹೇಳಬಲ್ಲೆನು; ಭೂತ ಭವಿಷ್ಯದ್ವರ್ತಮಾನಗಳನ್ನು ಹೇಳಬಲ್ಲೆನೆಂ"ದು ಸಾರುತ್ತಿರುವಳು; ಆದ್ದರಿಂದ ರಾಜಪುತ್ರಿಯ ವಿಷಯದಲ್ಲಿ ಕೇಳತಕ್ಕದ್ದಿದ್ದರೆ ಕೇಳಬಹುದು;" ಎಂದು ಹೇಳಿದಳು. ಆ ಸ್ತ್ರೀಯ ಮಾತನ್ನು ಕೇಳಿ ಧರಣೀದೇವಿಯು ಕೂಡಲೆ ತನ್ನ ಸಖಿಯರನ್ನು ಕರೆದು,—"ಸಖಿಯರೇ, ಶೀಘ್ರವಾಗಿ ಆ ಕೊರವಂಜಿಯನ್ನು ಇಲ್ಲಿಗೆ ಕರೆದುಕೊಂಡು ಬರುವದು" ಎಂದು ಆಜ್ಞಾಪಿಸಲು, ಆ ಸ್ತ್ರೀಯರು ಹೋಗಿ ಆ ಧರ್ಮದೇವಿಗೆ ರಾಜಪತ್ನಿಯ ಆಜ್ಞೆಯನ್ನು ತಿಳಿಸಿದರು. ಆ ಧರ್ಮದೇವಿಯು—"ಅಮ್ಮಾ, ರಾಜಪತ್ನಿಯ ಸಖಿಯರೇ, ನೀವು ಹೇಳಿದಂತೆ ನಾನು ಅರಮನೆಗೆ ಬರಬೇಕು; ಆದರೆ, ನಾನು ದರಿದ್ರಳೂ, ಕುರೂಪಿಯೂ ಇದ್ದೇನೆ, ಆ ರಾಜಪತ್ನಿಯು ಐಶ್ವರ್ಯವಂತಳು. ಅಂದಮೇಲೆ ಅಲ್ಲಿಗೆ ಹ್ಯಾಗೆ ಬರಲಿ! ನಾನು ಉಟ್ಟತೊಟ್ಟ ವಸ್ತ್ರಗಳನ್ನೂ, ನನ್ನ ಈ ಕೂಸನ್ನೂ, ನನ್ನ ಕೊರಳಲ್ಲಿರುವ ಗುಂಜಾಮಣಿಗಳ ಹಾರಗಳನ್ನೂ, ಬುಟ್ಟಿಯನ್ನೂ ನೋಡಿ ನನಗೆ ಚೇಷ್ಟೆಯನ್ನು ಮಾಡುವದಕ್ಕಾಗಿ ಕರೆಕಳಿಸಿರಬಹುದೆಂದು ನಾನು ತಿಳಿಯುತ್ತೇನೆ, ಆದಕಾರಣ ಅರಮನೆಗೆ ಬರುವದಿಲ್ಲ" ಎಂದು ಹೇಳಿದಳು. ಆಗ ಆ ಸ್ತ್ರೀಯರು ಹೋಗಿ, ರಾಜಪತ್ನಿಗೆ ಧರ್ಮದೇವಿಯು ನುಡಿದ ಮಾತುಗಳನ್ನು ಹೇಳಲು, ಆಗ ಧರಣೀದೇವಿಯು ತಾನೇ ಆ ಧರ್ಮದೇವಿಯ ಬಳಿಗೆ ಬಂದು,—"ಅಮ್ಮಾ, ಮಂಗಳಪ್ರದಾಯಕಿಯೇ, ಮಹಾಭಾಗ್ಯಶಾಲಿನಿಯೇ, ಧರ್ಮದೇವತೆಯೇ, ನೀನು ಪ್ರತ್ಯ

ಕ್ಷವಾಗಿ ಧರ್ಮಾಭಿಮಾನವುಳ್ಳ ದೇವಿಯಾಗಿರುವೆ; ಎಂದು ಮುಖವನ್ನು ನೋಡಿ ದಾಕ್ಷಣವೇ ನನಗೆ ತಿಳಿಯಿತು; ಆದ್ದರಿಂದ ನನ್ನ ಗೃಹಕ್ಕೆ ಬಾರಮ್ಮಾ, ದೇವಿಯೆ ಕಲ್ಯಾಣವರ್ಧಕಳೇ, ನಮ್ಮ ಸುದೈವದಿಂದ ನೀನು ಅನಾಯಾಸವಾಗಿ ಇಲ್ಲಿಗೆ ಬಂದಿ ರುವೆ." ಎಂದು ರಾಜಪತ್ನಿಯು ಒಳ್ಳೇ ಮಾತುಗಳನ್ನಾಡಿದಳು. ಅದಕ್ಕೆ ಧರ್ಮ ದೇವತೆಯು—"ಪತಿವ್ರತೆಯೇ, ನಿನ್ನ ಮಾತಿನಂತೆ ರಾಜಗೃಹಕ್ಕೆ ಬರುವೆನು; ಆದರೆ ನಾನು ಆಗುವದನ್ನು ಸತ್ಯವಾಗಿ ಹೇಳುವೆನು; ಒಂದುವೇಳೆ ನಾನು ಹೇಳುವ ಮಾತು ಸುಳ್ಳಾದರೆ, ನನ್ನನ್ನು ಪಟ್ಟಣದಿಂದ ಹೊರಗೆ ಹಾಕಿಸಿ, ನನ್ನ ಕೈಗಳನ್ನು ಕಡಿದುಹಾಕಿಸು. ನನ್ನ ವಾಕ್ಯವು ಮಹಾ ಕಠಿಣವಾದಂಥಾದ್ದೆಂದು ತಿಳಿ, ಆಮೇಲೆ ಈ ಕೆಟ್ಟ ಕೊರವಿಯು ಎಂಥ ದುಷ್ಟ ಮಾತುಗಳನ್ನು ಆಡಿದಳೆಂದು ಮನಸ್ಸಿನಲ್ಲಿ ನೊಂದುಕೊಂಡೀ ? ನೋಡು ! ಇದ್ದ ಮಾತನ್ನು ಇದ್ದಹಾಗೆ ಹೇಳುವೆನು; ರಾಜ ಪತ್ನಿಯೇ, ನಾನು ಅಂಥ ಇಂಥ ಕೊರವಂಜಿಯಲ್ಲ, ಸಂಪದ್ಯುಕ್ತನಾದ ನರನಾರಾ ಯಣನು ನನಗೆ ಪತಿಯು, ಆತನಿಂದಲೇ ಉತ್ಪನ್ನನಾದ ಈ ನನ್ನ ಪುತ್ರನಿಗೆ ಪ್ರಜಾಪತಿಯೆನ್ನುವರು; ಮತ್ತು ಆತನ ಆಜ್ಞೆಯಿಂದಲೇ ಇಲ್ಲಿಗೆ ಬಂದಿರುವೆನು, ನಾನು ಎಲ್ಲ ಸಂಗತಿಗಳನ್ನೂ ಬಲ್ಲೆನು," ಎಂದು ಹೇಳಲು, ಧರಣೀದೇವಿಯು— ಹಾಗೇಆಗಲಿ, ನನ್ನ ಗೃಹಕ್ಕೆಬರಬೇಕು" ಎಂದು ಹೇಳಿ, ಆಕೆಯನ್ನು ಕರೆದು ಕೊಂಡು ಅರಮನೆಗೆ ಬಂದಳು.

ರಾಜಪತ್ನಿಯು ಆ ಧರ್ಮದೇವತೆಗೆ ಒಂದು ರತ್ನಮಯವಾದ ಪೀಠವನ್ನು ಹಾಕಿ ಅದರಮೇಲೆ ಕೂಡ್ರಿಸಿ, ಉಪಚರಿಸಿದಳು. ಆಗ ಧರ್ಮದೇವತೆಯು— "ಧರಣೀದೇವಿಯೇ, ಈಗ ನೀನು ಸ್ನಾನವನ್ನು ಮಾಡಿ, ಶುಭ್ರವಾದ ವಸ್ತ್ರ ವನ್ನುಟ್ಟು, ಕುಪ್ಪಸವನ್ನು ತೊಟ್ಟುಕೊಂಡು, ಗುರುಗಳಿಗೆ ನಮಸ್ಕಾರವನ್ನು ಮಾಡಿ, ನಿನ್ನ ಮನಸ್ಸಿನೊಳಗಿದ್ದದ್ದನ್ನು ಕೇಳಲಿಕ್ಕೆ ಬಾ"ಎಂದು ಹೇಳಿದಳು. ಧರಣೀದೇವಿಯು ಆಕೆ ಹೇಳಿದಂತ ಮಾಡಿಕೊಂಡು ಬಂದು, ಧರ್ಮದೇವಿಯ ಸಮ್ಮುಖದಲ್ಲಿ ಕುಳಿತುಕೊಂಡು,—"ಅಮ್ಮಾ ಧರ್ಮದೇವಿಯೇ, ಇನ್ನು ಮೇಲೆ ಏನುಮಾಡಬೇಕು" ಎಂದು ಕೇಳಿದಳು. ಧರ್ಮದೇವಿಯು—ಶುಭವದನೆಯೇ, ಈಗ ನಮ್ಮ ಪುರಾತನರಾದ ದೇವತೆಗಳಗೋಸ್ಕರ ಬಂಗಾರದ ಮರದಲ್ಲಿ ಮುತ್ತು ಗಳನ್ನು ತುಂಬಿ ನನ್ನ ಮುಂದೆ ಇಡು" ಎಂದು ಹೇಳಲು, ರಾಜಪತ್ನಿಯು ಕೂಡಲೆ ಮುತ್ತುಗಳಿಂದ ತುಂಬಿದ ಮರವನ್ನು ಅವಳ ಮುಂದೆ ಇಟ್ಟು—"ಧರ್ಮದೇವ

ತೆಯೇ, ಇನ್ನುಮೇಲೆ ನನ್ನ ಮನಸ್ಸಿನಲ್ಲಿರುವದನ್ನು ಸತ್ಯವಾಗಿ ಹೇಳು" ಎನ್ನಲು ಧರ್ಮದೇವಿಯು—"ರಾಜಪತ್ನಿಯೇ, ನಾನು ಸತ್ಯವಾಗಿ ಹೇಳುತ್ತೇನೆ, ನನ್ನ ಕೂಸಿಗೆ ಹಗಲಿನಲ್ಲಿ ಅಥವಾ ರಾತ್ರಿಯಲ್ಲಿ ಮಾಡಿದ ಸ್ವಲ್ಪ ಅನ್ನವಿದ್ದರೆ ಕೊಡು" ಎಂದು ಕೇಳಲು, ಆ ಕ್ಷಣದಲ್ಲಿಯೇ ಎದ್ದು ಧರಣೀ ದೇವಯು ಒಂದು ಬಂಗಾರದ ಪಾತ್ರೆಯಲ್ಲಿ ಉತ್ತಮವಾದ ಕ್ಷೀರಾನ್ನವನ್ನು ತಂದು ಆ ಕೂಸಿಗೆ ಕೊಟ್ಟಳು. ಆ ಶಿಶುರೂಪಿಯಾದ ಬ್ರಹ್ಮನು ಮನುಷ್ಯರಿಂದ ಮಾಡಿದ ಅನ್ನವನ್ನು ಭೋಜನ ಮಾಡದೆ ಅಳಹತ್ತಿದನು. ಆಗ ಧರ್ಮದೇವಿಯು ಅಳುತ್ತಿರುವ ತನ್ನ ಕೂಸಿಗೆ—"ಛೇ ! ದುರಾಚಾರಿಯೇ, ದುರ್ಬುದ್ಧಿಯೇ, ಕಂದ-ಮೂಲ-ಫಲಗಳನ್ನು ತಿನ್ನುವ ನೀನು ಅಮೃತದಂತಿರುವ ಕ್ಷೀರಾನ್ನವನ್ನು ಹ್ಯಾಗೆ ತಿನ್ನುವೆ ? ಎಂದು ಆ ಕೂಸಿಗೆ ಬೈದು ರಾಜಪತ್ನಿಗೆ—ಅವ್ವಾ, ಈ ಕೂಸು ತಿನ್ನದೆ ಉಣ್ಣದೆ ಸರ್ವಕಾಲದಲ್ಲಿ ಹೀಗೆ ಅಳುತ್ತದೆ, ಹ್ಯಾಗೆ ಮಾಡಲಿ ? ಒಳ್ಳೇದು ಈ ಅನ್ನವನ್ನು ನಾನೇ ಉಣ್ಣುವೆನು; ಅಂದರೆ ನನ್ನ ಮೊಲೆಗಳಲ್ಲಿ ಹಾಲು ಬಂದರೆ ಕುಡಿದು ಸುಮ್ಮನಾಗುವದು;" ಎಂದು ಹೇಳಿ ಆ ಧರ್ಮದೇವಿಯು ರಾಜಾನ್ನವನ್ನು ತಾನೇ ಭಿಡೆಯಿಲ್ಲದೆ ಭೋಜನ ಮಾಡಿದಳು. ಹಾಗು ಸ್ವಸ್ಥ ಚಿತ್ತದಿಂದ—"ಧರಣೀದೇವಿಯೇ, ಸತ್ಯವಾಗಿ ಹೇಳುತ್ತೇನೆ, ನನಗೆ ಸ್ವಲ್ಪ ತಾಂಬೂಲವನ್ನು ಕೊಡು" ಎಂದು ಕೇಳಲು ಧರಣೀ ದೇವಿಯು—ಅವ್ವಾ, ತಿರುತಿರುಗಿ ಬೇಡುವ ಈ ಕೊರವಿಯರ ನಡತೆಯು ನನಗೆ ತಿಳಿದದ್ದೇ ಅದೆ;" ಎಂದು ಎದ್ದು ಹೋಗಿ ಯಾಲಕ್ಕಿ, ಲವಂಗ, ಜಾಜೀಕಾಯಿ, ಪತ್ರಿಗಳಿಂದ ಕೂಡಿದ ತಾಂಬೂಲವನ್ನು ಕೊಟ್ಟಳು. ಅದನ್ನು ಮೆಲ್ಲುತ್ತ ಕೊರವಂಜಿಯು ಪೂರ್ವಾಭಿಮುಖವಾಗಿ ಕುಳಿತುಕೊಂಡು, ತನ್ನ ಪುತ್ರನನ್ನು ತೊಡೆಯ ಮೇಲೆ ಕೂಡ್ರಿಸಿಕೊಂಡು ಸಮ್ಮುಖದಲ್ಲಿ ತನ್ನ ಬುಟ್ಟಿಯನ್ನು ಇಟ್ಟು, ಕಾಲುಗಳನ್ನು ಚಾಚಿಕೊಂಡು ಕುಳಿತಳು. ಈ ಪ್ರಕಾರ ಕೊರವಂಜಿಯ ರೂಪವನ್ನು ಧರಿಸಿದ ಶ್ರೀನಿವಾಸನನ್ನು ನೋಡಬೇಕೆಂಬ ಲವಲವಿಕೆಯಿಂದ ಸರ್ವ ದೇವತೆಗಳು ವಿಮಾನಾರೂಢರಾಗಿ, ತಮ್ಮ ತಮ್ಮ ಸ್ತ್ರೀಯರಿಂದ ಸಹಿತವಾಗಿ ಬಂದು, ದೇವಾಧಿದೇವನ ಸ್ತ್ರೀರೂಪವನ್ನು ಕಂಡು ಸಂತೋಷಪಟ್ಟು, ತಮ್ಮ ತಮ್ಮೊಳಗೆ—"ಈ ಜನ್ಮದಲ್ಲಿ ಆಕಾಶರಾಜನು ಏನು ಪುಣ್ಯವನ್ನು ಮಾಡಿದನೋ, ಏನೋ! ಸಾಕ್ಷಾತ್ ಶ್ರೀಹರಿಯು ಇವನ ಗೃಹದಲ್ಲಿ ಪ್ರಾಕೃತ ಮನುಷ್ಯನಂತೆ ಕ್ರೀಡಿಸುವನು;"

ಎಂದು ಕೊಂಡಾಡುತ್ತಿದ್ದರು. ಜನಕರಾಜನೇ, ಕಲಿಯುಗದಲ್ಲಿ ಪಾಪಿಷ್ಟರಾದ ಜನರ ಉದ್ಧಾರ ಮಾಡುವದಕ್ಕಾಗಿ ಶ್ರೀಹರಿಯು ಈ ಪ್ರಕಾರ ಲೀಲೆಯನ್ನು ಮಾಡುತ್ತಿರುವನು.

॥ ಇತಿ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿ ಶ್ರೀವೇಂಕಟೇಶ ಮಾಹಾತ್ಮ್ಯ ದಲ್ಲಿ "ಶ್ರೀನಿವಾಸ ಪುಳಿಂದಿನಿ"ಯೆಂಬ ೮ನೆಯ ಅಧ್ಯಾಯವು ಮುಗಿದುದು ॥

---

# ೯ನೆಯ ಅಧ್ಯಾಯ

ಶತಾನಂದ ಋಷಿಗಳು ಹೇಳುತ್ತಾರೆ,—ಕೇಳೈ ಜನಕರಾಜನೇ, ಆ ಧರ್ಮ ದೇವತೆಯು ಪೂರ್ವಾಭಿಮುಖವಾಗಿ ಕುಳಿತುಕೊಂಡು, ತನ್ನ ವಂಶದಲ್ಲಿ ಪೂಜಿತ ರಾದ ದೇವತೆಗಳ ಸ್ಮರಣೆಯನ್ನು ಮಾಡತೊಡಗಿದಳು. ಅವಿಯಲ್ಲಿ ನಾರಾ ಯಣನನ್ನು ಧ್ಯಾನಿಸಿದಳು; ಅನಂತರ ಲಕ್ಷ್ಮಿಯನ್ನೂ, ಬ್ರಹ್ಮನನ್ನೂ, ಸರ ಸ್ವತಿಯನ್ನೂ, ರುದ್ರನನ್ನೂ, ಪಾರ್ವತಿಯನ್ನೂ, ಇಂದ್ರನನ್ನೂ, ಶಚಿಯನ್ನೂ, ಗರುಡನನ್ನೂ, ಆದಿಶೇಷನನ್ನೂ, ವರಾಹಮೂರ್ತಿಯನ್ನೂ, ಚಂಡೀಶನನ್ನೂ, ಕುಬೇರನನ್ನೂ ಅಗ್ನಿ-ವಾಯು-ವರುಣರನ್ನೂ, ವಾಸುಕಿಯನ್ನೂ, ನಾರದಾದಿ ಋಷಿಗಳನ್ನೂ, ಪಿತೃಗಳನ್ನೂ, ಗಂಧರ್ವರನ್ನೂ. ನಳ ಮೊದಲಾದ ರಾಜಶ್ರೇಷ್ಠ ರನ್ನೂ, ಕಾಶೀ ಕ್ಷೇತ್ರಕ್ಕೆ ಸ್ವಾಮಿಯಾದ ವಿಶ್ವೇಶ್ವರನನ್ನೂ, ಬಿಂದುಮಾಧವ ನನ್ನೂ, ವಿಷ್ಣುಪಾದವನ್ನೂ, ಗಂಗಾ-ಯಮುನಾ-ಸರಸ್ವತಿಗಳನ್ನೂ. ಗೋದಾ ವರೀ ತೀರದಲ್ಲಿ ವಾಸಿಸುವ ರಾಮಚಂದ್ರನನ್ನೂ, ತ್ರ್ಯಂಬಕೇಶ್ವರನನ್ನೂ, ನಾರಸಿಂಹನನ್ನೂ, ಜಗನ್ನಾಥನನ್ನೂ, ಭೀಮಾತೀರದ ನಿವಾಸಿಯಾದ ಪಾಂಡು ರಂಗನನ್ನೂ, ಪಂಪಾಧ್ಯಕ್ಷನಾದ ವಿರೂಪಾಕ್ಷನನ್ನೂ, ಪುಣ್ಯಕರವಾದ ವನಗ ಳುಳ್ಳ ಶ್ರೀಶೈಲ ಪರ್ವತವನ್ನೂ, ಆ ಪರ್ವತದಲ್ಲಿರುವ ಮಲ್ಲಿಕಾರ್ಜುನನನ್ನೂ, ಭ್ರಮರಾಂಬಿಕೆಯನ್ನೂ, ಸಂಪನ್ಮುಕ್ತವಾದ ವೇಂಕಟಾಚಲಕ್ಕೆ ಸ್ವಾಮಿಯಾದ ವೇಂಕಟೇಶನನ್ನೂ, ಕಾಲಹಸ್ತೀಶ್ವರನನ್ನೂ, ಘಟಿಕಾಚಲದಲ್ಲಿರುವ ಚತುರ್ಭುಜ ನಾದ ಆಂಜನೇಯನನ್ನೂ. ವೃದ್ಧಾಚಲವಾಸಿಯಾದ ಶ್ರೀ ವಿಷ್ಣುವನ್ನೂ, ಕಂಚೀ

ಕ್ಷೇತ್ರದಲ್ಲಿರುವ ವರದರಾಜನನ್ನೂ, ಶ್ವೇತರೂಪಿಯಾದ ಶ್ರೀ ರಂಗನಾಥನನ್ನೂ, ಕುಂಭಕೋಣದಲ್ಲಿ ವಾಸಿಸುವ ಕುಂಭೇಶ್ವರನನ್ನೂ, ಮಧುರೆಯಲ್ಲಿರುವ ಕೃಷ್ಣನನ್ನೂ, ಶಾರ್ಙ್ಗಪಾಣಿಯನ್ನೂ, ರಾಮಚಂದ್ರನು ಕಟ್ಟಿಸಿದ ಸೇತುವೆಯನ್ನೂ, ಅನಂತಶಯನದಲ್ಲಿರುವ ಪದ್ಮನಾಭನನ್ನೂ, ಸುಬ್ರಹ್ಮಣ್ಯನನ್ನೂ, ಕುಮಾರಸ್ವಾಮಿಯನ್ನೂ, ಮಧುಸೂದನನನ್ನೂ, ಶಂಕರನನ್ನೂ, ಚಂದ್ರನಿಂದ ಪ್ರತಿಷ್ಠಿತನಾದ ಚಂದ್ರಮೌಳೀಶ್ವರನನ್ನೂ, ಗೋಕರ್ಣೇಶ್ವರನನ್ನೂ ತುಂಗಭದ್ರಾತೀರನಿವಾಸಿಯಾದ ಹರಿಹರೇಶ್ವರನನ್ನೂ, ವಿಯದ್ಗಂಗೆಯನ್ನೂ ಪಾತಾಳಗಂಗೆಯನ್ನೂ, ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿಗಳೆಂಬ ಏಳು ನಾಮಗಳಿಂದ ಹರಿಯುತ್ತಿರುವ ಸಪ್ತಗೋದಾವರಿಯನ್ನೂ, ಕೃಷ್ಣಾನದಿಯನ್ನೂ, ಮಲಾಪಹಾರಿಯನ್ನೂ, ತುಂಗಭದ್ರೆಯನ್ನೂ, ಸಹ್ಯಾದ್ರಿಯಲ್ಲಿ ಉತ್ಪನ್ನಳಾದ ಕಾವೇರಿಯನ್ನೂ, ಮಲಯಾಚಲದಲ್ಲಿ ಉತ್ಪನ್ನಳಾದ ಕಪಿಲಾ ನದಿಯನ್ನೂ, ನಂದಿಪರ್ವತದಲ್ಲಿ ಉತ್ಪನ್ನಳಾದ ಕ್ಷೀರನದಿಯನ್ನೂ, ಸುವರ್ಣಮುಖರೀ ನದಿಯನ್ನೂ, ಮೂಕಾಂಬಿಕೆಯನ್ನೂ, ಭೈರವನನ್ನೂ, ಕಾಲಭೈರವನನ್ನೂ, ಕಂಚಿಯಲ್ಲಿರುವ ಕಾಮಾಕ್ಷಿಯನ್ನೂ; ವಿಶಾಲಾಕ್ಷಿಯನ್ನೂ, ವರಪ್ರದಳಾದ ಹಿಮಾಚಲದಲ್ಲಿರುವ ಕಮಲಾಕ್ಷಿಯನ್ನೂ, ಕರವೀರಪುರವಾಸಿನಿಯಾದ ಮಹಾಲಕ್ಷ್ಮಿಯನ್ನೂ ಕ್ರಮವಾಗಿ ಧ್ಯಾನ ಮಾಡಿ ನನ್ನನ್ನು ಸಂರಕ್ಷಿಸಿರೆಂದು ಬೇಡಿಕೊಂಡಳು.

ಅನಂತರ ಧರ್ಮದೇವಿಯು— ಧರಣೀದೇವಿಯೇ, ನನ್ನ ಮಾತನ್ನು ನೆಟ್ಟಗೆ ಕೇಳು. ಇಕೋ, ನನಗೆ ಆಧಾರವಾಗಿರುವ ನನ್ನ ಬುಟ್ಟಿಯ ಆಣೆಯಾಗಿಯೂ, ನನ್ನ ಕೂಸಿನ ಆಣೆಯಾಗಿಯೂ, ಬದರಿಕಾಶ್ರಮದಲ್ಲಿರುವ ನನ್ನ ಪತಿಯ ಆಣೆಯಾಗಿಯೂ, ನನ್ನ ತಾಯಿ, ತಂದೆ, ಗುರುಗಳ ಆಣೆಯಾಗಿಯೂ ಹೇಳುತ್ತೇನೆ. ನನ್ನ ಮಾತು ಸತ್ಯವೆಂದು ನಂಬು. ರಾಜಪತ್ನಿಯೇ ನನಗೆ ಇನ್ನೊಮ್ಮೆ ತಾಂಬೂಲವನ್ನು ಕೊಡು," ಎಂದು ಕೇಳಲು, ಧರಣೀದೇವಿಯು ಬೇಸರಿಯದೆ ಮತ್ತೆ ತಾಂಬೂಲವನ್ನು ಕೊಟ್ಟಳು.— ಧರ್ಮದೇವಿಯೇ, ಇನ್ನು ಮೇಲೆ ತಿರುತಿರುಗಿ ಬೇಡುವ ಈ ಕೊರವಿಯರ ನಡತೆಯನ್ನು ಬಿಡು, ಸುಮ್ಮನೆ ಮಾತಿನಿಂದ ವೇಳೆಗಳೆಯಬೇಡ, ನನ್ನ ಮನಸ್ಸಿನೊಳಗಿದ್ದದ್ದನ್ನು ಬೇಗನೆ ಹೇಳು;" ಎಂದು ಕೇಳಲು, ಆಗ ಕೊರವಂಜಿಯು ಹೇಳತೊಡಗಿದಳು,—

"ಅಮ್ಮಾ ರಾಜಪತ್ನಿಯೇ, ನಾನು ಸತ್ಯವಾಗಿ ಹೇಳುತ್ತೇನೆ," ಎಂದು ತನ್ನ ಕೈಯಲ್ಲಿರುವ ಕೋಲನ್ನು ತನ್ನ ಹಣೆಗೆ ಹಿಡಿದು,— ಧರಣೀದೇವಿಯೇ, ನಿನ್ನ ಮನಸ್ಸಿನಲ್ಲಿ "ನನ್ನ ಮಗಳಾದ ಪದ್ಮಾವತಿಯು ಜ್ವರದಿಂದ ಮಾತಾಡದೆ ಮಲಗಿರುವಳಲ್ಲ! ಅವಳು ಹ್ಯಾಗೆ ನೆಟ್ಟಗಾದಾಳು?" ಎಂಬ ದುಃಖವು ಇರುವದು; ಅದನ್ನೇ ಸ್ಪಷ್ಟವಾಗಿ ಹೇಳುವೆನು ಕೇಳು,—"ಆ ನಿನ್ನ ಪುತ್ರಿಯು ಒಬ್ಬ ಸುಂದರನಾದ ಪುರುಷನನ್ನು ನಿನ್ನಿನ ದಿವಸ ನೋಡಿ, ಆತನನ್ನು ಮೋಹಿಸಿರುವಳು; ಮತ್ತು ಆತನ ವಿರಹತಾಪದಿಂದ ಪೀಡಿತಳಾಗಿ ಮೌನದಿಂದ ಮಲಗಿರುವಳು; ಆ ನಿನ್ನ ಮಗಳ ಕಾಮಜ್ವರವು ಶಾಂತವಾಗಬೇಕಾದರೆ, ಆಕೆಯನ್ನು ಆ ಪುರುಷನಿಗೇ ಲಗ್ನ ಮಾಡಿಕೊಡು," ಎಂದು ಹೇಳಿದಳು. ಆಗ ಧರಣೀದೇವಿಯು ತನ್ನ ಮನಸ್ಸಿನಲ್ಲಿ— ನಿಶ್ಚಯವಾಗಿ ಇವಳು ಧರ್ಮದೇವತೆಯೇ ಹೌದು; ಯಾಕಂದರೆ,—ಏನೂ ಅರಿಯದೆ ಇರುವ ಇವಳು ನನ್ನ ಮಗಳ ಸಂಗತಿಯನ್ನು ಯಥಾರ್ಥವಾಗಿ ಹೇಳಿದಳು. ಈಕೆಯು ಹೇಳಿದಂತೆ ಆ ಪುರುಷನ ಮೇಲಿನ ಮೋಹದಿಂದ ಪದ್ಮಾವತಿಗೆ ಕಾಮಜ್ವರದ ಬಾಧೆಯಾಗಿರಬಹುದು; ನಾನು ಭೂತಬಾಧೆಯೆಂದು ತಿಳಿದಿದ್ದೆನು." ಎಂದು ಯೋಚಿಸಿ,—ಅಮ್ಮಾ ಧರ್ಮದೇವಿಯೇ, ನೀನು ಹೇಳಿದ ಮಾತು ಸತ್ಯವೇ ಸರಿ; ಆದರೆ ಆ ನನ್ನ ಪುತ್ರಿಯನ್ನು ಮೋಹಪಡಿಸಿದ ಪುರುಷನು ಯಾರು? ಅವನು ಎಲ್ಲಿರುವನು? ಅವನ ನಾಮವೇನು? ಇದನ್ನೆಲ್ಲ ನೀನು ಹೇಳಿದರೆ, ನಿನ್ನ ಮಾತಿನ ಪ್ರಕಾರ ಅವನಿಗೇ ನನ್ನ ಮಗಳನ್ನು ಲಗ್ನ ಮಾಡಿ ಕೊಡುವೆನು;" ಎಂದು ಹೇಳಿದಳು. ಆಗ ಧರ್ಮದೇವಿಯು— ರಾಜಭಾರ್ಯೆಯೇ, ಆ ಪುರುಷನು ಯಾರು? ಎಲ್ಲಿರುವನು? ಎಂದು ಚಿಂತಿಸಬೇಡ, ವೈಕುಂಠಪತಿಯಾದ ಸಾಕ್ಷಾತ್ ನಾರಾಯಣನೇ ವೇಂಕಟಾಚಲದಲ್ಲಿರುತ್ತಾನೆ; ಅವನು ಸಾಧಾರಣನಲ್ಲ; ವಿದ್ಯಾವಂತನೂ ಧನವಂತನೂ ಬಲವಂತನೂ ಇರುವನು, ಅವನಿಗೆ ಕೊಟ್ಟರೆ, ನಿನ್ನ ಮಗಳು ಸುಖಪಡುವಳು; ಇದಲ್ಲದೆ ಇನ್ನೊಂದು ಸಂಗತಿಯೇನಂದರೆ, ನಿನ್ನಿನ ದಿವಸ ನಿನ್ನ ಪುತ್ರಿಯು ಉದ್ಯಾನವನದಲ್ಲಿ ಆ ಪುರುಷನ ಕುದುರೆಯನ್ನೇ ಕಲ್ಲಿನಿಂದ ಹೊಡೆದು ಕೊಂದುಬಿಟ್ಟಿರುವಳು, ಇದು ನಿಜವೋ? ಸುಳ್ಳೋ? ಬೇಕಾದರೆ ಆಕೆಯ ಸಖಿಯರನ್ನು ಕೇಳು; ಮತ್ತು ನಾನು ಸತ್ಯವಾಗಿ ಹೇಳುತ್ತೇನೆ, ನಿನ್ನ ಮಗಳನ್ನು ವೇಂಕಟಾಚಲವಾಸಿಯಾದ ಶ್ರೀನಿವಾಸನಿಗೆ ಕೊಟ್ಟರೆ ರೋಗದಿಂದ

ಮುಕ್ತಳಾಗಿ ಸುಖವನ್ನು ಹೊಂದುವಳು; ಇಲ್ಲದಿದ್ದರೆ ಈವೊತ್ತಿನ ದಿನ ದಲ್ಲಿಯೇ ಮರಣವನ್ನು ಹೊಂದುವಳು, ಇದು ನಿಶ್ಚಯವೆಂದು ತಿಳಿ; ಈ ಕೊರ ವಿಯು ಎಂಥ ಕೆಟ್ಟ ಮಾತುಗಳನ್ನು ಆಡಿದಳೆಂದು ನೀನು ಮನಸ್ಸಿನಲ್ಲಿ ನನ್ನನ್ನು ನಿಂದಿಸಿದರೂ ಸರಿಯೇ." ಎಂದು ಸ್ಪಷ್ಟವಾಗಿ ಹೇಳಿದಳು. ಧರಣೀ ದೇವಿಯು ಈ ಮಾತುಗಳನ್ನು ಕೇಳಿ ಮನಸ್ಸಿನಲ್ಲಿ ದುಃಖವನ್ನು ತಾಳಿ—“ ಈ ಧರ್ಮದೇವತೆಯನ್ನು ನಾನು ಯಾಕಾದರೂ ಕೇಳಿದ್ದೇನು ” ಎಂದು ಚಿಂತಿಸಿ,— ಧರ್ಮದೇವಿಯೇ, ದುಃಖಕ್ಕೆ ಕಾರಣವಾದ ಎಂಥ ಮಾತನ್ನಾಡಿದಿಯೇ ?" ಎನಲು, ಧರ್ಮದೇವಿಯು—“ ರಾಜಪತ್ನಿಯೇ, ನಾನು ಅಸತ್ಯ ಮಾತುಗಳನ್ನು ಎಂದಿಗೂ ಹೇಳುವದಿಲ್ಲ. ಸತ್ಯವಿದ್ದದ್ದನ್ನು ಹೇಳಿರುವೆನು. ಭಾಗ್ಯಶಾಲಿನಿಯೇ, ನನ್ನ ವಾಕ್ಯಗಳು ಮಹಾ ಕಠಿಣವಾದವುಗಳೆಂದು, ಮೊದಲೇ ನಿನಗೆ ಹೇಳಿ ದ್ದಿಲ್ಲವೆ ? ನಿನ್ನ ಮಗಳಿಗೆ ಕಲ್ಯಾಣವಾಗಬೇಕೆಂಬ ಇಚ್ಛೆಯಿದ್ದರೆ, ನಾನು ಹೇಳಿದ ವರನಿಗೆ ನಿನ್ನ ಪುತ್ರಿಯನ್ನು ಕೊಟ್ಟು ಲಗ್ನ ಮಾಡು, ಇಲ್ಲದಿದ್ದರೆ ಬಿಡು; ನನ್ನ ಮಾತು ಸರ್ವಥಾ ಅಸತ್ಯವಾಗಲಾರದೆಂದು ತಿಳಿ; ” ಎನಲು, ಧರಣೀದೇವಿಯು ದುಃಖದಿಂದ ತನ್ನ ಮನಸ್ಸಿನೊಳಗೆ—“ ಈಗ ಮಾತ್ರ ನನಗೆ ದೊಡ್ಡ ಸಂಕಟವು ಬಂದೊದಗಿತು, ಯಾಕಂದರೆ, ಈ ಕೊರವಂಜಿಯು ಮಾತಿನಿಂದ ಪದ್ಮಾವತಿಯನ್ನು ಆ ವರನಿಗೆ ಹ್ಯಾಗೆ ಕೊಡಲಿ ! ಒಂದುವೇಳೆ ಕೊಡದಿದ್ದರೆ ಮೃತಳಾಗುವಳೆಂದು ನಿರ್ಭಿಡೆ ಯಿಂದ ಹೇಳಿದಳಲ್ಲ, ಅದಕ್ಕೆ ಹ್ಯಾಗೆ ಮಾಡಲಿ ? ” ಎಂದು ಆಲೋಚಿಸಿ—‘ಧರ್ಮ ದೇವಿಯೇ, ನೀನು ಹೇಳಿದಂತೆ ಆ ಪುರುಷನಿಗೇ ಪದ್ಮಾವತಿಯನ್ನು ಲಗ್ನಮಾಡಿ ಕೊಡುವದು ಯೋಗ್ಯವೇ ಸರಿ; ಆದರೆ ಯಾರೂ ಕೇಳದೆ ಕನ್ಯೆಯನ್ನು ಹ್ಯಾಗೆ ಕೊಡಲಿ ? ” ಎಂದು ಕೇಳಲು, ಧರ್ಮದೇವಿಯು—“ ರಾಜಭಾರ್ಯೆಯೇ, ಇಷ್ಟೊಂದು ಚಿಂತೆಯನ್ನೇಕೆ ಮಾಡುವೆ ? ಈ ದಿವಸವೇ ಇನ್ನೊಂದು ಗಳಿಗೆಯ ಮೇಲೆ, ಕನ್ಯಾರ್ಥಿನಿಯಾಗಿ ಒಬ್ಬ ವೃದ್ಧ ಸ್ತ್ರೀಯು ಇಲ್ಲಿಗೆ ಬರುವಳು, ಆಕೆಯು ಮಹಾ ಧರ್ಮಿಷ್ಠಳೂ ಜಾಣಳೂ ಇದ್ದಾಳೆ. ಈ ಸಂಗತಿಯನ್ನು ನಿನ್ನ ಪತಿಗೂ ನಿನ್ನ ಮೈದುನನಾದ ತೊಂಡಮಾನನಿಗೂ, ಬಂಧು–ಬಳಗದವರಿಗೂ ತಿಳಿಸಿ, ಎಲ್ಲ ರಿಗೂ ಸಮ್ಮತವಾಗುವ ಹಾಗೆ ನಾನು ಹೇಳಿದಂತೆ ಮಾತ್ರ ಮಾಡು; ಇದಲ್ಲದೆ ನನ್ನ ಸಮ್ಮುಖದಲ್ಲಿ ಪದ್ಮಾವತಿಯನ್ನು ಶ್ರೀನಿವಾಸನಿಗೆ ಕೊಡುತ್ತೇನೆಂದು ಸಂಕ

ಲ್ಪವನ್ನು ಮಾಡು," ಎಂದು ಹೇಳಿದಳು. ಅದಕ್ಕೆ ಧರಣೀದೇವಿಯು—"ಧರ್ಮ ದೇವಿಯೇ, ಹೆಣ್ಣು ಯಾರಿಗಾದರೂ ಕೊಡತಕ್ಕದ್ದೇ ಸರಿ, ಯಾವ ಉಪಾಯ ದಿಂದಾದರೂ, ನನ್ನ ಮಗಳು ಬದುಕಿದರೆ ಸಾಕು, ಅಗತ್ಯವಾಗಿ ಆ ಶ್ರೀನಿವಾಸ ನಿಗೇ ನನ್ನ ಮಗಳನ್ನು ಕೊಡುತ್ತೇನೆ," ಎಂದು ವಚನವನ್ನು ನುಡಿದಳು. ಅದನ್ನು ಕೇಳಿ ಧರ್ಮದೇವಿಯು ಸಂತೋಷಪಟ್ಟು,—"ರಾಜಪತ್ನಿಯೇ, ನಿನ್ನ ಮಗಳಿಗೆ ಶುಭವಾಗಲಿ, ನಾನು ಇನ್ನು ಸ್ವಸ್ಥಳಕ್ಕೆ ಹೋಗುವೆನು" ಎಂದು ಹೇಳಿ, ತಾನು ಬಂದ ಕಾರ್ಯವಾಯಿತೆಂದು ಕೊರವಂಜಿಯರೂಪಿಯಾದ ಶ್ರೀನಿ ವಾಸನು ಪಟ್ಟಣದಿಂದ ಹೊರಗೆ ಹೊರಟು. ತನ್ನ ತಲೆಯಮೇಲೆ ಬುಟ್ಟಿಯನ್ನು ಹೊತ್ತುಕೊಂಡು ಬಗಲಲ್ಲಿ ಕೂಸನ್ನು ಎತ್ತಿಕೊಂಡು ಉತ್ತರದಿಕ್ಕಿಗೆ ನಡೆದು, ತನ್ನ ವಾಸಸ್ಥಾನವಾದ ವಲ್ಮೀಕಕ್ಕೆ ಬಂದು ಸೇರಿದನು.

ಇತ್ತ ಕೊರವಂಜಿಯು ಹೋಗಲಾಗಿ ಧರಣೀದೇವಿಯು ದುಃಖದಿಂದ ತನ್ನ ಮನಸ್ಸಿನಲ್ಲಿ—"ಈಗ ನಾನು ಹ್ಯಾಗೆ ಮಾಡಲಿ? ನನ್ನ ಮಗಳ ಮನಸ್ಸಿನಲ್ಲಿ ಹ್ಯಾಗಿರು ವದೋ ಅದರ ವಿಚಾರವನ್ನು ಮಾಡಬೇಕಾಗಿರುವದು" ಎಂದು ಯೋಚಿಸಿ, ಪದ್ಮಾವತಿಯು ಮಲಗಿರುವಲ್ಲಿಗೆ ಬಂದು ದುಃಖದಿಂದ—"ಮಗಳೇ, ನಿನ್ನ ಮನಸ್ಸಿನಲ್ಲಿ ಏನಿರುವದೆಂಬದನ್ನು ಇನ್ನೂ ನೀನು ಹೇಳಲೊಲ್ಲೆ. ನೀನು ಹೇಳದಿ ದ್ದರೆ ನಮಗೆ ಹ್ಯಾಗೆ ತಿಳಿಯಬೇಕು ? ಲೋಕದಲ್ಲಿ ಹೆಣ್ಣುಮಕ್ಕಳಿಗೆ ತಾಯಿಗಿಂತ ಹಿತವಂತರಿಲ್ಲವೆಂಬದನ್ನು ತಿಳಿದು, ನಿನ್ನ ಮನಸ್ಸಿನಲ್ಲಿದ್ದ ಎಂಥ ಕಾರ್ಯವನ್ನಾ ದರೂ ಹೇಳು, ಅದನ್ನು ನಾನು ಪೂರ್ಣಮಾಡುವೆನು; ಒಬ್ಬರ ಮುಂದಾದರೂ ಹೇಳದೆ, ನಿನ್ನ ಮನಸ್ಸಿನಲ್ಲಿ ನೀನೇ ತಾಪಪಟ್ಟರೆ ಉಪಯೋಗವೇನು ? ಮಗಳೇ, ನಾನು ನಿಶ್ಚಯವಾಗಿ ಹೇಳುತ್ತೇನೆ;—"ನೀನು ನಿನ್ನ ಮನೋಗತವನ್ನು ಹೇಳದಿ ದ್ದರೆ, ನಿನ್ನ ಸಮ್ಮುಖದಲ್ಲಿಯೇ ನಾನು ವಿಷಪಾನ ಮಾಡಿ ಜೀವ ಕೊಡುವೆನು." ಎಂದು ಖಂಡಿತವಾಗಿ ಹೇಳಲು, ಪದ್ಮಾವತಿಯು ತನ್ನ ತಾಯಿಯ ದುಃಖಕರ ವಾದ ಮಾತುಗಳನ್ನು ಕೇಳಿ, ತಾನೂ ದುಃಖಮಾಡಲಾರಂಭಿಸಿದಳು. ಹೀಗೆ ತಾಯಿಯೂ, ಮಗಳೂ ದುಃಖಪಡುತ್ತಿರಲು ಸ್ವಲ್ಪ ಹೊತ್ತಿನಮೇಲೆ, ಪದ್ಮಾವ ತಿಯು ಮೆಲ್ಲಗೆ ತನ್ನ ಅಭಿಪ್ರಾಯವನ್ನು ಹೇಳತೊಡಗಿದಳು,—

ಕೇಳೌ ಜನನಿಯೇ, ನಾನು ಏನಂತ ಹೇಳಲಿ ? ನನ್ನ ಮನೋಗತವನ್ನು ಹೇಳಲಿಕ್ಕೆ ನನಗೆ ನಾಚಿಕೆಯು ಬರುತ್ತದ, ಆದರೂ ತಾಯಿಯಾದ ನಿನ್ನಮುಂದೆ

ಹೇಳದೆ ಇನ್ನಾರಿಗೆ ಹೇಳಲಿ ? ಈಗ ನಿನ್ನ ಮುಂದೆ ಮನೋಗತವನ್ನು ಹೇಳು ತ್ತೇನೆ, ಕೇಳು; ತಾಯೀ, ನಿನ್ನಿನ ದಿವಸ ನಿನ್ನ ಆಜ್ಞೆಯನ್ನು ಹೊಂದಿ ಸಖಿಯ ರೊಂದಿಗೆ ವನಕ್ಕೆ ಹೋದಸಮಯದಲ್ಲಿ, ಅಲ್ಲಿ ಒಬ್ಬ ಪರಮ ಪುರುಷನನ್ನು ಕಂಡೆನು. ಕಮಲಕ್ಕೆ ಸರಿಯಾದ ಮುಖವು, ವಿಶಾಲವಾದ ನೇತ್ರಗಳು, ದೀರ್ಘ ವಾದ ಬಾಹುಗಳು ಇವೇ ಮೊದಲಾದ ಲಕ್ಷಣಗಳಿಂದೊಪ್ಪುವ ಮನ್ಮಥಾಕಾರ ನಾದ ಆ ಪುರುಷನಿಗೆ ಮೋಹಿಸಿ, ನನ್ನ ಅವಸ್ಥೆಯು ಹೀಗಾಗಿರುವದು; ಬ್ರಹ್ಮಾದಿ ದೇವತೆಗಳೇ ಆ ಶ್ರೀನಿವಾಸನ ಚರಿತ್ರೆಯನ್ನು ತಿಳಿಯಲಾರರು. ಅಂದಮೇಲೆ ಪಾಪಿಷ್ಠರಾದ ಮನುಷ್ಯರು ಆತನ ಮಹಿಮೆಯನ್ನು ಹ್ಯಾಗೆ ತಿಳಿದಾರು ? ಅವನೆ ದೇವಾಧಿದೇವನು; ಅವನ ಬಲಗೈಯಲ್ಲಿ ಚಕ್ರವೂ, ಎಡಗೈಯಲ್ಲಿ ಶಂಖವೂ, ಕಂಠದಲ್ಲಿ ಕೌಸ್ತುಭರತ್ನವೂ, ಕರ್ಣದಲ್ಲಿ ಮಕರಕುಂಡಲಗಳೂ ಶೋಭಿಸುವವು. ಆತನ ಪ್ರಭಾವವನ್ನೆಷ್ಟಂತ ಹೇಳಲಿ ? ಅವನ ಚಕ್ರಪ್ರಭಾವದಿಂದ ವಾರಣಾಸಿ ಪಟ್ಟಣವು ದಗ್ಧವಾಯಿತು; ಅವನ ಕೈಯಲ್ಲಿರುವ ಶಂಖದ ಧ್ವನಿಯನ್ನು ಕೇಳಿದ ಕೂಡಲೆ ರಾಕ್ಷಸರು ಪಲಾಯನ ಮಾಡುವರು; ಜನನಿಯೇ, ಆ ಪರಮ ಪುರುಷ ನಾದ ಶ್ರೀನಿವಾಸನ ಭಕ್ತರು ಸರ್ವಕಾಲದಲ್ಲಿಯೂ ವೇದಶಾಸ್ತ್ರಗಳಲ್ಲಿ ಆಸಕ್ತ ರಾಗಿ, ಧರ್ಮಮಾರ್ಗವಾದ ವ್ರತಗಳಲ್ಲಿದ್ದು, ವೇದದಲ್ಲಿ ಹೇಳಿದ ಕರ್ಮಗಳನ್ನು ಮಾಡುವರು; ಹಾಗು ಶಂಖಚಕ್ರಗಳಿಂದ ಮುದ್ರಿತವಾದ ಚಿಹ್ನಗಳುಳ್ಳವರಾಗಿ ಊರ್ಧ್ವಪುಂಡ್ರವನ್ನು ಹಣೆಯಲ್ಲಿ ಧಾರಣ ಮಾಡುವರು, ಮಾತಾಪಿತೃಗಳ ಸೇವೆ ಯಲ್ಲಿ ನಿರತರಾಗಿ, ಸತ್ಯವನ್ನೇ ನುಡಿಯುವರು; ಅವರೇ ವೈಷ್ಣವರೆಂದನಿಸುವರು. ಅಂಥ ಮಹಾತ್ಮನಾದ ಆ ಪುರುಷನೇ ನನ್ನನ್ನು ಮೋಹಿಸಿರುವನು. ಅವನೇ ನನಗೆ ಪತಿಯು, ಅವನ ಹೊರತು ನನ್ನ ಜೀವವು ಬದುಕಲಾರದು, ಇದು ನಿಶ್ಚಯವೆಂದು ತಿಳಿ, ಆತನ ವಿರಹದಿಂದಲೇ ನನಗೆ ತಾಪವಾಗಿರುವದು; ತಾಯಿಯೇ, ಇದನ್ನೆಲ್ಲ ಮಂದಿಯ ಮುಂದೆ ಹೇಳಲಾರದೆ ಮೌನದಿಂದಿದ್ದೆನು, ಜನನಿಯಾದ ನಿನ್ನೊಬ್ಬಳ ಮುಂದೆ ಮಾತ್ರ, ನನ್ನ ನಿಜವಾದ ವೃತ್ತಾಂತವನ್ನು ಹೇಳಿದೆನು." ಎಂದಳು, ಅದನ್ನು ಕೇಳಿ ಧರಣೀದೇವಿಯು—"ಮಗಳೇ, ಚಿಂತಿಸ ಬೇಡ; ನಿನ್ನ ಅಪೇಕ್ಷೆಯಿದ್ದಂತೆ ನಾನು ಮಾಡುವೆನು. ಇದೇ ಈಗ ಇಲ್ಲಿಗೆ ಒಬ್ಬ ಧರ್ಮದೇವತೆಯು ಬಂದು ನಿನಗಾದ ಸರ್ವ ವೃತ್ತಾಂತವನ್ನು ಹೇಳಿದಳು; ಆಕೆಯು ಹೇಳಿದ್ದಕ್ಕೂ, ನೀನು ಹೇಳಿದ್ದಕ್ಕೂ ಸರಿಯಾಯಿತು." ಎಂದು

ಹೇಳಿ, ಆಕೆಯನ್ನು ಸಮಾಧಾನ ಪಡಿಸಿದಳು; ಬಳಿಕ ಆಕೆಯು ತನ್ನ ಪತಿಯ ಸಮಿಾಪಕ್ಕೆ ಬಂದು, ತಾನು ಪದ್ಮಾವತಿಯ ಮನೋಗತವನ್ನು ತಿಳಿದ ಸಂಗತಿಯನ್ನೂ, ಧರ್ಮದೇವತೆಯು ಹೇಳಿದ ವೃತ್ತಾಂತವನ್ನೂ ಆತನ ಮುಂದೆ ಹೇಳಿ, "ಪದ್ಮಾವತಿಯನ್ನು ಆ ವೇಂಕಟಾಚಲವಾಸಿಯಾದ ಶ್ರೀನಿವಾಸನಿಗೆ ಕೊಟ್ಟರೆ, ಮಗಳ ಮನೋರಥವು ಪೂರ್ಣವಾಗುವದು" ಎಂದು ಹೇಳಿದಳು. ಅದನ್ನು ಕೇಳಿ ಆಕಾಶರಾಜನು ಸಂತೋಷಪಟ್ಟನು.

ಅಷ್ಟರಲ್ಲಿಯೇ ಬಕುಲಾವತಿಯಿಂದ ಸಹಿತರಾದ ಕನ್ನಿಕೆಯರು ಜಗತ್ತಿಗೆ ಸ್ವಾಮಿಯಾದ ಅಗಸ್ತ್ಯೇಶ್ವರನ ಅಭಿಷೇಕವನ್ನು ಮಾಡಿಸಿ, ಪೂಜಾಸಾಹಿತ್ಯಗಳೊಂದಿಗೆ ಬ್ರಾಹ್ಮಣರನ್ನು ಕರೆದುಕೊಂಡು ಅರಮನೆಗೆ ಬಂದರು. ಆಗ ರಾಜನು ಬ್ರಾಹ್ಮಣರನ್ನು ವಿಧಿಪೂರ್ವಕವಾಗಿ ಗಂಧಪುಷ್ಪಾದಿಗಳಿಂದಲೂ ವಸ್ತ್ರಾಲಂಕಾರಗಳಿಂದಲೂ ಪೂಜಿಸಿ, ಅಭಿಷೇಕ-ತೀರ್ಥದಿಂದ ಪದ್ಮಾವತಿಯನ್ನು ಪ್ರೋಕ್ಷಣೆ ಮಾಡಿ ಆ ಮೇಲೆ ಬ್ರಾಹ್ಮಣರ ಭೋಜನವನ್ನು ಮಾಡಿಸಿದನು. ಅಷ್ಟರಲ್ಲಿ ಧರಣೀದೇವಿಯು ಹೊರಗೆ ಬರಲು, ಬಕುಲಾದೇವಿಯನ್ನು ಕಂಡು ಧರ್ಮದೇವತೆಯು ಹೇಳಿದ ಮಾತನ್ನು ಸ್ಮರಿಸಿ, ಬಕುಲಾದೇವಿಯನ್ನು ಕರೆದು, ಉಚಿತಾಸನದಲ್ಲಿ ಕೂಡ್ರಿಸಿ, ಕನ್ನಿಕೆಯರನ್ನು ಕುರಿತು—"ಕನ್ನಿಕೆಯರೇ, ಈ ಪುಣ್ಯಶಾಲಿಯಾದ ಸ್ತ್ರೀಯು ಯಾರು? ಇಲ್ಲಿಗೆ ಏನು ಕಾರಣ ಬಂದಳು? ಈ ವೃದ್ಧಳು ಬಹಳೇ ಯೋಗ್ಯಳೆಂಬ ಹಾಗೆ ಕಾಣಿಸುವಳು," ಎಂದು ಕೇಳಿದಳು, ಆಗ ಒಬ್ಬ ಕನ್ನಿಕೆಯು—"ಧರಣೀದೇವಿಯೇ, ಈ ಸ್ತ್ರೀಯು ವೇಂಕಟಾಚಲದಲ್ಲಿರುವಳಂತೆ, ಶ್ರೀನಿವಾಸನ ಸೇವಾತತ್ಪರಳಾಗಿರುವಳಂತೆ, ಮತ್ತು ನಿನ್ನ ಹತ್ತರ ಕಾರ್ಯನಿಮಿತ್ತವಿರುವದಂತೆ, ಅದಕ್ಕಾಗಿ ಬಂದಿರುವಳು; ನಾವೆಲ್ಲರೂ ಅಗಸ್ತ್ಯೇಶ್ವರನ ದೇವಾಲಯದಲ್ಲಿರುವಾಗ ಈ ವೃದ್ಧಳು ಅಲ್ಲಿಗೆ ಬಂದು, ನಮ್ಮ ಕೂಡ ಇಲ್ಲಿಗೆ ಪ್ರಾಪ್ತಳಾಗಿರುವಳು; ಆದ್ದರಿಂದ ಆಕೆಯ ಕಾರ್ಯನಿಮಿತ್ತವನ್ನು ನೀನೇ ವಿಚಾರ ಮಾಡು" ಎಂದು ಹೇಳಲು, ಧರಣೀದೇವಿಯು,—"ಅಮ್ಮಾ, ನೀನು ನಮ್ಮ ಮನೆಗೆ ಬಂದದ್ದರಿಂದ ನಾನು ಕೃತಕೃತ್ಯಳಾದೆನು; ಮತ್ತು ನಿನ್ನಂಥ ಸಜ್ಜನ ಸ್ತ್ರೀಯನ್ನು ಕಂಡು ನನಗೆ ಸಂತೋಷವಾಯಿತು; ಅದಂತಿರಲಿ, ಇಲ್ಲಿಗೆ ನೀನು ಏನು ಕಾರಣ ಬಂದಿರುವೆ?" ಎಂದು ಕೇಳಲು, ಬಕುಲಾದೇವಿಯು—"ರಾಜ

ಪತ್ನಿಯೇ, ನಾನು ಕನ್ಯಾರ್ಥಿಯಾಗಿ ಬಂದಿರುವೆನು," ಎಂದು ಹೇಳಿದಳು. ಆಗ ಧರಣೀದೇವಿಯು—"ಅಮ್ಮಾ, ನಿನ್ನ ಮಾತುಗಳನ್ನು ಕೇಳಿ ಸಂತೋಷವಾಯಿತು, ನನಗಾದರೂ ವರಾಪೇಕ್ಷೆಯಾಗಿದೆ; ಆದರೆ ಆ ವರನು ಯಾರು? ಅವನ ದೇಶವಾವದು ? ಗೋತ್ರ, ನಕ್ಷತ್ರ, ಕುಲ, ಶೀಲಗಳು ಯಾವವು? ಮತ್ತು ಅವನ ತಂದೆತಾಯಿಗಳು ಯಾರು ?" ಎಂದು ವಿಚಾರಿಸಿದಳು. ಆಗ ಬಕುಲಾವತಿಯು—"ರಾಜಭಾರ್ಯೆಯೇ, ವಸುದೇವ-ದೇವಕಿಯರು ಅವನ ತಂದೆತಾಯಿಗಳು, ಅವನು ಚಂದ್ರಕುಲದವನು. ಕೃಷ್ಣನೆಂಬುವದು ಅವನ ನಾಮವು, ವಶಿಷ್ಠ ಗೋತ್ರದಲ್ಲಿ ಉತ್ಪನ್ನನಾಗಿರುವನು, ಶ್ರವಣಾನಕ್ಷತ್ರದಲ್ಲಿ ಹುಟ್ಟಿರುವನು, ವೇಂಕಟಾಚಲವೇ ಆತನ ವಾಸಸ್ಥಾನವು; ಇದಲ್ಲದೆ ಆ ವರನು ವಿದ್ಯಾವಂತನು, ಧನವಂತನು, ಬಲವಂತನು, ಸದಾಚಾರಸಂಪನ್ನನು; ಅವನು ಇಪ್ಪತ್ತೈದು ವರ್ಷದವನಿರುವನು. ನಿನ್ನ ಮಗಳಿಗೆ ಯೋಗ್ಯವಾದ ಸ್ಥಳವಿರುವದರಿಂದ ಆಕೆಯನ್ನು ಕೊಟ್ಟರೆ ಸೌಖ್ಯಪಡುವಳು. ರಾಜಪತ್ನಿಯೇ, ನಾನು ವಿಶೇಷವಾಗಿ ಹೇಳುವದರಿಂದ ಏನು ಪ್ರಯೋಜನವು? ವರನನ್ನು ನೋಡಿದರೆ ನಿನಗೆ ತಿಳಿದೀತು" ಎಂದು ಹೇಳಲು, ಧರಣೀದೇವಿಯು ಕೇಳಿ ಸಂತೋಷಪಟ್ಟು,—"ಬಕುಲಾವತಿಯೇ, ನೀನು ಹೇಳಿದ ಮಾತಿನಿಂದ ನನ್ನ ಮನಸ್ಸಿನಲ್ಲಿ ಒಂದು ಸಂಶಯವು ಬಂದಿರುವದು. ಅದೇನೆಂದರೆ,—ವರನು ಭಾಗ್ಯಶಾಲಿಯು, ಬುದ್ಧಿವಂತನು, ಸುಂದರನು ಎಂದು ಹೇಳಿದೆಯಲ್ಲ? ಆದರೆ ಇಷ್ಟು ಯೋಗ್ಯತೆಯುಳ್ಳ ಆತನ ಲಗ್ನವು ಈ ವರೆಗೂ ಯಾಕೆ ಆಗಿಲ್ಲ, ಎಂದು ಕೇಳಿದಳು. ಈ ಮಾತುಗಳನ್ನು ಕೇಳಿ ಬಕುಲಾವತಿಯು ಮನಸ್ಸಿನಲ್ಲಿ ಆಲೋಚಿಸಿ ಧೈರ್ಯದಿಂದ—"ಈ ಶ್ರೀನಿವಾಸನಿಗೆ ಬಾಲ್ಯದಲ್ಲಿ ಒಂದು ಲಗ್ನವಾಗಿದೆ; ಆದರೆ ಆ ಹೆಂಡತಿಯಲ್ಲಿ ಇನ್ನೂ ಮಕ್ಕಳಾಗದ್ದರಿಂದ, ಆತನಿಗೆ ಈ ಎರಡನೇ ಲಗ್ನವನ್ನು ಮಾಡಲುದ್ಯುಕ್ತಳಾಗಿರುವೆನು, ಇದರ ಹೊರತು ಈಗ ನಮ್ಮ ಶ್ರೀನಿವಾಸನ ಲಗ್ನವಾಗುವದಕ್ಕೆ ಬೇರೆ ಏನೂ ಕಾರಣವಿಲ್ಲ," ಎಂದು ಹೇಳಲು ಧರಣೀದೇವಿಯು ತನ್ನ ಮಗನನ್ನು ಕಳಿಸಿ, ಪತಿಯನ್ನು ಕರಿಸಿದಳು. ಆಗ ಆಕೆಯು ಆಕಾಶರಾಜನನ್ನು ಕುರಿತು—"ವೇಂಕಟಾಚಲದಿಂದ ಈ ಮಹನೀಯಳಾದ ಬಕುಲಾದೇವಿಯು ಕನ್ಯಾರ್ಥಿಯಾಗಿ ಬಂದಿರುವಳು. ಪುರೋಹಿತರನ್ನು ಕರೆಯಿಸಿ, ವರನ ಕುಲ, ವಿದ್ಯಾ, ಬಲ, ಗೋತ್ರ, ನಕ್ಷತ್ರ ಮೊದಲಾದವುಗಳಿಗೂ, ನಮ್ಮ ಕನ್ಯೆಯ ಕುಲ, ಗೋತ್ರ, ನಕ್ಷತ್ರಗಳಿಗೂ ಕೂಡಿ ಬರುವದೋ, ಇಲ್ಲವೋ?

ಇದನ್ನು ಪರೀಕ್ಷಿಸಿ, ಕೂಡಿಬಂದರೆ ಕನ್ಯಾದಾನವನ್ನು ಮಾಡತಕ್ಕದ್ದು," ಎಂದು ಹೇಳಿದಳು. ಆಗ ತನ್ನ ಸ್ತ್ರೀಯ ವಚನವನ್ನು ಕೇಳಿ, ಆಕಾಶರಾಜನು ಸಂತೋಷ ಪಟ್ಟು—ಪ್ರಿಯೇ, ಬಕುಲಾವತಿಯು ಬಂದದ್ದು ಬಹು ಶುಭಪ್ರದವೆಂದು ನಾನು ತಿಳಿಯುತ್ತೇನೆ; ಯಾಕಂದರೆ ನಾವು ಪೂರ್ವಜನ್ಮದಲ್ಲಿ ಏನು ಪುಣ್ಯವನ್ನು ಮಾಡಿದ್ದೆವೋ ಆ ಫಲದಿಂದ ಜಗತ್ಪತಿಯಾದ ಶ್ರೀನಿವಾಸನಿಗೆ ಕನ್ಯಾದಾನವನ್ನು ಮಾಡುವ ದೈವವು ನಮಗೆ ಪ್ರಾಪ್ತವಾಯಿತು; ನಮ್ಮ ಸಮಸ್ತರಾದ ಪಿತೃಗಳು ಸದ್ಗತಿಯನ್ನು ಹೊಂದುವರು. ಪತ್ನಿಯೇ, ನಮ್ಮ ಮಗಳ ಲಗ್ನ ಸಮಾರಂಭವನ್ನು ನನ್ನ ಕಣ್ಣುಗಳಿಂದ ಎಂದು ನೋಡುವೆನೋ? ಸುವರ್ಣಮಯವಾದ ಪೀಠದಲ್ಲಿ ನಮ್ಮ ಪದ್ಮಾವತಿಯು ತನ್ನ ಪತಿಯಿಂದ ಸಹಿತಳಾಗಿ ಕುಳಿತಿರುವದನ್ನು ನಾನು ಎಂದು ಕಾಣುವೆನೋ? ಎಂಬ ಲವಲವಿಕೆಯು ನನ್ನಲ್ಲಿ ಉತ್ಪನ್ನವಾಗಿರುವದು; ಇದಂತಿರಲಿ! ಈಗಲೇ ಹೋಗಿ ಮಗಳನ್ನು ಇನ್ನೊಮ್ಮೆ ಕೇಳಿ, ಆಕೆಯ ಮನೋಭಿಪ್ರಾಯವನ್ನು ತಿಳಿಯಬೇಕು, ಎಂದು ಹೇಳಿ ರಾಜನು ತನ್ನ ಪತ್ನಿಯಿಂದ ಸಹಿತನಾಗಿ ಪದ್ಮಾವತಿಯು ಮಲಗಿರುವಲ್ಲಿಗೆ ಬಂದು.—'ಪುತ್ರಿಯೇ, ನಿನ್ನ ಮನಸ್ಸಿನಲ್ಲಿರುವ ವ್ಯಥೆಯನ್ನು ಬಿಟ್ಟು, ನನ್ನ ಸಮ್ಮುಖದಲ್ಲಿ ನಿನ್ನ ಮನೋಭಿಪ್ರಾಯವನ್ನು ಹೇಳು; ಅದನ್ನು ಪೂರ್ಣಮಾಡುವೆನು" ಎಂದು ಹೇಳಿದನು. ಪದ್ಮಾವತಿಯು ತನ್ನ ತಾಯಿಗೆ— "ಅವ್ವಾ, ನಿನ್ನ ಮುಂದೆ ನಾನು ಹೇಳಿರುವ ನನ್ನ ಮನೋಭಿಲಾಷೆಯನ್ನು ತಂದೆಗೆ ತಿಳಿಸು, ಪುನಃ ಪುನಃ ಹೇಳಲಿಕ್ಕೆ ನನಗೆ ನಾಚಿಕೆ ಬರುವದು" ಎಂದು ಮೆಲ್ಲಗೆ ತಿಳಿಸಲು, ಧರಣೀದೇವಿಯು ತನ್ನ ಪತಿಗೆ,-"ಪತಿಯೇ, ಈಕೆಯು ತನ್ನ ಮನೋಭಿಲಾಷೆಯನ್ನು ನನಗೆ ತಿಳಿಸಿರುವಳು; ಇನ್ನು ಯೋಚನೆಯನ್ನೇ ಮಾಡಬೇಡ. ಮಂಗಲಕರವಾದ ಈ ಕಾರ್ಯಕ್ಕೆ ಅವಕಾಶ ಮಾಡಕೂಡದು. ಬೇಗನೆ ವಿಧಿಪೂರ್ವಕವಾಗಿ ಲಗ್ನವನ್ನು ಮಾಡಿಕೊಡು," ಎಂದು ಹೇಳಿದಳು ಆಗ ಆಕಾಶರಾಜನು—"ಪದ್ಮಾವತಿಯೇ, ನಿನ್ನ ಮನೋಭಿಲಾಷೆಯಂತೆ ಶ್ರೀನಿವಾಸನಿಗೆ ನಿನ್ನನ್ನು ಕೊಟ್ಟು ಲಗ್ನ ಮಾಡುವೆನು" ಎಂದು ಸಮಾಧಾನವನ್ನು ಹೇಳಿ, ತನ್ನ ಮಗನಾದ ವಸುದೇವನನ್ನು ಕರೆದು, ಇಂದ್ರಲೋಕದಲ್ಲಿರುವ ತನ್ನ ಗುರುವಾದ ಬೃಹಸ್ಪತ್ಯಾಚಾರ್ಯರನ್ನು ಕರೆಯುವದಕ್ಕಾಗಿ ಪತ್ರವನ್ನು ಬರೆದು ಕಳುಹಿಕೊಟ್ಟನು.

ಆ ವಸುದೇವನು ಚಂದ್ರಾಂಶನಾದ್ದರಿಂದ ತನ್ನ ತಂದೆಯ ಅಪ್ಪಣೆಯ ಪ್ರಕಾರ ಜಾಗ್ರತೆಯಿಂದ ಇಂದ್ರಲೋಕಕ್ಕೆ ಹೋಗಿ, ಗುರುವಾದ ಬೃಹಸ್ಪತ್ಯಾಚಾರ್ಯರನ್ನು ಕಂಡು, ಅವರಿಗೆ ನಮಸ್ಕರಿಸಿ, ತನ್ನ ತಂದೆಯು ಬರೆದು ಕಳುಹಿದ ಪತ್ರವನ್ನು ಕೊಟ್ಟು ನಿಂತುಕೊಂಡನು. ಬೃಹಸ್ಪತಿಯು ಅದನ್ನು ಓದಿಕೊಂಡು ಸಂತೋಷಪಟ್ಟು ಕೂಡಲೆ ಆಕಾಶರಾಜನ ಪಟ್ಟಣಕ್ಕೆ ಬಂದನು. ಆಗ ರಾಜನು ಬಂದಿರುವ ಗುರುವಿಗೆ ನಮಸ್ಕರಿಸಿ, ಆಸನಾದ್ಯುಪಚಾರಗಳಿಂದ ಸತ್ಕರಿಸಿ— "ಗುರುಗಳೇ, ನಿಮ್ಮ ಆಜ್ಞೆಯಿಂದ ಪುತ್ರಿಯಾದ ಪದ್ಮಾವತಿಯ ವಿವಾಹವನ್ನು ಮಾಡಲಿಚ್ಛಿಸುವೆನು. ಜಗತ್ಪತಿಯಾದ ಶ್ರೀನಿವಾಸನ ಸಂಬಂಧವೆಂಬದು ನಾನು ತಮಗೆ ಬರೆದ ಪತ್ರದ ಮೇಲಿಂದ ತಿಳಿದೇ ಅದೆ; ಇದಲ್ಲದೆ ಬಕುಲಾವತಿಯು ಕನ್ಯಾರ್ಥಿನಿಯಾಗಿ ಬಂದಿರುವಳು. ಈ ವಿಷಯದಲ್ಲಿ ತಮ್ಮ ಆಜ್ಞೆಯಂತೆ ನಡೆದುಕೊಳ್ಳುವೆನು." ಎಂದನು. ಆಗ ಗುರುವು—"ರಾಜನೇ, ನೀನು ಹೇಳುವದು ಯೋಗ್ಯವೇಸರಿ; ಆದರೆ ಕನ್ಯೆಯನ್ನು ಕೊಡಬೇಕಾದರೆ ಸಾರಾಸಾರ ವಿಚಾರವನ್ನು ಮಾಡಬೇಕಾಗುವದು. ನಾನು ಸರ್ವಕಾಲದಲ್ಲಿಯೂ ದೇವೇಂದ್ರನ ಲೋಕದಲ್ಲಿರುವವನಾದ್ದರಿಂದ ಈ ಭೂಲೋಕದ ಸುದ್ದಿಯನ್ನು ವಿಶೇಷವಾಗಿ ಅರಿಯೆನು. ಆ ಶ್ರೀನಿವಾಸನ ವೃತ್ತಾಂತವನ್ನು ಅತನ ಸಮೀಪದಲ್ಲಿದ್ದ ಶುಕಾಚಾರ್ಯರು ತಿಳಿದಿರುವರು; ಆದ್ದರಿಂದ ಅವರನ್ನು ಕರೆಯಿಸಿ ಕೇಳಿದರೆ ಸರ್ವವೃತ್ತಾಂತವೂ ತಿಳಿಯುವದು. ಆ ಶುಕಾಚಾರ್ಯರು ಇಲ್ಲಿಂದ ಉತ್ತರದಿಕ್ಕಿಗೆ ಐದು ಹರದಾರಿಗಳ ಮೇಲಿರುವ ಆಶ್ರಮದಲ್ಲಿರುವರು; ಆದ್ದರಿಂದ ಅವರನ್ನು ಶೀಘ್ರವಾಗಿ ಕರೆಕಳಿಸು" ಎಂದನು. ಆಕಾಶರಾಜನು ಅದೇ ಕ್ಷಣದಲ್ಲಿ ತನ್ನ ತಮ್ಮನಾದ ತೊಂಡಮಾನನನ್ನು ಕರೆದು ಶುಕಾಚಾರ್ಯರನ್ನು ಕರೆಯುವದಕ್ಕೆ ಕಳುಹಿದನು. ಆಗ ಅವನು ವಾಯುವೇಗಕ್ಕೆ ಸಮಾನವಾದ ವೇಗವುಳ್ಳ ರಥದಲ್ಲಿ ಕುಳಿತುಕೊಂಡು ಬೇಗನೆ ಹೋಗಿ, ಶುಕಾಶ್ರಮಕ್ಕೆ ಮುಟ್ಟಲು, ಅದೇ ಧ್ಯಾನಯೋಗವನ್ನು ಮುಗಿಸಿಕೊಂಡು ಶುಕಮುನಿಯು ಕುಳಿತಿದ್ದನು. ಆ ಮುನಿಯನ್ನು ಕಂಡು ಸಾಷ್ಟಾಂಗ ನಮಸ್ಕಾರವನ್ನು ಮಾಡಿ ತೊಂಡಮಾನನು—"ಶುಕಮುನಿಗಳೇ, ನಮ್ಮಣ್ಣನಾದ ಆಕಾಶರಾಜನು ವಿವಾಹಕ್ಕೆ ಯೋಗ್ಯಳಾದ ತನ್ನ ಮಗಳನ್ನು ಶ್ರೀನಿವಾಸನಿಗೆ ಕೊಟ್ಟು ಲಗ್ನ ಮಾಡಲಪೇಕ್ಷಿಸಿ, ನಮ್ಮ ಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಯುಕ್ತಾಯುಕ್ತ ವಿಚಾರಮಾಡುವದಕ್ಕಾಗಿ ಕರೆಸಿರುವನು; ಶ್ರೀನಿವಾಸನ

ಸರ್ವವೃತ್ತಾಂತವನ್ನು ತಿಳಿದು, ಅವನಿಗೆ ಶುಭಸೂಚಕವಾದ ಪತ್ರವನ್ನು ಬರೆಯುವದಕ್ಕೆ ನಿಮ್ಮನ್ನು ಕರೆದುಕೊಂಡು ಬರುವದೆಂದು ನನಗೆ ಆಜ್ಞೆಯಾಗಿರುವ ಕಾರಣ, ನಾನು ಬಂದಿರುವೆನು; ಆದ್ದರಿಂದ ಶೀಘ್ರವಾಗಿ ನಮ್ಮ ನಗರಕ್ಕೆ ಬರಬೇಕು" ಎಂದು ಹೇಳಿಕೊಂಡನು. ಆ ಸಂತೋಷಕರವಾದ ಸುದ್ದಿಯನ್ನು ಕೇಳಿ ಶುಕಮುನಿಯು ಅತ್ಯಾನಂದದಿಂದ, ಭ್ರಮಿಷ್ಟನಹಾಗೆ ತನ್ನ ಕಮಂಡಲುವನ್ನು ಒಡೆದು ಒಗೆದು, ಕೃಷ್ಣಾಜಿನವನ್ನು ಹರಿದು ಚಲ್ಲಿಕೊಟ್ಟು, ತನ್ನ ಕೊರಳೊಳಗಿನ ತುಳಸೀ ಮಾಲೆಯನ್ನು ಕಿತ್ತು ಬಿಸುಟಿ, ಕುಣಿದಾಡಹತ್ತಿದನು. ಈ ಪ್ರಕಾರ ಒಂದು ಮುಹೂರ್ತದವರೆಗೆ ಪರವಶರಾಗಿ, ಅನಂತರ ಶುಕಾಚಾರ್ಯರು ಎಚ್ಚತ್ತು ತೊಂಡಮಾನನಿಗೆ—"ತೋಂಡಮಾನರಾಜನೇ, ಪುರುಷಾರ್ಥಕ್ಕೆ ಸಾಧನವಾಗಿಯೂ, ಸಕಲ ಲೋಕಕ್ಕೆ ಪವಿತ್ರವಾಗಿಯೂ ಇರುವ ಕನ್ಯಾದಾನವನ್ನು ಶ್ರೀನಿವಾಸನಿಗೆ ಮಾಡುವಿರೆಂದು ಹೇಳಿದ್ದನ್ನು ಕೇಳಿ ನನಗೆ ಪರಮ ಸಂತೋಷವಾಯಿತು. ಆ ಶ್ರೀನಿವಾಸನ ಕೃಪಾಕಟಾಕ್ಷದಿಂದ ಆಕಾಶರಾಜನ ಬುದ್ಧಿಯು ಇದೇ ಪ್ರಕಾರ ಮಹಾದಾನ ಮಾಡುವದರಲ್ಲಿ ಆಸಕ್ತಿಯುಳ್ಳದ್ದಾಗಲಿ," ಎಂದು ಆಕಾಶರಾಜನನ್ನು ಹೊಗಳಿದನು. ಅನಂತರ ಶುಕಮುನಿಗಳು ಪದ್ಮಸರೋವರದಲ್ಲಿ ಸ್ನಾನ ಮಾಡಿ, ತಮ್ಮ ಅಹ್ನಿಕವನ್ನು ಮುಗಿಸಿಕೊಂಡು, ಜಗತ್ಪತಿಯಾದ ಶ್ರೀನಿವಾಸನಿಗೆ ಕನ್ಯಾನಿಶ್ಚಯ ಮಾಡುವದಕ್ಕೆ ಹೀಗೇ ಹೋಗುವದು ಯೋಗ್ಯವಲ್ಲೆಂದು ತಿಳಿದು, ತಮಗೆ ತಕ್ಕ ವಸ್ತ್ರಾಲಂಕಾರಗಳಿಂದ ಅಲಂಕೃತರಾದರು.—ನೂತನವಾದ ದರ್ಭೆಗಳನ್ನು ತಂದು, ಪುಷ್ಪಗಳಿಂದ ಸಹಿತವಾಗಿ ತಮ್ಮ ಶಿರಸ್ಸಿನಲ್ಲಿ ಧರಿಸುವದಕ್ಕೆ ಯೋಗ್ಯವಾದ ಕಿರೀಟವನ್ನು ಮಾಡಿಕೊಂಡರು; ತುಳಸೀ ಮಾಲೆಗಳನ್ನು ಕೊರಳಲ್ಲಿ ಧರಿಸಿ, ತುಳಸೀ ಕಾಷ್ಠದಿಂದ ಕಿವಿಗಳಲ್ಲಿ ಆಭರಣಗಳನ್ನು ಮಾಡಿಟ್ಟುಕೊಂಡರು. ಕೃಷ್ಣಾಜಿನದಿಂದ ತಮ್ಮ ಪಾದಗಳ ತನಕ ಉದ್ದವಾದ ಅಂಗಿಯನ್ನು ಮಾಡಿಕೊಂಡು ಅಲಂಕೃತರಾದರು; ಹಾಗು ಜ್ಞಾನವೆಂಬ ಅಶ್ವವನ್ನು ಹತ್ತಿಕೊಂಡು, ಆಕಾಶರಾಜನ ಪಟ್ಟಣಕ್ಕೆ ಬಂದರು.

ಆಗ ಆಕಾಶರಾಜನು, ಶುಕಮುನಿಗಳು ಬಂದದ್ದನ್ನು ಕೇಳಿ ಅವರನ್ನು ಮರ್ಯಾದೆಯಿಂದ ಕರೆದುಕೊಂಡು ಬರುವದಕ್ಕಾಗಿ ತನ್ನ ಚತುರಂಗ ಸೈನ್ಯವನ್ನು ಕೂಡಿಕೊಂಡು ಪುರೋಹಿತರಾದ ಬೃಹಸ್ಪತ್ಯಾಚಾರ್ಯರನ್ನು ಮುಂದೆ ಮಾಡಿ

ಕೊಂಡು ಬಹಳ ಸಂಭ್ರಮದಿಂದ ಬಂದನು. ಅವನು ಶುಕಮುನಿಗಳನ್ನು ಕಾಣು ತ್ತಲೆ ತನ್ನ ಯಾನದಿಂದಿಳಿದು, ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಶುಕಮು ನಿಗಳನ್ನು ಒಂದು ಶೃಂಗರಿಸಿದ ಆನೆಯ ಮೇಲೆ ಕೂಡ್ರಿಸಿಕೊಂಡು, ತನ್ನ ಮಂದಿ ರಕ್ಕೆ ಕರೆದುಕೊಂಡು ಬಂದನು. ಆ ಮೇಲೆ ಶುಕಮುನಿಗಳನ್ನು ರತ್ನಮಯವಾದ ಪೀಠದಲ್ಲಿ ಕೂಡ್ರಿಸಿ, ಉಭಯಗುರುಗಳಿಗೆ ಪೂಜೆಯನ್ನು ಮಾಡಿ, ವಿನಯದಿಂದ— "ಋಷಿಗಳಿರಾ, ನಿಮ್ಮ ಉಭಯತರ ಸಮ್ಮತಿಯಿಂದ ಶ್ರೀನಿವಾಸನಿಗೆ ನನ್ನ ಮಗ ಳಾದ ಪದ್ಮಾವತಿಯನ್ನು ಕೊಡಬೇಕೆಂದು ಇಚ್ಛಿಸುತ್ತೇನೆ," ಎಂದು ನುಡಿದನು. ಅದಕ್ಕೆ ಶುಕಮುನಿಗಳು— "ಮಹಾಭಾಗ್ಯಶಾಲಿಯಾದ ಆಕಾಶರಾಜನೇ, ಶ್ರೀನಿವಾ ಸನಿಗೆ ಕನ್ಯಾದಾನ ಮಾಡುವ ವಿಷಯದಲ್ಲಿ ಸಂಶಯವನ್ನೇ ಮಾಡಬೇಡ. ನೀನು ಕೃತಾರ್ಥನಾದೆ; ಮತ್ತು ನಿನ್ನ ವಂಶವೇ ಪರಿಶುದ್ಧವಾಯಿತು. ನೀನು ಪೂರ್ವ ಜನ್ಮದಲ್ಲಿ ಏನು ಪುಣ್ಯವನ್ನು ಮಾಡಿದೆಯೋ, ಅದರ ಪ್ರಭಾವದಿಂದ ಜಗತ್ಪಿತ ನಾದ ಶ್ರೀನಿವಾಸನು ನಿನ್ನ ಜಾಮಾತೃವಾಗುವನು. ಅಂದ ಮೇಲೆ ನಿನಗಿಂತ ಪುಣ್ಯವಂತನು ಯಾವನಿರುವನು? ಆದ್ದರಿಂದ "ಶುಭಸ್ಯ ಶೀಘ್ರಂ" ಎಂಬ ಮಾತಿನ ಪ್ರಕಾರ ಬೇಗನೆ ವಿವಾಹವನ್ನು ಮಾಡು. ನಾವು ಕಂದ, ಮೂಲ, ಫಲ ಗಳನ್ನು ಭಕ್ಷಿಸುತ್ತ ವಿರಕ್ತರಾಗಿ ಅನೇಕ ದಿವಸಗಳವರೆಗೂ ತಪಸ್ಸನ್ನು ಮಾಡಿ ದರೂ. ಶ್ರೀಹರಿಯನ್ನು ಪ್ರತ್ಯಕ್ಷವಾಗಿ ನೋಡಲಿಲ್ಲ, ಈಗ ನಿನ್ನ ಸಮಾಗಮದಿಂದ ನಾವೆಲ್ಲರೂ ಲಕ್ಷ್ಮೀದೇವಿಯಿಂದ ಕೂಡಿದ ಶ್ರೀನಿವಾಸನನ್ನು ಪ್ರತ್ಯಕ್ಷವಾಗಿ ನೋಡಿ ಕೃತಾರ್ಥರಾಗುವೆವು;" ಎಂದು ಹೇಳಿದರು. ಆಕಾಶರಾಜನು ಸಂತೋಷ ಪಟ್ಟು ಶುಕಮುನಿಗಳನ್ನು ಹೊಗಳಿ,—"ಸ್ವಾಮಿ, ನಾನು ಕೃತಕೃತ್ಯನಾದೆನು," ಎಂದು ನುಡಿದು ಬೃಹಸ್ಪತ್ಯಾಚಾರ್ಯರಿಗೆ—"ವಧೂವರರ ಗೋತ್ರ, ನಕ್ಷತ್ರ, ಗ್ರಹಗಳ ಬಲಾಬಲವನ್ನು ನೋಡತಕ್ಕದ್ದು," ಎಂದು ಹೇಳಲಾಗಿ, ಬೃಹಸ್ಪತ್ಯಾ ಚಾರ್ಯರು ಬಕುಲಾವತಿಯಿಂದ ವರನ ಗೋತ್ರವು ವಶಿಷ್ಠ, ನಕ್ಷತ್ರ ಶ್ರವಣವಿ ರುವದೆಂದು ತಿಳಿದರು. ಕನ್ಯೆಯ ಗೋತ್ರವು ಅತ್ರಿ; ನಕ್ಷತ್ರ ಮೃಗಶಿರವಿರುವ ದೆಂದು ಆಕಾಶರಾಜನಿಂದ ಅರಿತರು. ಬಳಿಕ ಅವೆರಡರ ಬಲಾಬಲವನ್ನು ನೋಡಿ,— "ರಾಜನೇ, ನಾಡೀಕೂಟ, ಸೂತ್ರಕೂಟ, ಯೋನಿಕೂಟಗಳು ವಿಶೇಷವಾಗಿ ಅನುಕೂಲವಾಗಿರುವವು, ಎಲ್ಲ ಗ್ರಹಗಳು ಶುಭದರ್ಶನವುಳ್ಳವುಗ ಳಾಗಿರುವವು, ಆದ್ದರಿಂದ ನಿನ್ನ ಬಂಧು ಮಿತ್ರರನ್ನು ಕೂಡಿಕೊಂಡು ಆಲೋಚನೆ

ಯನ್ನು ಮಾಡಿ, ಕನ್ಯಾದಾನಮಾಡು," ಎಂದು ಹೇಳಿದರು. ಆಗ ಗುರುಗಳ ಆಜ್ಞೆಯಂತೆ ಆಕಾಶರಾಜನು ತನ್ನ ಬಂಧು-ಬಾಂಧವರನ್ನೂ, ಮಿತ್ರರನ್ನೂ ಕೂಡಿಕೊಂಡು ಕನ್ಯಾದಾನಮಾಡುವ ವಿಷಯದಲ್ಲಿ ಆಲೋಚನೆಯನ್ನು ಮಾಡಿದನು. ಅವರೆಲ್ಲರು ತಮ್ಮ ಸಮ್ಮತಿಯನ್ನು ಕೊಟ್ಟು ಆಕಾಶರಾಜನನ್ನು ಕೊಂಡಾಡಿದರು. ಆಗ ರಾಜನು ಸಭೆಯನ್ನು ಮಾಡಿಸಿ, ಪುಣ್ಯಾಹವಾಚನೆಯನ್ನು ಮಾಡಿಸಿಕೊಂಡು ತನ್ನ ಸಿಂಹಾಸನದಿಂದ ಎದ್ದುನಿಂತು, ಸಭೆಯಲ್ಲಿ ತನ್ನ ಭುಜವನ್ನು ಎತ್ತಿಕೊಂಡು– " ಬಾಂಧವರೇ, ನನ್ನ ಪುತ್ರಿಯನ್ನು ಶ್ರೀನಿವಾಸನಿಗೆ ಕೊಡುತ್ತೇನೆ; ನೀವೆಲ್ಲರೂ ನನ್ನ ಮೇಲೆ ಅನುಗ್ರಹವನ್ನು ಮಾಡಿರಿ," ಎಂದು ವಾಗ್ದಾನವನ್ನು ಮಾಡಿ, ಆನಂತರದಲ್ಲಿ ಗುರುಗಳಿಗೆ— " ಆಚಾರ್ಯರೇ, ಇನ್ನು ಮೇಲೆ ಏನು ಮಾಡ ತಕ್ಕದ್ದು ? ಅದನ್ನು ಹೇಳಿರಿ" ಎನ್ನಲು ಗುರುಗಳು,— " ರಾಜನೇ, ಇನ್ನು ಮೇಲೆ ಶ್ರೀನಿವಾಸನಿಗೆ ಲಗ್ನಪತ್ರವನ್ನು ಬರೆದು ಒಬ್ಬ ಬ್ರಾಹ್ಮಣನ ಕೂಡ ಕಳಿಸು" ಎಂದರು. ಆಗ ಆಕಾಶರಾಜನು ಗುರುಗಳು ಹೇಳಿದಂತೆ ಅಪ್ರಾಕೃತ ಶರೀರವುಳ್ಳ ಶ್ರೀನಿವಾಸನಿಗೆ ಲಗ್ನಪತ್ರವನ್ನು ಬರೆದನು. ಹ್ಯಾಗೆಂದರೆ,— "ಅಪ್ರಾಕೃತನೂ, ನಿತ್ಯನೂ, ಸಚ್ಚಿದಾನಂದಮೂರ್ತಿಯೂ, ಸ್ವತಂತ್ರನೂ, ಅದ್ವಿತೀಯನೂ, ಅನಂತರೂಪನೂ, ಶಾರ್ಙ್ಗಧನುರ್ಧಾರಿಯೂ, ಭಕ್ತಪ್ರಿಯನೂ, ದೇವಾಧಿದೇವನೂ, ಸರ್ವವ್ಯಾಪ್ತನೂ, ಲಕ್ಷ್ಮೀಪತಿಯೂ, ವೇಂಕಟಾಚಲವಾಸಿಯೂ ಆದ ಶ್ರೀನಿವಾಸನಿಗೆ ಆಕಾಶರಾಜನು ಮಾಡುವ ಆಶೀರ್ವಾದಗಳು. ಈ ಚೈತ್ರ ಶುದ್ಧ ೧೩ಯ ವರೆಗೆ ಕ್ಷೇಮ, ನಿಮ್ಮ ಕ್ಷೇಮಗಳನ್ನು ತಿಳಿಸುತ್ತಿರಬೇಕು. ವಿಶೇಷ—ನಿಮಗೆ ನನ್ನ ಪುತ್ರಿಯಾದ ಪದ್ಮಾವತಿಯನ್ನು ಕೊಡುವದು ಗೊತ್ತುಮಾಡಿ, ಈ ವೈಶಾಖ ಶುದ್ಧ ೧೦ ಶುಕ್ರವಾರ ಲಗ್ನಮಾಡುವದನ್ನು ನಿಶ್ಚಯ ಮಾಡಿದ್ದೇವೆ; ನೀವು ನಿಮ್ಮ ಬಾಂಧವರಿಂದ ಸಹಿತರಾಗಿ ಬಂದು, ಪದ್ಮಾವತಿಯನ್ನು ವಿವಾಹ ವಿಧಿಪೂರ್ವಕವಾಗಿ ಅಂಗೀಕಾರಮಾಡಬೇಕು. ಪುರುಷೋತ್ತಮನೇ, ನಿನಗೆ ಹೆಚ್ಚಿಗೆ ಬರೆಯತಕ್ಕದ್ದೇನದೆ ? ಶುಕಾಚಾರ್ಯರು ಸಮಕ್ಷ ಹೇಳಲಾಗಿ ಎಲ್ಲವು ತಿಳಿದೀತು. ಇತಿ ಆಶೀರ್ವಾದ. " ಹೀಗೆ ಬರೆದ ಪತ್ರವನ್ನು ಶುಕಾಚಾರ್ಯರ ಕೈಯಲ್ಲಿ ಕೊಟ್ಟು ಅವರಿಗೆ, " ನೀವೇ ಹೊರಡಬೇಕೆಂ"ದು ಹೇಳಿ ಹೊರಡಿಸಿ, ಆಕಾಶರಾಜನು ತಾನು ಅವರನ್ನು ಕಳಿಸಲಿಕ್ಕೆ ಒಂದು ಹರದಾರಿಯ

ತನಕ ಬಂದು, ಅವರಿಗೆ—"ಆಚಾರ್ಯರೇ, ಯಾವ ಪ್ರಕಾರದಿಂದಾದರೂ ಶ್ರೀನಿವಾಸನ ಮನಸ್ಸನ್ನು ಒಡಂಬಡಿಸಿರಿ; ಲಕ್ಷವಾಗಲಿ, ಕೋಟಿಯಾಗಲಿ, ಅರ್ಬುದವಾಗಲಿ ಬೇಡಿದರೂ ವರದಕ್ಷಿಣೆಯನ್ನು ಕೊಡುತ್ತೇನೆ, ಮುಖ್ಯವಾಗಿ ಲಗ್ನಕಾರ್ಯವು ಆಗುವಂತೆ ಮಾಡಿರಿ," ಎಂದು ಹೇಳಿ, ಅವರನ್ನು ಕಳಿಸಿ, ತಿರುಗಿ ಮನೆಗೆ ಬಂದನು.

ಇತ್ತ ಶುಕಮುನಿಗಳು ಮಧ್ಯಾಹ್ನಸಮಯಕ್ಕೆ ವೇಂಕಟಾಚಲವನ್ನು ಮುಟ್ಟಿ, ತಮ್ಮ ಶಿಷ್ಯರೊಂದಿಗೆ ಪರ್ವತವನ್ನು ಏರಿ, ಶ್ರೀನಿವಾಸನ ದರ್ಶನಾಪೇಕ್ಷೆಯಿಂದ ಮಾರ್ಗಶ್ರಮವಿಲ್ಲದೆ, ಸಂತೋಷಭರಿತರಾಗಿ ವಲ್ಮೀಕಕ್ಕೆ ಬಂದರು. ಬಕುಲಾವತಿಯಾದರೂ ಶುಕಮುನಿಗಳ ಸಂಗಡಲೇ ಬಂದಳು. ಆ ಸಮಯದಲ್ಲಿ ಶ್ರೀನಿವಾಸನು ತನ್ನ ಮನಸ್ಸಿನಲ್ಲಿ—"ನನ್ನ ತಾಯಿಯಾದ ಬಕುಲಾದೇವಿಯು ಆಕಾಶರಾಜನ ಪಟ್ಟಣದಿಂದ ಇನ್ನೂ ಯಾಕೆ ಬರಲಿಲ್ಲ"ವೆಂದು ಚಿಂತಿಸುತ್ತಿದ್ದನು. ಅದೇ ಸಮಯದಲ್ಲಿ ಶುಕಮುನಿಗಳು ತಮ್ಮ ತಲೆಯತನಕ ಕೈಗಳನ್ನೆತ್ತಿ ಮುಗಿಯುತ್ತ ಬರುತ್ತಿರಲು, ಅವರನ್ನು ಕಂಡು ಶ್ರೀನಿವಾಸನು, ತನ್ನ ಆಸನದಿಂದ ಎದ್ದು, ಎದುರಿಗೆ ಬಂದು,—ಶುಕಮುನಿಗಳೇ, ನನ್ನ ಕಾರ್ಯವು ಪಕ್ವವೋ ? ಅಪಕ್ವವೋ" ಎಂದು ಕೇಳಿದನು. ಆಗ ಶುಕಮುನಿಗಳು— "ಕೃಪಾನಿಧಿಯೇ, ನಿನ್ನ ಕಾರ್ಯವು ಪಕ್ವವಲ್ಲದೆ ಅಪಕ್ವವೆಂದಿಗಾದರೂ ಆಗುವದುಂಟೇ ? ಎಂದು ಶ್ರೀನಿವಾಸನಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ ಕೈಜೋಡಿಸಿಕೊಂಡು ನಿಂತರು. ಶ್ರೀನಿವಾಸನು ಸಂತೋಷದಿಂದ ಆ ಮುನಿಗಳನ್ನು ಅಪ್ಪಿಕೊಂಡು— "ಶುಕಮುನಿಗಳೇ, ವಿವಾಹಕಾರ್ಯದಲ್ಲಿ ಯಾವ ಮನುಷ್ಯರು ಸಹಸ್ರ ಸುಳ್ಳು ಮಾತುಗಳನ್ನು ಆಡಿ ಲಗ್ನವನ್ನು ಮಾಡುತ್ತಾರೋ, ಅವರು ಸಹ ವೈಕುಂಠಲೋಕವನ್ನು ಹೊಂದುವರೆಂದು ನನ್ನ ವಚನವದೆ, ಬ್ರಹ್ಮಾಂಡವೇ ನನ್ನ ಮನೆಯು. ನಾಭಿಕಮಲದಿಂದ ಉತ್ಪನ್ನನಾದ ಬ್ರಹ್ಮದೇವನು ನನ್ನ ಮಗನು, ಲಕ್ಷ್ಮಿಯೇ ನನ್ನ ಪತ್ನಿಯು, ಅಸಂಖ್ಯವಾದ ೮೪ ಲಕ್ಷ ಜೀವರಾಶಿಗಳು ನನ್ನಿಂದ ಉತ್ಪನ್ನವಾದವುಗಳು, ಇವುಗಳ ರಕ್ಷಣೆಯನ್ನು ಮಾಡುವ ವಿಷಯದಲ್ಲಿ ನಾನು ತತ್ಪರನಾಗಿದ್ದೇನೆ; ಇಂಥ ಜಗತ್ಕುಟುಂಬಿಯಾದ ನನ್ನ ವಿವಾಹಕಾರ್ಯದಲ್ಲಿ ಸುಳ್ಳುಮಾತುಗಳನ್ನಾಡಿದರೆ ವೈಕುಂಠಲೋಕವನ್ನು ಹೊಂದುವದು ವಿನಾಶ

ರ್ಯವು ? ಶುಕಮುನಿಗಳೇ, ನನ್ನ ಕಾರ್ಯಕ್ಕಾಗಿ ನೀವು ಎಷ್ಟು ಸುಳ್ಳು ಮಾತುಗಳನ್ನಾಡಿದಿರೋ ಏನೋ ? ನೀವು ಮಾಡಿದ ಉಪಕಾರಕ್ಕಾಗಿ ನಾನು ಪ್ರತ್ಯುಪಕಾರವನ್ನೇನು ಮಾಡಲಿ ? ಆದರೂ ನಿಮಗೆ ನನ್ನ ದೇಹಾಲಿಂಗನವನ್ನು ಕೊಡುತ್ತೇನೆ. ನನ್ನ ದೇಹಕ್ಕಿಂತಲೂ ಶ್ರೇಷ್ಠವಾದ ಪದಾರ್ಥವು ನಿಮಗೆ ಕೊಡಲಿಕ್ಕೆ ನನ್ನಲ್ಲಿ ಮತ್ತೊಂದಿಲ್ಲ." ಎಂದು ಮಾತನಾಡಿ, ಶ್ರೀನಿವಾಸನು ಆ ಶುಕಮುನಿಗಳಿಗೆ—ಯೋಗೀಂದ್ರರೇ, ರಾಮಾವತಾರದಲ್ಲಿ ಕಪೀಶ್ವರನಾದ ಹನುಮಂತನು ಸೀತೆಯ ಶೋಧವನ್ನು ಮಾಡಿದ್ದರಿಂದ ಸಂತುಷ್ಟನಾಗಿ ನಾನು ಅವನಿಗೆ ಸಹಭೋಜನವನ್ನು ಕೊಟ್ಟೆನು; ಅದೇ ಪ್ರಕಾರ ನನ್ನ ವಿವಾಹಕಾರ್ಯಕ್ಕಾಗಿ ನೀವು ಸಹಾಯವನ್ನು ಮಾಡಿರುವದು ಅದಕ್ಕೂ ಹೆಚ್ಚಿನ ಪುಣ್ಯಕಾರ್ಯವೆಂದು ನಾನು ತಿಳಿಯುತ್ತೇನೆ; ನನ್ನ ಪರಮಭಕ್ತನಾದ ಹನುಮಂತನಿಗೆ ಮುಂದಣ ಬ್ರಹ್ಮಪದವಿಯನ್ನು ಕೊಟ್ಟಿರುವೆನು; ಎಂದು ಸವಿಮಾತಿನಿಂದ ಕೊಂಡಾಡಿ, ಶ್ರೀನಿವಾಸನು— "ಶುಕಮುನಿಗಳೇ, ಅವೇನು ನಿಮ್ಮ ಬಗಲಲ್ಲಿ ? ಪತ್ರವೆಂಬ ಹಾಗೆ ಕಾಣುವದು" ಎಂದು ಕೇಳಿದನು. ಅವಕ್ಕೆ ಶುಕಮುನಿಗಳು— " ದೇವಾಧಿದೇವನೇ, ಆಕಾಶರಾಜನು ನಿನಗೆ ಬರೆದ ಲಗ್ನ ಪತ್ರವಿದು, " ಎಂದು ಹೇಳಿ ಅದನ್ನು ಶ್ರೀನಿವಾಸನ ಕೈಯಲ್ಲಿ ಕೊಟ್ಟರು. ಶ್ರೀನಿವಾಸನು ಆ ಪತ್ರವನ್ನು ಆದರದಿಂದ ತೆಗೆದುಕೊಂಡು ಮುನಿಗಳೇ, ಆಕಾಶರಾಜನೂ, ಆತನ ಪತ್ನಿಯಾದ ಧರಣೀದೇವಿಯೂ, ತೋಂಡಮಾನನೂ, ಆತನ ಪುತ್ರನೂ ಎಲ್ಲರೂ ಕ್ಷೇಮದಿಂದಿರುವರೇ ? " ಎಂದು ಕೇಳಿ, ಅನಂತರ ಪತ್ರವನ್ನು ಓದಿ ಸಂತುಷ್ಟನಾದನು.

ಆ ಮೇಲೆ ಶ್ರೀನಿವಾಸನು ತಾನು ಕೃಷ್ಣಾವತಾರದಲ್ಲಿ ರುಕ್ಮಿಣಿಗೆ ಪತ್ರಬರೆದಂತೆ ಆಕಾಶರಾಜನಿಗೆ ಈಗ ಪ್ರತ್ಯುತ್ತರವನ್ನು ಬರೆದನು. ಅದು ಹ್ಯಾಗಂದರೆ,— "ರಾಜಾಧಿರಾಜ ಪೂಜ್ಯ ಸುಧರ್ಮರಾಜನ ಪುತ್ರರಾದ ಆಕಾಶರಾಜರಿಗೆ,—ಶ್ರೀನಿವಾಸನು, ಮಾಡುವ ನಮಸ್ಕಾರವು, ನಿಮ್ಮ ಪತ್ರವನ್ನು ನೋಡಿ ಸಂತೋಷವಾಯಿತು, ನೀವು ಬರೆದ ಪ್ರಕಾರ ವೈಶಾಖ ಶುದ್ಧ ೧೦ ಯದಿನ ಮಹೋತ್ಸವದಲ್ಲಿ ನಿಮ್ಮ ಪುತ್ರಿಯನ್ನು ಅಂಗೀಕರಿಸುವೆನು; ಪೂರ್ವದಲ್ಲಿ ಸಮುದ್ರರಾಜನು ತನ್ನ ಕನ್ನಿಕೆಯನ್ನು ನನಗೆ ಕೊಟ್ಟು ಕೀರ್ತಿಯನ್ನು ಪಡೆದಪ್ರಕಾರ, ನೀವು ನನಗೆ ನಿಮ್ಮ ಕನ್ನಿಕೆಯನ್ನು ಕೊಟ್ಟು ಕೀರ್ತಿಯನ್ನು ಹೊಂದಿರಿ. ಪೂರ್ವದಲ್ಲಿ ಕಪಿಲಋಷಿಯಿಂದ

ಪತಿತರಾದ ಸಗರ ರಾಜನ ಪುತ್ರರನ್ನು, ಭಗೀರಥರಾಜನು ಭಾಗೀರಥಿಯನ್ನು ತಂದು ಉದ್ಧಾರಮಾಡಿದಂತೆ, ನಿಮ್ಮ ಸುಂದರಿಯಾದ ಕನ್ಯೆಯನ್ನು ನನಗೆ ಕೊಟ್ಟು ನಿಮ್ಮ ಪೂರ್ವೋತ್ತರ ಕುಲವನ್ನು ಉದ್ಧಾರಮಾಡಿ ಕೀರ್ತಿಯನ್ನು ಹೊಂದಿರಿ. ವಿಶೇಷ ಬರೆಯೋಣವೇನದೆ ? ಇತಿ ನಮಸ್ಕಾರ" ಎಂದು ಪತ್ರವನ್ನು ಬರೆದ ಶುಕ ಮುನಿಗಳ ಕೈಯಲ್ಲಿ ಕೊಟ್ಟು,—"ಮುನಿಗಳೇ, ಆಕಾಶರಾಜನು ನನ್ನ ಕುಲ-ಗೋತ್ರ-ವಾಸಸ್ಥಾನ ಮುಂತಾದವುಗಳನ್ನು ವಿಚಾರಮಾಡದೆ ನನಗೆ ಕನ್ನಿಕೆಯನ್ನು ಕೊಡುತ್ತೇನೆಂದು ಹ್ಯಾಗೆ ವಚನಕೊಟ್ಟನೋ ತಿಳಿಯದು" ಎಂದು ಕೇಳಲು, ಶುಕಮುನಿಗಳು-"ಶ್ರೀನಿವಾಸನೇ, ನಿನಗೆಲ್ಲಿಯ ಕುಲ, ಗೋತ್ರ, ಜನ್ಮ, ಮರಣಗಳು ? ಪುರುಷೋತ್ತಮನೆ, ಲೋಕಕ್ಕೆ ನಿನ್ನ ವಿಡಂಬನೆಯನ್ನು ತೋರಿಸುವದಕ್ಕಾಗಿ ಮನುಷ್ಯಾವತಾರವನ್ನು ಧಾರಣ ಮಾಡಿರುವೆ. ಇಂಥ ನಿನಗೆ ಆಕಾಶರಾಜನು ನನ್ನ ವಾಕ್ಯದಿಂದ ಕನ್ನಿಕೆಯನ್ನು ಕೊಡುವನು, ನೀನು ಸ್ವೀಕಾರಮಾಡಿ ಆ ರಾಜನಮೇಲೆ ದಯವನ್ನು ಮಾಡು" ಎಂದು ಹೇಳಿ, ಶ್ರೀನಿವಾಸನನ್ನು ಕೊಂಡಾಡಿ ಆತನ ಅಪ್ಪಣೆಯನ್ನು ತೆಗೆದುಕೊಂಡು, ಸಂತೋಷದಿಂದ ಶುಕಮುನಿಗಳು ಪುನಃ ಆಕಾಶರಾಜನ ಪಟ್ಟಣಕ್ಕೆ ಹೊರಟು ಹೋದರು.

ಇತ್ತ, ಶುಕಮುನಿಗಳು ಹೋದಮೇಲೆ ವೃದ್ಧಳಾಗಿಯೂ, ಮಾರ್ಗಾಯಾಸದಿಂದ ಬಳಲಿದವಳಾಗಿಯೂ ಇರುವ ತನ್ನ ತಾಯಿಯಾದ ಬಕುಲಾದೇವಿಯು ಬಂದದ್ದನ್ನು ಕಂಡು ಶ್ರೀನಿವಾಸನು ಎದ್ದು ನಮಸ್ಕಾರವನ್ನು ಮಾಡಿ—ತಾಯಿ, ನೀನು ಬರುವದಕ್ಕೆ ಇಷ್ಟು ಅವಕಾಶವು ಏನು ಕಾರಣವಾಯಿತು ! ಅಲ್ಲಿ ಏನು ವೃತ್ತಾಂತವು ನಡೆಯಿತು ? ಅದನ್ನು ಹೇಳು," ಎಂದು ಏನೂ ಅರಿಯದವನಹಾಗೆ ಕೇಳಿದನು, ಬಕುಲಾದೇವಿಯು—"ಶ್ರೀನಿವಾಸನೇ, ಕನ್ಯಾಘಟನೆಯನ್ನು ಮಾಡಬೇಕಾದರೆ ಬಹಳೇ ಯತ್ನವನ್ನು ಮಾಡಬೇಕಾಯಿತು. " ಎಂದು ಹೇಳಿ, ಅಷ್ಟರಲ್ಲಿ ಜಾಗರೂಕಳಾಗಿ—"ಪುರುಷೋತ್ತಮನೇ, ನಿನ್ನ ಕಾರ್ಯವು ದೈವದಿಂದಲೇ ಸಾಧಿಸಲ್ಪಟ್ಟಿತಲ್ಲದೆ, ನನ್ನ ಯತ್ನವು ಏನೂ ಉಪಯೋಗಿಸಲಿಲ್ಲ. ಅಲ್ಲಿ ನಡೆದ ಇನ್ನೊಂದು ಸಂಗತಿಯೇನೆಂದರೆ,-ನರನಾರಾಯಣಾಶ್ರಮದಿಂದ "ಧರ್ಮದೇವಿ"ಯೆಂಬ ಒಬ್ಬ ಕೊರವಂಜಿಯು ಬಂದು—ಪದ್ಮಾವತಿಯನ್ನು ಶ್ರೀನಿವಾಸನಿಗೇ ಕೊಡಬೇಕೆಂದು ಹೇಳಿದಳಂತೆ, ಮತ್ತು ಆ ಕನ್ನಿಕೆಯಾದರೂ ನಿನ್ನ ಹೊರತಾಗಿ ಇನ್ನೊಬ್ಬ ಲೌಕಿಕ

ವರನನ್ನು ಇಚ್ಛಿಸುವದಿಲ್ಲವಂತೆ, ಹೀಗಾಗಿ ನಿಮ್ಮ ಉಭಯತರ ಮಾತಿನಿಂದಲೇ ತಮ್ಮ ಪುತ್ರಿಯನ್ನು ನಿನಗೆ ಕೊಡುತ್ತೇವೆಂದು ಆ ರಾಜದಂಪತಿಗಳು ಸಂಕಲ್ಪ ವನ್ನು ಮಾಡಿದರು, ಇದಕ್ಕೆಲ್ಲ ನಿನ್ನ ದೈವವೇ ಮುಖ್ಯ ಕಾರಣವೆಂದು ತಿಳಿಯು ತ್ತೇನೆ" ಎಂದು ಹೇಳಿದ ತನ್ನ ತಾಯಿಯ ಮಾತುಗಳನ್ನು ಕೇಳಿ ಶ್ರೀನಿವಾಸನು ಮುಗುಳು ನಗೆಯಿಂದ ತನ್ನ ಮನಸ್ಸಿನಲ್ಲಿ—ನಾನು ಮಾಡಿದ ಕಪಟ ನಾಟಕವು ಈಕೆಗೆ ಹ್ಯಾಗೆ ತಿಳಿದೀತು? ಎಂದು ಯೋಚಿಸಿ ಬಕುಲಾವತಿಗೆ—"ತಾಯೀ, ನೀನು ಯತ್ನಮಾಡಿದ್ದರಿಂದಲೇ ನನ್ನ ಕಾರ್ಯವು ನೆರವೇರಿತು," ಎಂದು ಆಕೆ ಯನ್ನು ಸ್ತೋತ್ರಮಾಡಿದನು.

॥ಇತಿ ಶ್ರೀಭವಿಷ್ಯೋತ್ತರ ಪುರಾಣದಲ್ಲಿ, ಶ್ರೀವೇಂಕಟೇಶಮಾಹಾತ್ಮ್ಯದಲ್ಲಿ "ಪದ್ಮಾವತೀಪರಿಣಯ ನಿಶ್ಚಯ"ವೆಂಬ ಒಂಬತ್ತನೇ ಅಧ್ಯಾಯವು ಮುಗಿದುದು.॥

# ೧೦ನೆಯ ಅಧ್ಯಾಯ

ಶತಾನಂದ ಋಷಿಗಳು ಹೇಳುತ್ತಾರೆ—"ಕೇಳೈ ಜನಕರಾಜನೇ, ನೀನು ಹರಿಭಕ್ತಿಯಲ್ಲಿ ಶ್ರೇಷ್ಠನಾದವನು, ಶ್ರೀಹರಿಗೆ ಪ್ರಿಯನಾದವನು, ಹರಿಕಥೆಯಲ್ಲಿ ಸರ್ವದಾ ಆಸಕ್ತನಾದವನು; ನಿನಗೆ ಭಕ್ತಿಪೂರ್ವಕವಾಗಿ ಶ್ರೀನಿವಾಸನ ಮಧುರ ವಾದ ಕಥೆಯನ್ನು ಹೇಳುವೆನು; ಏಕಾಗ್ರಚಿತ್ತದಿಂದ ಕೇಳು,—ಶ್ರೀನಿವಾಸನು ತಾನು ಆನಂದಪೂರ್ಣನಾದರೂ ಕರ್ಮವನ್ನು ಅನುಭೋಗಿಸುವ ಮನುಷ್ಯರಂತೆ ಮಾತಾಡಿದ್ದೇನಂದರೆ,—ತಾಯೀ, ನೀನು ಎಲ್ಲ ರೀತಿಯಿಂದ ಪ್ರಯತ್ನಮಾಡಿ ಕನ್ಯಾ ನಿಶ್ಚಯವನ್ನು ಮಾಡಿದೆ; ಆದರೆ ನನಗೆ ಲಗ್ನ ಮಾಡಿಕೊಳ್ಳುವ ಮನಸ್ಸು ಆಗಲೊ ಲ್ಲದು. ಯಾಕಂದರೆ,—ನಾನು ಬಂಧುಬಳಗವಿಲ್ಲದವನು, ಮೇಲೆ ದರಿದ್ರನು; ಆಕಾಶರಾಜನು ಬಂಧುಬಾಂಧವರಿಂದ ಯುಕ್ತನಾಗಿ, ಸಕಲೈಶ್ವರ್ಯವನ್ನು ಭೋಗಿ ಸುವ ರಾಜನು; ಅಂದಮೇಲೆ. ಅವನಿಗೂ ನನಗೂ ಶರೀರಸಂಬಂಧವು ಹ್ಯಾಗೆ ಯೋಗ್ಯವಾಗುವದು? ಸರಿಸಮಾನಸ್ಕಂಧರಾದವರಿಗೆ ಶರೀರಸಂಬಂಧವೂ, ಮಿತ್ರ ತ್ವವೂ ಕೂಡುತ್ತವೆ; ಮತ್ತು ಅವರವರಿಗೆ ವಿವಾಹವೂ, ಶೋಭಿಸುತ್ತದೆ; ಆದರೆ

ನಾನು ಬಂಧುರಹಿತನಾಗಿರುವೆನು. ಆದರಿಂದ ನಾನು ಆಕಾಶರಾಜನ ಕೂಡ ಶರೀರಸಂಬಂಧವನ್ನು ಮಾಡಿದರೆ ಅದರಿಂದ ಸುಖವಾಗುವದಿಲ್ಲ; ರಾಜಾಧಿರಾಜನಾದ ಅವನು ನನ್ನಂಥ ಬಂಧುಹೀನನಿಗೆ ಕನ್ನಿಕೆಯನ್ನು ಕೊಡಲಿಕ್ಕೆ ಹ್ಯಾಗೆ ಒಡಂಬಟ್ಟನೋ ದೇವರೇ ಬಲ್ಲನು.” ಎಂದು ನುಡಿಯಲು, ಬಕುಲಾದೇವಿಯು— “ ಶ್ರೀನಿವಾಸನೇ, ಇಂಥ ಮಾತುಗಳನ್ನಾಡುವದುಂಟೇ ? ಲೋಕದಲ್ಲಿ ನಿನ್ನಂಥವನು ಅಸತ್ಯವನ್ನಾಡುವರೇ ? ಶುಕಾಚಾರ್ಯರೂ ಬೃಹಸ್ಪತ್ಯಾಚಾರ್ಯರೂ ಕೂಡಿ ನಿನ್ನ ವಿವಾಹಕಾರ್ಯದಲ್ಲಿ ನಿಷ್ಠೆಯುಳ್ಳವರಾಗಿ, ಕನ್ನಿಕೆಯನ್ನು ಕೊಡುವದಕ್ಕೆ ಆಕಾಶರಾಜನಿಗೆ ಬೋಧಿಸಿರುವರು; ಇದಲ್ಲದೆ, ಆ ರಾಜನಾದರೂ ಭಕ್ತಿಯಿಂದ ನಿನಗೇ ಆ ಕನ್ನಿಕೆಯನ್ನು ಕೊಡುವ ನಿಶ್ಚಯವನ್ನು ಮಾಡಿದ್ದಾನೆ. ಅಂದಮೇಲೆ ಅವನ ಆಶೆಯನ್ನು ವ್ಯರ್ಥಮಾಡುವರೇ ? ಆ ಉಭಯ ಋಷಿಗಳ ವಚನವನ್ನು ಅಸತ್ಯವಾಗಿ ಮಾಡಬಹುದೇ ? “ ನಾನು ದರಿದ್ರನು, ಬಂಧುಹೀನನು” ಎಂದು ಸುಳ್ಳು ನೆವತೆಗೆದು ಸಣ್ಣ ಹುಡುಗರಂತೆ “ ನಾನು ಲಗ್ನ ಮಾಡಿಕೊಳ್ಳಲಾರೆನು” ಎಂದು ನುಡಿಯಬಹುದೇ ? ಎಲ್ಲರ ಆಶೆಯನ್ನು ಪೂರ್ಣ ಮಾಡು; ಇದಲ್ಲದೆ ನಾನು ಬಂಧುವಿಲ್ಲದವನೆಂದು ಯಾಕೆ ಹೇಳುವೆ ? ಬ್ರಹ್ಮನು ನಿನ್ನ ಮಗನಲ್ಲವೇ ? ರುದ್ರನು ಪೌತ್ರನಲ್ಲವೇ ? ಇವರೇ ಮೊದಲಾದ ಬಳಗದವರನ್ನೂ, ಇಂದ್ರಾದಿದೇವತೆಗಳನ್ನೂ, ಸೊಸೆಯಂದಿರನ್ನೂ ಕರೆಸು; ಶ್ರೀನಿವಾಸನೇ. ಕಲಿಯುಗದೊಳಗೆ ಭೂಲೋಕದಲ್ಲಿ ದೇವತೆಗಳ ಆಗಮನವು ದುರ್ಲಭವಾದದ್ದು; ಈ ಪ್ರಸಂಗದಲ್ಲಿ ಆಕಾಶರಾಜನಾದರೂ ನಿನ್ನ ಬಂಧುಬಳಗದವರನ್ನು ನೋಡಲಿ,” ಎಂದು ಹೇಳಿದಳು. ಶ್ರೀನಿವಾಸನು ತನ್ನ ತಾಯಿಯ ಮಾತನ್ನು ಕೇಳಿ— “ ಬಕುಲಾದೇವಿಯೇ, ನಿನ್ನ ಅಪ್ಪಣೆಯನ್ನು ಮೀರುವದಿಲ್ಲ, ನೀನು ಹೇಳಿದಂತೆ ನಡೆಯುವೆನು” ಎಂದು ಹೇಳಿ, ಶ್ರೀನಿವಾಸನು ಆ ಸಮಯದಲ್ಲಿ ಗರುಡನನ್ನೂ, ಶೇಷನನ್ನೂ ಸ್ಮರಿಸಲು, ಅವರಿಬ್ಬರು ಕೂಡಲೆ ಬಂದು ಅವನ ಸಮ್ಮುಖದಲ್ಲಿ ನಿಂತರು. ಆಗ ಶ್ರೀನಿವಾಸನು ಗರುಡನಿಗೆ— “ ಗರುಡನೇ, ನೀನು ಸತ್ಯಲೋಕದಲ್ಲಿರುವ ನನ್ನ ಪುತ್ರನಾದ ಬ್ರಹ್ಮನಬಳಿಗೆ ಹೋಗಿ, ನಾನು ಬರೆದು ಕೊಟ್ಟಿರುವ ಈ ಪತ್ರವನ್ನು ಅವನಿಗೆ ಕೊಡು” ಎಂದು ಹೇಳಿಕಳಿಸಿದನು. ಇದರಂತೆ ಶೇಷನ ಕೈಯಲ್ಲಿಯೂ ಒಂದು ಪತ್ರವನ್ನು ಕೊಟ್ಟು, ಇದನ್ನು ಕೈಲಾಸಪರ್ವತದಲ್ಲಿರುವ ರುದ್ರನಿಗೆ ಕೊಡೆಂದು ಹೇಳಿ ಕಳುಹಿದನು. ಆಗ

ಶ್ರೀನಿವಾಸನ ಅಪ್ಪಣೆಯು ಮೇರೆಗೆ ಆ ಉಭಯುತರು ತಮತಮಗೆ ಹೇಳಿದ ಸ್ಥಳಗಳಿಗೆ ಹೋಗುವದಕ್ಕಾಗಿ ಆಕಾಶಮಾರ್ಗದಿಂದ ನಡೆದರು.

ಅವರಲ್ಲಿ ಪಕ್ಷಿರಾಜನಾದ ಗರುಡನು ಸತ್ಯಲೋಕಕ್ಕೆ ಬಂದು ಸೂರ್ಯನಿಗೆ ಸಮಾನನಾಗಿ ಪ್ರಕಾಶಿಸುತ್ತಿರುವ ಬ್ರಹ್ಮನನ್ನು ಕಂಡು, ಭಕ್ತಿಯಿಂದ ಅವನಿಗೆ ನಮಸ್ಕಾರವನ್ನು ಮಾಡಿ ನಿಂತನು. ಅವನನ್ನು ಪಿತಾಮಹನಾದ ಬ್ರಹ್ಮನು ನೋಡಿ— ' ಪಕ್ಷಿರಾಜನೇ, ನೀನು ಬಹಳ ದಿವಸಕ್ಕೆ ಬಂದೆ: ನನ್ನ ತಂದೆಯಾದ ಶ್ರೀನಿವಾಸನು ಎಲ್ಲಿ ವಾಸಮಾಡಿಕೊಂಡಿರುವನು; " ಎಂದು ಕೇಳಲಾಗಿ, ಗರುಡನು— " ಚತುರ್ಮುಖನೇ, ನಿಮ್ಮ ತಂದೆಯಾದ ಶ್ರೀನಿವಾಸನು ವೇಂಕಟಾಚಲದಲ್ಲಿರುವನು; ಆತನ ವಿವಾಹಕ್ಕಾಗಿ ನಿನ್ನನ್ನು ಕರೆಯಲಿಕ್ಕೆ ಬಂದಿರುವೆನು. " ಎಂದು ಹೇಳಿ ತಾನು ತಂದಿದ್ದ ಪತ್ರವನ್ನು ಆತನಿಗೆ ಕೊಡಲು, ಬ್ರಹ್ಮನು ತನ್ನ ತಂದೆಯ ಪತ್ರವನ್ನು ಬಹು ಆದರದಿಂದ ತೆಗೆದುಕೊಂಡು, ವಾಯುವಿನಿಂದ ಓದಿಸಿದನು; ಅದರಲ್ಲಿ— " ಚಿರಂಜೀವ ಬ್ರಹ್ಮನಿಗೆ,— ವೇಂಕಟಾಚಲವಾಸಿಯಾದ ಶ್ರೀನಿವಾಸನ ಮಂಗಳಕರವಾದ ಆಶೀರ್ವಾದಗಳು. ಆಕಾಶರಾಜನು ನನಗೆ ಕನ್ಯಾದಾನವನ್ನು ಮಾಡುತ್ತಾನೆ; ಆದ್ದರಿಂದ ಈ ಪತ್ರಕಂಡಕೂಡಲೆ, ನಿನ್ನ ಪುತ್ರರಿಂದಲೂ, ಲೋಕಪಾಲಕರಿಂದಲೂ, ದೇವತಾಸ್ತ್ರೀಯರಿಂದಲೂ, ಗಂಧರ್ವರಿಂದಲೂ, ಸರ್ಪಗಳಿಂದಲೂ ಕೂಡಿಕೊಂಡು ಬಂದು, ನನ್ನ ಲಗ್ನ ಕಾರ್ಯವನ್ನು ಸಾಂಗಮಾಡಬೇಕು" ಎಂದು ಬರೆದಿತ್ತು. ಅದನ್ನು ನೋಡಿ, ಬ್ರಹ್ಮನು ಬಹಳ ಸಂತೋಷಬಟ್ಟು, ತನ್ನ ತಂದೆಯ ವಿವಾಹಮಹೋತ್ಸವವನ್ನು ನೋಡಬೇಕೆಂಬ ಲವಲವಿಕೆಯಿಂದ ಕೂಡಲೆ ದ್ವಾರಪಾಲಕರನ್ನು ಕರೆಯಿಸಿ,— " ದ್ವಾರಪಾಲಕರೇ, ಈ ಸಮಯದಲ್ಲಿ ಪ್ರಯಾಣಸೂಚಕವಾದ ಭೇರಿ-ದುಂದುಭಿಗಳ ಧ್ವನಿಯನ್ನು ಮಾಡಿಸಿರಿ, ಭೂಲೋಕಕ್ಕೆ ಹೋಗಬೇಕಾಗಿರುವದು;" ಎಂದು ಹೇಳಲು, ದ್ವಾರಪಾಲಕರು ಭೇರಿ–ದುಂದುಭಿಗಳ ಧ್ವನಿಯನ್ನು ಮಾಡುತ್ತಿರಲು, ಆಗ ಸೇನಾನಾಯಕನು ಬಂದು ಬ್ರಹ್ಮನಿಗೆ ನಮಸ್ಕರಿಸಿ,— " ಪಿತಾಮಹನೇ, ಮಂಗಲಕರವಾದ ಪ್ರಯಾಣಭೇರಿಯ ಧ್ವನಿಯನ್ನು ನಾವೆಲ್ಲರೂ ಕೇಳಿದೆವು; ಆದರೆ ನಮ್ಮಿಂದ ಸಹಿತವಾಗಿ ನಿಮ್ಮ ಪ್ರಯಾಣವೆಲ್ಲಿಗೆ? ಅದನ್ನು ಹೇಳಬೇಕು," ಎನ್ನಲು, ಅದಕ್ಕೆ ಬ್ರಹ್ಮನು— " ಕೇಳೈ ಸೇನಾಪತಿಯೇ, ಭೂಲೋಕದಲ್ಲಿ

ಭರತಖಂಡದ ದಕ್ಷಿಣದಿಕ್ಕಿನಲ್ಲಿರುವ ಶೇಷಾಚಲಕ್ಕೆ ಹೋಗಬೇಕಾಗಿರುವದು; ಆದ್ದರಿಂದ ಚತುರಂಗಬಲದಿಂದ ಯುಕ್ತವಾದ ನಮ್ಮ ಸೈನ್ಯವು ಹೊರಡಲಿ, ದೇವತೆಗಳನ್ನೂ ದಿಕ್ಪಾಲಕರನ್ನೂ ಕರೆಸು; ಯಾಕಂದರೆ ಭೂಲೋಕದೊಳಗೆ ನಮ್ಮ ತಂದೆಯಾದ ಶ್ರೀನಿವಾಸನ ವಿವಾಹಮಹೋತ್ಸವವನ್ನು ನೋಡುವದಕ್ಕಾಗಿ ಎಲ್ಲರನ್ನು ಕರಕೊಂಡು ನಾನು ಹೊರಡಲಿಕ್ಕೆ ಬೇಕು," ಎಂದು ಅವನಿಗೆ ಅಪ್ಪಣೆಯನ್ನು ಕೊಟ್ಟನು. ಹಾಗು ತನ್ನ ಪತ್ನಿಯರಿಗೆ ಅಲಂಕೃತರಾಗುವದಕ್ಕೆ ಅನೇಕ ಭೂಷಣಗಳನ್ನೂ, ವಸ್ತ್ರಗಳನ್ನೂ, ನಾನಾವಿಧವಾದ ರತ್ನಗಳನ್ನೂ ಕೊಟ್ಟು, ತಾನು ಅಲಂಕೃತನಾಗುವದಕ್ಕೆ ಅಂತರ್ಗೃಹದಲ್ಲಿ ಹೋದನು. ಮೊದಲು ತನ್ನ ಪಶ್ಚಿಮಶಿರಸ್ಸಿನಲ್ಲಿ ಕಿರೀಟವನ್ನು ಧರಿಸಿದನು, ಮತ್ತೊಂದು ಶಿರಸ್ಸಿನಲ್ಲಿ ಕೆಂಪುವಸ್ತ್ರವನ್ನು ಧಾರಣಮಾಡಿದನು, ದಕ್ಷಿಣ ಶಿರಸ್ಸಿನಲ್ಲಿ ಶಿರೋವೇಷ್ಟನವನ್ನು ಬಂಧನಮಾಡಿಕೊಂಡನು, ನಾಲ್ಕನೇ ಮಸ್ತಕದಲ್ಲಿ ದರ್ಭೆಗಳಿಂದ ಯುಕ್ತವಾದ ಕಿರೀಟವನ್ನು ಹಾಕಿಕೊಂಡನು. ನೀಲ ವೈಡೂರ್ಯ, ಮೌಕ್ತಿಕಗಳಿಂದ ಯುಕ್ತವಾದ ಮಕರಕುಂಡಲಗಳನ್ನು ಕಿವಿಗಳಲ್ಲಿ ಧರಿಸಿದನು, ಸುವರ್ಣದ ಕಂಕಣಗಳನ್ನು ಕೈಗಳಲ್ಲಿ ಹಾಕಿಕೊಂಡನು. ನವರತ್ನಗಳಿಂದ ಯುಕ್ತವಾದ ಕವಚವನ್ನು ಧರಿಸಿದನು, ಮುಕ್ತಾಮಣಿಗಳಿಂದ ಯುಕ್ತವಾದ ಕಾಂಚೀದಾಮವನ್ನು ಇಟ್ಟುಕೊಂಡನು. ಈ ಪ್ರಕಾರ ಬ್ರಹ್ಮನು ಸಿದ್ಧನಾಗಿ, ತನ್ನ ಪತ್ನಿಯರಾದ ಸರಸ್ವತಿ, ಸಾವಿತ್ರಿ, ಗಾಯತ್ರಿ ಇವರಿಂದಲೂ, ಆನೆ, ಕುದುರೆ, ರಥಗಳಿಂದ ಸಹಿತವಾದ ಚತುರಂಗಬಲದಿಂದಲೂ, ತನ್ನ ಮಾನಸಪುತ್ರ, ವೀರ್ಯಪುತ್ರರಿಂದಲೂ ಶೃಂಗಾರವಾಗಿ ತನ್ನ ಸೈನ್ಯವನ್ನು ಮುಂದೆಮಾಡಿಕೊಂಡು ಚಂದ್ರನಿಗೆ ಸಮಾನವಾದ ಕಾಂತಿಯಿಂದ ಶೋಭಿಸುವ ಹಂಸವನ್ನೇರಿ ನಡೆದನು, ಮತ್ತು ಆತನ ಪತ್ನಿಯರು ವಿಚಿತ್ರವಾದ ವಿಮಾನಗಳಲ್ಲಿ ಕುಳಿತು ಸಾಗಿದರು.

ಈ ಪ್ರಕಾರ ಬ್ರಹ್ಮನು ತನ್ನ ಸೈನ್ಯದೊಂದಿಗೆ ನಡೆಯುತ್ತಿರಲು, ಘಂಟಾಚಾಮರಗಳ ನಿರ್ಘೋಷಗಳಿಂದ ಯುಕ್ತವಾದ ಆನೆ, ಕುದುರೆಗಳೂ, ರಥಗಳಲ್ಲಿ ಕುಳಿತಿರುವಂಥ ಶೂರರೂ ಶೋಭಿಸುತ್ತಿರುವರು; ಧ್ವಜ ಪತಾಕೆಗಳಿಂದ ಅಲಂಕೃತರಾಗಿ ನಾನಾವಿಧವಾದ ಆಯುಧಗಳನ್ನು ಧರಿಸಿರುವ ಕಾಲಬಲವು ಒಪ್ಪುತ್ತಿರುವದು. ಹೀಗೆ ಸೈನ್ಯದ ಮಧ್ಯದಲ್ಲಿ, ನಕ್ಷತ್ರಗಳಿಂದ ಯುಕ್ತನಾದ ಚಂದ್ರನ

ಶೋಭಿಸುವಹಾಗೆ ಬ್ರಹ್ಮನು ಶೋಭಿಸುತ್ತಿರುವನು. ಆ ಚತುರ್ಮುಖನ ಮೇಲೆ ಹೇಮದಂಡದಿಂದ ಯುಕ್ತವಾದ, ಮೂರು ಯೋಜನೆಗಳವರೆಗೆ ವಿಸ್ತೀರ್ಣವಾದ, ಹತ್ತು ಲಕ್ಷ ಜನರು ಹಿಡಿದಿರುವ, ಶ್ವೇತಛತ್ರವು ಆಕಾಶವಲ್ಲಿ ಪ್ರಕಾಶಿಸುತ್ತಿರುವದು. ಆ ಸೈನ್ಯದಲ್ಲಿ ಒಂಬತ್ತುಸಾವಿರ ಭೇರಿಗಳನ್ನೂ, ಮುನ್ನೂರು ದುಂದುಭಿಗಳನ್ನೂ ಅಸಂಖ್ಯ ಮೃದಂಗ, ಪಣವ, ಢಕ್ಕೆ, ನಿಸ್ಸಣ, ಡಿಂಡಿಮ, ಗೋಮುಖ ಮುರಜ, ವೀಣೆ, ಝರ್ಝರ ಮೊದಲಾದ ವಾದ್ಯಗಳನ್ನೂ ಬಾರಿಸುತ್ತಿರುವರು, ಬರ್ಬರ, ಶತಶೃಂಗ, ದೀರ್ಘಶೃಂಗ ಮೊದಲಾದವುಗಳನ್ನು ಊದುತ್ತಿರುವರು, ಗಂಧರ್ವರು ಗಾಯನವನ್ನು ಮಾಡುತ್ತಿರುವರು, ನರ್ತಕ, ನಟಿ, ಹಾಹಾ ಹೂಹೂ ಗಂಧರ್ವರು ಹಾಡುತ್ತಿರುವರು. ಹೀಗೆ ಸೂತ, ಮಾಗಧ, ಬಂದಿಗಳ ಸ್ತೋತ್ರ ಧ್ವನಿಗಳಿಂದ ಯುಕ್ತನಾಗಿ ಬ್ರಹ್ಮನು ಹೋಗುತ್ತಿದ್ದನು; ಅವನನ್ನು ಅನುಸರಿಸಿ ಎಲ್ಲ ದೇವತೆಗಳು ಸಾಗುತ್ತಿದ್ದರು.

ಹೀಗೆ ಬ್ರಹ್ಮನು ಪರಮಸಂಭ್ರಮದಿಂದ ಹೋಗುತ್ತಿರಲಾಗಿ, ಸತ್ಯಲೋಕ, ತಪೋಲೋಕ, ಜನಲೋಕ, ಮಹರ್ಲೋಕ, ಸ್ವರ್ಲೋಕ, ಭುವರ್ಲೋಕ, ಭೂಲೋಕಗಳಲ್ಲಿರುವ ಜನರು ಕ್ರಮದಿಂದ ಬರುತ್ತಿರುವ ಮಹಾಭಾಗ್ಯಶಾಲಿಯಾದ ಬ್ರಹ್ಮನನ್ನು ನೋಡುತ್ತಿದ್ದರು. ಆಗ ಸತ್ವಸಂಪನ್ನರಾದ ಋಷಿಗಳಲ್ಲಿ ಕೆಲವರು—" ಅಗ್ನಿಯಂತೆ ಕಾಂತಿಯುಳ್ಳವನಾಗಿಯೂ, ಶ್ರೀಮನ್ನಾರಾಯಣನಿಗೆ ಸಮಾನವಾದ ಆಕಾರವುಳ್ಳವನಾಗಿಯೂ, ಸರ್ವಲೋಕಕ್ಕೆ ಪಿತಾಮಹನಾಗಿಯೂ ಇರುವ ಇವನು ಸಾಕ್ಷಾತ್ ನಾರಾಯಣನೇ ಸರಿ." ಎಂದು ಅನ್ನುತ್ತಿದ್ದರು; ಮತ್ತೆ ಕೆಲವರು— " ಇವನಿಗೆ ನಾಲ್ಕು ಮುಖಗಳಿರುವಕಾರಣ ಇವನು ನಾರಾಯಣನಲ್ಲ, ಸಮಸ್ತ ಭೂಷಣಗಳಿಂದ ಯುಕ್ತನಾಗಿರುವ ಬ್ರಹ್ಮನು" ಎಂದು ತಿಳಿದರು, ಋಷಿಗಳು ಅವನ ಅನುಚರರನ್ನು,— " ದೇವಾನುಚರರೇ, ಈ ಚತುರ್ಮುಖನು ತನ್ನ ಸರ್ವಸೈನ್ಯದಿಂದ ಯುಕ್ತನಾಗಿ ಇಷ್ಟು ಸಂಭ್ರಮದಿಂದ ಎಲ್ಲಿಗೆ ಹೋಗುವನು" ಎಂದು ಕೇಳಿದರು, ಅವಕ್ಕೆ ಅವರು— " ಋಷಿಗಳಿರಾ, ಶ್ರೀನಿವಾಸನ ಲಗ್ನಕ್ಕಾಗಿ ನಾವೆಲ್ಲರೂ ಭೂಲೋಕಕ್ಕೆ ಹೋಗುವೆವು," ಎಂದು ಹೇಳಿದನು. ಆಗ ಸರ್ವಋಷಿಗಳೂ, ಬ್ರಾಹ್ಮಣರೂ ತಾವೂ ಶ್ರೀನಿವಾಸನ ಲಗ್ನಮಹೋತ್ಸವವನ್ನು ನೋಡುವದಕ್ಕೆ ಹೋಗಬೇಕೆಂದು ತಮ್ಮತಮ್ಮೊ

ಳಗೆ ಮಾತಾಡಿಕೊಂಡು, ತಮ್ಮ ಅಗ್ನಿಹೋತ್ರಗಳಿಂದಲೂ, ಶಿಷ್ಯರಿಂದಲೂ, ಸತೀಪುತ್ರರಿಂದಲೂ ಸಹಿತರಾಗಿ ಬ್ರಹ್ಮದೇವನ ಕೂಡ ನಡೆದರು. ಹೀಗೆ ಚತುರ್ಮುಖನು ವೈಭವದೊಂದಿಗೆ ಭೂಲೋಕದಲ್ಲಿರುವ ವೇಂಕಟಾಚಲಕ್ಕೆ ಹೋಗುತ್ತಿದನು.

ಇತ್ತ, ವೇಂಕಟಾಚಲದಲ್ಲಿ ಶ್ರೀನಿವಾಸನು ತನ್ನ ತಾಯಿಯಾದ ಬಕುಲಾವತಿಗೆ– "ತಾಯೀ, ನನ್ನ ಪುತ್ರನಾದ ಬ್ರಹ್ಮನನ್ನು ಕರೆಯುವದಕ್ಕೆ ಹೋಗಿದ್ದ ಗರುಡನು ಇನ್ನೂ ವರೆಗೆ ಯಾಕೆ ಬಂದಿರಲಿಕ್ಕಿಲ್ಲ? ಮಾರ್ಗದಲ್ಲಿ ಯಾರಾದರೂ ಅವನನ್ನು ನಿರ್ಬಂಧಮಾಡಿದರೋ ಹ್ಯಾಗೆ? ಎಂದು ಕೇಳುತ್ತ ಚಿಂತಿಸುತ್ತಿದ್ದನು. ಅಷ್ಟರಲ್ಲಿ ಬ್ರಹ್ಮನಿಂದ ಮುಂದಾಗಿ ಕಳಿಸಲ್ಪಟ್ಟ ಒಬ್ಬ ದೂತನು ಬಂದು ಶ್ರೀನಿವಾಸನಿಗೆ ಭೆಟ್ಟಿಯಾದನು. ಆಗ ಶ್ರೀನಿವಾಸನು ಆ ದೂತನನ್ನು ನೋಡಿ ಸಂತೋಷಪಟ್ಟು,— "ಚಾರನೇ, ನನ್ನ ಪುತ್ರನು ಎಲ್ಲಿದ್ದಾನೆ? ನಿನ್ನನ್ನು ಯಾರು ಕಳುಹಿದರು? ಎನಲು, ಅವನು— "ಸ್ವಾಮಿ, ನಿಮ್ಮ ಪುತ್ರನು ಭಾಗೀರಥೀನದಿಯನ್ನು ದಾಟಿ ಬರುತ್ತಿರುವನು," ಎಂದು ಹೇಳಿದನು. ಅಷ್ಟರಲ್ಲಿ ಗರುಡನು ಬಂದು,— "ಶ್ರೀನಿವಾಸನೇ, ನಿನ್ನ ಆಜ್ಞಾಪ್ರಕಾರವಾಗಿ ಬ್ರಹ್ಮನನ್ನು ಕರೆದುಕೊಂಡು ಬಂದಿರುವೆನು, ಆತನು ತನ್ನ ಸಮೂಹದೊಂದಿಗೆ ಸಾವಕಾಶವಾಗಿ ಕೃಷ್ಣಾನದಿಯನ್ನು ದಾಟಿ, ಇದೇ ಶ್ರೀಶೈಲಪರ್ವತದಿಂದೀಚೆಯಲ್ಲಿರುವ ಅಹೋಬಲ ಪರ್ವತಕ್ಕೆ ಬಂದನು; ಮುಂದಾಗಿ ನಾನು ವಾರ್ತೆಯನ್ನು ಹೇಳಲೋಸುಗ ಪ್ರಾಪ್ತನಾದೆನು; ಎಂದು ಹೇಳಲು, ಅದನ್ನು ಕೇಳಿ ಶ್ರೀನಿವಾಸನು ಸಂತೋಷಪಟ್ಟನು. ಅಷ್ಟರಲ್ಲಿ ಸೇನಾಪತಿಯು ಬಂದು ಶ್ರೀನಿವಾಸನಿಗೆ ನಮಸ್ಕರಿಸಿ,— "ಸ್ವಾಮಿ, ಚತುರ್ಮುಖನು ಇಲ್ಲಿಗೆ ಬಂದು ತುಂಬುರತೀರ್ಥದಲ್ಲಿ ಸ್ನಾನವನ್ನು ಮಾಡುವದಕ್ಕಾಗಿ ಇಳಿದಿರುವನು;" ಎಂದು ಹೇಳಲು, ಶ್ರೀನಿವಾಸನು ಆನಂದದಿಂದ ಎದ್ದು, ಗರುಡಾರೂಢನಾಗಿ, ಮಗನನ್ನು ಯಾವಾಗ ನೋಡೇನೋ? ಎಂಬ ಆತುರದಿಂದ ತುಂಬುರತೀರ್ಥದ ಕಡೆಗೇ ಬರುತ್ತಿದ್ದನು. ಅಷ್ಟರಲ್ಲಿ ಸೇನಾಪತಿಯು ಓಡಿಹೋಗಿ ಬ್ರಹ್ಮನಿಗೆ— "ಸ್ವಾಮಿ-ಚತುರ್ಮುಖನೇ, ನೀನು ಇಲ್ಲಿಗೆ ಬಂದ ವರ್ತಮಾನವನ್ನು ನನ್ನ ಮುಖದಿಂದ ಕೇಳಿ, ಶ್ರೀನಿವಾಸನು ನಿನ್ನನ್ನು ನೋಡಬೇಕೆಂಬ ಆತುರದಿಂದ ತಾನೇ ಇಲ್ಲಿಗೆ

ಬರುತ್ತಿರುವವನು ನೋಡು," ಎಂದು ತೋರಿಸಿದನು. ಆಗ ಬ್ರಹ್ಮನು ಲಗುಬಗೆ ಯಿಂದ ತನ್ನ ವಾಹನವಾದ ಹಂಸವನ್ನಿಳಿದು ಕಾಲುಗಳಿಂದ ನಡೆಯುತ್ತಾ ಶೀಘ್ರದಿಂದ ತನ್ನ ತಂದೆಯ ಸಮ್ಮುಖಕ್ಕೆ ಬಂದು, ಸಾಷ್ಟಾಂಗನಮಸ್ಕಾರವನ್ನು ಮಾಡಿ, ಕೈಜೋಡಿಸಿಕೊಂಡು ನಿಂತನು. ಶ್ರೀನಿವಾಸನಾದರೂ ಗರುಡನಿಂದ ಇಳಿದು, ತನ್ನ ಪುತ್ರನನ್ನು ಅಪ್ಪಿಕೊಂಡು— " ಮಗನೇ, ನಿನಗೆ ಮಂಗಳವಾಗಲಿ, ಇಕೋ, ಭೆಟ್ಟಿಗಾಗಿ ಆತುರದಿಂದ ಬಂದಿರುವ ಕೃಶನಾದ ನನ್ನನ್ನು ನೋಡು. ಪುತ್ರನೇ, ಎಷ್ಟೋ ದಿವಸಗಳಾದರೂ ನೀನು ನನಗೆ ಭೆಟ್ಟಿಯಾಗದೆ, ಈಗ ಮಾತ್ರ ನನ್ನನ್ನು ನೋಡಬೇಕೆಂದು ಇಚ್ಛಿಸಿದೆಯಾ ? ಇದೊಂದು ನನ್ನ ಸುದೈವವೇ ಎಂದು ತಿಳಿಯುತ್ತೇನೆ. ಮಗನೇ, ನಿನ್ನನ್ನು ನೋಡದೆ, ನನಗೆ ಮಾತ್ರ ಸಂತೋಷವಾಗುವದಿಲ್ಲ," ಎಂದು ಶ್ರೀನಿವಾಸನು ಮಾತಾಡಲು. ಅದರಿಂದ ಬ್ರಹ್ಮನಿಗೆ ಪರಮದುಃಖವಾಯಿತು. ಅವನ ಗಂಟಲ ಶಿರಬಿಗಿದು ಮಾತಾಡಲಿಕ್ಕೆ ಬರದೆ ಸುಮ್ಮನಾದನು. ತನ್ನ ಪುತ್ರನ ಈ ಸ್ಥಿತಿಯನ್ನು ನೋಡಿ, ಶ್ರೀನಿವಾಸನಿಗೂ ಪರಮ ಕಷ್ಟವಾಗಿ ಅವನೂ ಮಾತಾಡದೆ ಸುಮ್ಮನೆ ಇದ್ದನು. ಹೀಗೆ ಎರಡು ಮುಹೂರ್ತಗಳ ವರೆಗೆ ಉಭಯತರು ಸುಮ್ಮನೆ ಇರಲು, ಆ ತಂದೆ ಮಕ್ಕಳ ಕಣ್ಣುಗಳಲ್ಲಿ ಬಾಷ್ಪಗಳು ತುಂಬಿಕೊಂಡವು. ಪ್ರೀತಿಪೂರ್ವಕವಾಗಿ ಒಬ್ಬರ ಮುಖವನ್ನೊಬ್ಬರು ನೋಡಹತ್ತಿದರು. ಅನಂತರ ಉಭಯತರು ತಮ್ಮ ಮನದೊಳಗಿನ ದುಃಖವನ್ನು ಬಿಟ್ಟು ಸಂತುಷ್ಟಮನಸ್ಸುಳ್ಳವರಾದರು. ಈ ಪ್ರಕಾರ ಜನರಿಗೆ ತಮ್ಮ ಲೀಲೆಯನ್ನು ತೋರಿಸುವ ಶ್ರೀನಿವಾಸ–ಬ್ರಹ್ಮರನ್ನು ಕಂಡು, ದೇವಮಾಯೆಯಿಂದ ಮೋಹಿತರಾದ ದೇವತೆಗಳು ಸಂತೋಷವುಳ್ಳವರಾಗಿ, ತಮ್ಮ ತಮ್ಮೊಳಗೆ— " ಜಗತ್ತಿನಲ್ಲಿ ಶ್ರೀನಿವಾಸನಿಗೆ ಸಮಾನನಾದ ತಂದೆ ಇಲ್ಲ; ಬ್ರಹ್ಮನಿಗೆ ಸಮಾನನಾದ ಮಗನಿಲ್ಲ"ವೆಂದು ಅವರಿಬ್ಬರನ್ನು ಹೊಗಳುತ್ತಿದ್ದರು. ಆಗ ಶ್ರೀನಿವಾಸನು ತನ್ನ ಪುತ್ರನನ್ನು ಸಮಾಧಾನಪಡಿಸಿ ಅವನ ನೇತ್ರೋದಕವನ್ನು ಒರಿಸಿ, ಅವನನ್ನು ಕರೆದುಕೊಂಡು ವಲ್ಮೀಕದಲ್ಲಿ ಬಂದು ಕುಳಿತುಕೊಂಡು,— " ಬ್ರಹ್ಮನೇ, ನಿನ್ನ ಪುತ್ರ, ಪೌತ್ರ, ಸೊಸೆಯಂದಿರು ಮೊದಲಾದವರೆಲ್ಲರು ಕ್ಷೇಮದಿಂದ ಇರುತ್ತಾರಷ್ಟೇ ? " ಎಂದು ಕೇಳಲು, ಬ್ರಹ್ಮನು— " ಸರ್ವರಿಗೆ ಸ್ವಾಮಿಯಾದ ಶ್ರೀನಿವಾಸನೇ, ನಿನ್ನ ಅನುಗ್ರಹದಿಂದ ನಮಗೆ ಸರ್ವವೂ ಮಂಗಳವದೆ. ಆದರೆ ನಿನ್ನ ಕ್ಷೇಮವೃತ್ತಾಂತವನ್ನು

ಹೇಳು" ಎಂದೆನಲು, ಶ್ರೀನಿವಾಸನು— "ಪುತ್ರನೇ, ನನ್ನ ವೃತ್ತಾಂತವನ್ನು ಏನೆಂದು ಹೇಳಲಿ? ದ್ವಾಪರಯುಗದ ಅಂತ್ಯಭಾಗದಲ್ಲಿ ಆದ ಸಂಗತಿಯನ್ನು ಹೇಳುವೆನು, ಕೇಳು,—

ನಾನು ಒಂದಾನೊಂದು ದಿವಸ ವೈಕುಂಠದಲ್ಲಿ ಶೇಷಪರ್ಯಂಕದ ಮೇಲೆ ಶಯನ ಮಾಡಿರಲು, ಭೃಗುಋಷಿಯು ಬಂದು ನನ್ನ ವಕ್ಷಸ್ಥಳಕ್ಕೆ ತನ್ನ ಪಾದದಿಂದ ಒದ್ದನು, ಆ ಕಾಲದಲ್ಲಿ ನಿನ್ನ ಜನನಿಯಾದ ಲಕ್ಷ್ಮಿಯು ನನ್ನ ಸಂಗಡ ಪ್ರೇಮ ಕಲಹವನ್ನು ಮಾಡಿ, ಕರವೀರಪುರಕ್ಕೆ ಹೊರಟು ಹೋದಳು. ಆ ದುಃಖದಿಂದ ನಾನು ಸಂತಪ್ತನಾಗಿ ವೈಕುಂಠಲೋಕವನ್ನು ಬಿಟ್ಟು ಈ ವೇಂಕಟಾಚಲಕ್ಕೆ ಬಂದು, ಇಲ್ಲಿ ವಾಸಮಾಡಲಿಕ್ಕೆ ಯೋಗ್ಯವಾದ ಸ್ಥಳವು ಸಹ ದೊರೆಯದ್ದರಿಂದ, ಈ ವಲ್ಮೀಕದಲ್ಲಿ ಯಾರಿಗೂ ತಿಳಿಯದಂತೆ ಸ್ವಸ್ಥವಾಗಿರುತ್ತಿದ್ದೆನು; ಆದರೆ ನನ್ನ ದುರ್ದೈವವು ಹ್ಯಾಗೆ ಇರಗೊಟ್ಟೀತು? ಒಂದಾನೊಂದು ದಿವಸ ಚೋಳರಾಜನ ಗೋಪಾಲನು ಧೇನುವಿನ ಮೇಲಿನ ಕೋಪದಿಂದ ನನ್ನ ಶಿರಸ್ಸಿನಲ್ಲಿ ಕುಠಾರದಿಂದ ತಾಡನ ಮಾಡಿದನು; ಆದರೆ ಬೃಹಸ್ಪತಿಯ ಅನುಗ್ರಹದಿಂದ ಬದುಕಿದೆನು; ಇದೇ ನನ್ನ ವೃತ್ತಾಂತವು. ಇರಲಿ! ಪುತ್ರನೇ, ಇಕೋ ಈಕೆಯು ನನ್ನ ತಾಯಿಯು, ನಮಸ್ಕಾರವನ್ನು ಮಾಡು;" ಎನಲು, ಬ್ರಹ್ಮನು ಬಕುಲಾವತಿಗೆ ನಮಸ್ಕಾರವನ್ನು ಮಾಡಿ— "ಪಿತನೇ, ಪೂರ್ವದಲ್ಲಿ ನಿನ್ನ ಜನನಿಯು ಎಲ್ಲಿ ಜನಿಸಿದ್ದಳು? ಈಕೆಯ ವೃತ್ತಾಂತವೇನು? ಹೇಳು" ಎನಲು, ಶ್ರೀನಿವಾಸನು— "ಬ್ರಹ್ಮನೇ, ಯಶೋದೆಯೇ ಬಕುಲಾರೂಪದಿಂದ ಜನಿಸಿದವಳಾಗಿ, ಈ ವೇಂಕಟಾಚಲದಲ್ಲಿ ಬಹಳ ದಿವಸಗಳಿಂದ ನನ್ನನ್ನು ರಕ್ಷಿಸುತ್ತಿರುವಳು. ಹೀಗಿರ ಲಾಗಿ ಒಂದಾನೊಂದು ದಿವಸ ನಾನು ಬೇಟೆಯನ್ನಾಡುವದಕ್ಕೆ ಪದ್ಮತೀರ್ಥದ ಸಮೀಪದಲ್ಲಿ ಹೋಗಿದ್ದೆನು, ಅಲ್ಲಿರುವ ಪುಷ್ಪವನದಲ್ಲಿ "ಪದ್ಮಾವತಿ"ಯೆಂಬ ಒಬ್ಬ ಕನ್ನಿಕೆಯು ತನ್ನ ಸಖಿಯರ ಕೂಡ ಬಂದಿದ್ದಳು. ಆ ರಾಜಪುತ್ರಿಯನ್ನು ಕಂಡು ನಾನು ಆಕೆಯನ್ನು ಲಗ್ನಮಾಡಿಕೊಳ್ಳಬೇಕೆಂದು ಅಪೇಕ್ಷಿಸುತ್ತೇನೆ; ಆದ್ದ ರಿಂದ ಪುತ್ರನೇ, ನನ್ನ ಅಪೇಕ್ಷೆಯನ್ನು ಪೂರ್ಣಮಾಡು" ಎಂದು ಹೇಳಿದನು. ಅಷ್ಟರಲ್ಲಿ ದುಂದುಭಿಧ್ವನಿಯು ಕೇಳಬಂದಿತು. ಆಗ ಶ್ರೀನಿವಾಸನು—ಬ್ರಹ್ಮನೇ, ಇದೇನು? ದುಂದುಭಿಧ್ವನಿಯು ಕೇಳಬರುತ್ತದೆ? ಯಾರು ಬರುತ್ತಿರಬಹುದು,

ಎಂದು ಕೇಳಿದನು. ಆಗ ವಾಯುವು ತನ್ನ ವಾಹನವಾದ ಏಣವನ್ನು ಹತ್ತಿ ಕೊಂಡು ತನ್ನ ಸತಿಯಾದ ಭಾರತಿಯೊಡನೆ ಶ್ರೀನಿವಾಸನ ಲಗ್ನದ ಉತ್ಸವಕ್ಕೆ ಸುಗಂಧ ದ್ರವ್ಯವನ್ನು ತೆಗೆದುಕೊಂಡು ಬಂದು, ಶ್ರೀನಿವಾಸನನ್ನು ಕಂಡು ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಆಗ ಶ್ರೀನಿವಾಸನು ವಾಯುವನ್ನು ಅಪ್ಪಿಕೊಂಡು, ಅವನ ಕ್ಷೇಮಸಮಾಚಾರವನ್ನು ಕೇಳಿ,-"ವಾಯುವೇ, ನೀನು ಬಂದದ್ದನ್ನು ನೋಡಿ ನನಗೆ ಸಂತೋಷವಾಯಿತು," ಎಂದು ಹೇಳಿದನು. ಅಷ್ಟರಲ್ಲಿ ಕೈಲಾಸಪತಿಯಾದ ಶಂಕರನು ಪಾರ್ವತಿಯಿಂದ ಸಹಿತನಾಗಿ ಪ್ರಮಥ ಗಣಗಳನ್ನು ಕೂಡಿಕೊಂಡು ವೇಂಕಟಾಚಲಕ್ಕೆ ಬಂದು, ಶ್ರೀನಿವಾಸನಿಗೂ ಬ್ರಹ್ಮನಿಗೂ ನಮಸ್ಕಾರವನ್ನು ಮಾಡಿದನು. ಆಗ ಶ್ರೀನಿವಾಸನು ಶಂಕರನನ್ನು ಅಪ್ಪಿಕೊಂಡು-"ನೀಲಕಂಠನೇ, ಬಾ, ಈ ಉತ್ತಮವಾದ ಆಸನದಲ್ಲಿ ಕುಳಿತುಕೊ" ಎಂದು ಹೇಳಿ ಕೂಡ್ರಿಸಿದನು. ಅಷ್ಟರಲ್ಲಿ ಕುಬೇರನು ನರವಾಹನನಾಗಿ ತನ್ನ ಯಕ್ಷಗಣಗಳಿಂದಲೂ ಪುತ್ರ-ಮಿತ್ರ-ಭೃತ್ಯರಿಂದಲೂ, ತನ್ನ ಸತಿಯಿಂದಲೂ ಸಹಿತನಾಗಿ ಬಂದನು. ಅವನನ್ನು ಕಂಡು ಶ್ರೀನಿವಾಸನು ಸಂತೋಷವುಳ್ಳವ ನಾಗಿ-"ಧನಾಧಿಪನೇ, ನೀನು ಸರ್ವಕಾಲದಲ್ಲಿ ಧನವಂತನಾಗು" ಎಂದು ಹರಿಸಿ ದನು. ಅದೇ ಸಮಯದಲ್ಲಿ ಮೇಷಾರೂಢನಾಗಿ ಅಗ್ನಿಯು ತನ್ನ ಸತಿಯಾದ ಸ್ವಾಹಾದೇವಿಯಿಂದ ಸಹಿತನಾಗಿ ಬರಲು ಶ್ರೀನಿವಾಸನು ಅವನನ್ನು ಅಪ್ಪಿ ಕೊಂಡು ಸನ್ಮಾನಮಾಡಿದನು. ಆನಂತರದಲ್ಲಿ ಯಮನು ತನ್ನ ದೂತರಿಂದಲೂ, ಪತ್ನಿಯಿಂದಲೂ ಸಹಿತನಾಗಿ ಬಂದನು ಚಿತ್ರಗುಪ್ತನೂ, ಜಲಾಧಿಪತಿಯಾದ ವರುಣನೂ ಶಚೀಪತಿಯಾದ ಇಂದ್ರನೂ ತಮ್ಮ ತಮ್ಮ ಸತೀಪುತ್ರರಿಂದ ಸಹಿತ ರಾಗಿ ವೇಂಕಟಾಚಲಕ್ಕೆ ಬಂದರು. ಸೂರ್ಯ-ಚಂದ್ರರೂ, ರತಿಯಿಂದ ಸಹಿತ ನಾದ ಮನ್ಮಥನೂ ಪ್ರಾಪ್ತರಾದರು; ಕಶ್ಯಪ, ಅತ್ರಿ, ಭರದ್ವಾಜ, ವಾಮದೇವ, ಗೌತಮ, ವಿಶ್ವಾಮಿತ್ರ, ವಶಿಷ್ಠ, ವಾಲ್ಮೀಕ, ಪರಶುರಾಮ, ಪುಲಸ್ತ್ಯ, ದಧೀಚಿ, ಶುನಃಶೇಫ, ಗಾಲವ, ಗಾರ್ಗ್ಯ, ಕೃಷ್ಣ ಇವರೇ ಮೊದಲಾದ ಋಷಿಗಳು ತಮ್ಮ ತಮ್ಮ ಶಿಷ್ಯ ಸಮೂಹದಿಂದ ಸಹಿತರಾಗಿ ಶ್ರೀನಿವಾಸನ ಲಗ್ನೋತ್ಸವವನ್ನು ನೋಡುವದಕ್ಕೆ ಬಂದರು. ಗಂಧರ್ವರೂ, ಅಪ್ಸರಸ್ತ್ರೀಯರೂ, ಸಿದ್ಧರೂ, ಉರ ಗರೂ ಉಳಿದ ಎಲ್ಲ ದೇವತೆಗಳೂ, ಋಷಿಗಳೂ, ರಾಜರೂ, ಅನೇಕ ಭಕ್ತಜನರೂ

ಶ್ರೀನಿವಾಸನ ವಿವಾಹವನ್ನು ನೋಡುವದಕ್ಕಾಗಿ ಬಂದರು. ಆಗ ಶ್ರೀನಿವಾಸನು ಅವರವರ ಯೋಗ್ಯತಾನುಸಾರವಾಗಿ ಸನ್ಮಾನಮಾಡಿದನು.

ಅಷ್ಟರಲ್ಲಿ, ವಿಶ್ವಕರ್ಮನು ಬಂದು ಶ್ರೀನಿವಾಸನನ್ನು ಕಾಣಿಸಿಕೊಂಡನು. ಅವನನ್ನು ನೋಡಿ ಶ್ರೀನಿವಾಸನು ಮಹಾಕೋಪದಿಂದ ಇಂದ್ರನಿಗೆ–"ದೇವೇಂದ್ರನೇ, ಈಗ ವಿಶ್ವಕರ್ಮನು ಬಹಳ ಗರ್ವಿತನಾಗಿರುವನು. ಅಣ್ಣನಾದ ನಿನ್ನ ಬಲದಿಂದ ಎರಡನೆಯವರ ಹಿತಾಹಿತವನ್ನು ತಿಳಿಯುವದಿಲ್ಲ; ಬಹಳ ಹೇಳತಕ್ಕದ್ದೇನು! ನನ್ನನ್ನು ಸಹ ಲಕ್ಷ್ಯಕ್ಕೆ ತರುವದಿಲ್ಲ; ಆದ್ದರಿಂದ ಈ ದುಷ್ಟನನ್ನು ಇವನ ಅಧಿಕಾರದಿಂದ ತೆಗೆದುಹಾಕಿ ಬಿಡು." ಎಂದು ಹೇಳಲು, ವಿಶ್ವಕರ್ಮನು, ಕೋಪದಿಂದ ಯುಕ್ತನಾದ ಶ್ರೀನಿವಾಸನ ವಚನಗಳನ್ನು ಕೇಳಿ ಭಯಗ್ರಸ್ತನಾಗಿ ನಮಸ್ಕರಿಸಿ ಕೈ ಜೋಡಿಸಿಕೊಂಡು ನಿಂತು–"ದೇವಾಧಿದೇವನೇ, ನಿನಗೆ ಪ್ರಿಯವಾದ ಯಾವ ಕೆಲಸವೂ ನನ್ನಿಂದ ಮಾಡಲ್ಪಡಲಿಲ್ಲ; ನನ್ನ ಅಪರಾಧಗಳನ್ನು ಕ್ಷಮಿಸು, ನನ್ನ ಮೇಲಿನ ಕೋಪವನ್ನು ಶಾಂತಮಾಡು" ಎಂದು ಬೇಡಿಕೊಂಡನು. ಆಗ ಶ್ರೀನಿವಾಸನು ಇಂದ್ರನಿಗೆ–"ದೇವೇಂದ್ರನೇ, ಈ ಮುನಿಗಳು ದೇವತೆಗಳು ಮೊದಲಾದವರೆಲ್ಲರು ನನ್ನ ಲಗ್ನಕ್ಕಾಗಿ ಬಂದು, ಮನೆಯಿಲ್ಲದೆ ಇಂಥ ಬೈಲಿನಲ್ಲಿ ಇರುತ್ತಾರೆಂಬದನ್ನು ಇವನು ಕಣ್ಣಿನಿಂದ ನೋಡುತ್ತಿರುವನಲ್ಲ! ಇದು ಸರಿಯೇನು? ಎಲ್ಲರಿಗೂ ಸಾಕಾಗುವಷ್ಟು ವಿಸ್ತೀರ್ಣವಾದ ಒಂದು ಮಂದಿರವನ್ನು ಇವನು ಮಾಡಬಾರದೇನು? ಶಚೀಪತಿಯೇ, ಬೇಗನೆ ಇವನ ಕಡೆಯಿಂದ ಐವತ್ತು ಯೋಜನ ಉದ್ದವಾಗಿಯೂ ಮೂವತ್ತು ಯೋಜನ ಅಗಲವಾಗಿಯೂ ಇರುವ ಒಂದು ಮನೋಹರವಾದ ಸಭೆಯನ್ನು ಮಾಡಿಸು" ಎನಲು, ಕೂಡಲೆ ಇಂದ್ರನು ಆ ವಿಶ್ವಕರ್ಮನಿಂದ ಅಂಥ ಸಭೆಯನ್ನು ಮಾಡಿಸಿದನು. ಅದನ್ನು ನೋಡಿ ಶ್ರೀನಿವಾಸನು ಸಂತೋಷ ಪಟ್ಟು– "ಇಂದ್ರನೇ, ಇನ್ನೊಂದು ಕೆಲಸವೇನೆಂದರೆ,–ಈ ವಿಶ್ವಕರ್ಮನಿಂದ ಸಹಿತನಾಗಿ ನೀನು ಆಕಾಶರಾಜನ ಪಟ್ಟಣಕ್ಕೆ ಹೋಗಿ, ಅವನಿಗೆ ಸಮಾಧಾನಕರವಾದ ಮಾತುಗಳನ್ನು ಹೇಳಿ ಆ ಪಟ್ಟಣದಲ್ಲಿ ನಮಗೆ ಇಳಿದುಕೊಳ್ಳುವದಕ್ಕಾಗಿ ಬಿಡಾರಗಳನ್ನು ಮಾಡಿಸು" ಎಂದನು. ಶ್ರೀನಿವಾಸನ ಅಪ್ಪಣೆಯಂತೆ ದೇವೇಂದ್ರನು ವಿಶ್ವಕರ್ಮನಿಂದ ಸಹಿತನಾಗಿ ಹೋಗಿ, ಆ ರಾಜನಗರದ ಸುತ್ತುಮುತ್ತಲಿನ ಪ್ರದೇಶದಲ್ಲಿರುವ ವನಗಳನ್ನೂ,

ಗಿರಿಗಂಹ್ವರಗಳನ್ನೂ ನೆಲಸಮಮಾಡಿಸಿ, ಆ ಸ್ಥಳದಲ್ಲಿ ನಾನಾವಿಧವಾದ ಗೃಹ ಗಳನ್ನೂ, ಸಭಾಗೃಹಗಳನ್ನೂ, ಋಷಿಗಳಿಗಾಗಿ ಪರ್ಣಶಾಲೆಗಳನ್ನೂ ಮಾಡಿಸಿ ದನು, ಮತ್ತು ಆಕಾಶರಾಜನ ಹೇಳಿಕೆಯಂತೆ, ವಿಚಿತ್ರವಾದ ಮುತ್ತು ರತ್ನಗಳಿಂ ದಲೂ, ಅನೇಕ ಸ್ತಂಭಗಳಿಂದಲೂ ಒಪ್ಪುವ ವಿಸ್ತಾರವಾದ ಲಗ್ನಮಂಟಪವನ್ನು ಮಾಡಿಸಿದನು. ಹಾಗು ಶ್ರೀನಿವಾಸನು ವಾಸಿಸುವದಕ್ಕಾಗಿ, ರತ್ನಗೋಪುರ ಗಳಿಂದಲೂ, ಮಣಿತೋರಣಗಳಿಂದಲೂ, ಧನಧಾನ್ಯಗಳಿಂದಲೂ, ಅನೇಕ ಸ್ತಂಭ ಗಳಿಂದಲೂ ಶೋಭಿಸುವ ಒಂದು ಮನೆಯನ್ನು ಕಟ್ಟಿಸಿದನು. ಅನೇಕ ಭಾವಿ ಗಳನ್ನೂ, ಗಜಶಾಲೆ ಅಶ್ವಶಾಲೆ ಮೊದಲಾದ ನಾನಾ ಶಾಲೆಗಳನ್ನೂ ಕಟ್ಟಿಸಿದನು.

॥ ಇತಿ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿ, ಶ್ರೀ ವೇಂಕಟೇಶ ಮಾಹಾತ್ಮ್ಯ ದಲ್ಲಿ "ಸರ್ವಬಂಧು ಸಮಾಗಮ"ವೆಂಬ ೧೦ನೆಯ ಅಧ್ಯಾಯವು ಮುಗಿದುದು ॥

# ೧೧ನೆಯ ಅಧ್ಯಾಯ



ಶತಾನಂದ ಋಷಿಗಳು ಹೇಳುತ್ತಾರೆ—"ಕೇಳೈ ಜನಕರಾಜನೇ, ದೇವೇಂದ್ರನು ಆಕಾಶರಾಜನ ಪಟ್ಟಣಕ್ಕೆ ಹೋದಮೇಲೆ ಇತ್ತ ಶ್ರೀನಿವಾಸನು— ಎಲೈ ದೇವತೆ ಗಳಿರಾ, ನಾನು ಪದ್ಮಾವತಿಯನ್ನು ಲಗ್ನಮಾಡಿಕೊಳ್ಳಲಿಚ್ಛಿಸುವೆನು; ಆದರೆ ನೀವೆಲ್ಲರು ಸಮ್ಮತಿಸಿದರೆ ಈ ಕಾರ್ಯವನ್ನು ಮಾಡುತ್ತೇನೆಂದು ನುಡಿಯಲು, ಬ್ರಹ್ಮನು ಸಕಲದೇವತೆಗಳ ಸಮ್ಮತಿಯಿಂದ-ಪುರುಷೋತ್ತಮನೇ, ನಾವೆಲ್ಲರೂ ನಿನ್ನ ದಾಸಾನುದಾಸರಾಗಿರುವೆವು; ನಿನ್ನ ಅನುಗ್ರಹದಿಂದ ಲಗ್ನಮಹೋತ್ಸವ ವನ್ನು ನೋಡಬೇಕೆಂದು ಇಚ್ಛಿಸುತ್ತಿರುವೆವು, ನಮ್ಮ ಅಪೇಕ್ಷೆಯನ್ನು ಪೂರ್ಣ ಮಾಡು, ಎಂದು ಹೇಳಿದನು. ಆಗ ಶಂಕರನು—"ಶ್ರೀನಿವಾಸನೇ, ನೀನು ಪ್ರಾಕೃತ ಪುರುಷನಂತೆ ಮಾತುಗಳನ್ನಾಡಿ ನಮ್ಮನ್ನು ವಿನೋದ ಮಾಡುತ್ತಿರುವೆ. ಅದೇಕೆ ? ನಿನ್ನ ಮನಸ್ಸಿಗೆ ಪ್ರಶಸ್ತವಾಗಿ ಕಂಡರೆ ಆ ಕನ್ನಿಕೆಯನ್ನು ಅಂಗೀಕರಿಸು, ಎಂದು ಹೇಳಿದನು. ಅವನ ಮಾತಿಗೆ ಶ್ರೀನಿವಾಸನು ನಕ್ಕು ಶಂಕರನನ್ನು ಹೊಗಳಿದನು. ಆ ಸಮಯದಲ್ಲಿ ಬ್ರಹ್ಮನು—"ಶ್ರೀನಿವಾಸನೇ, ಇನ್ನುಮೇಲೆ ವಿವಾಹದ ಪೂರ್ವ ದಲ್ಲಿ ಅಷ್ಟವರ್ಗವನ್ನು ಮಾಡತಕ್ಕದ್ದು; ಆದ್ದರಿಂದ ಪುಣ್ಯಾಹವಾಚನಕಾರ್ಯ

ದಲ್ಲಿ ನನಗೆ ಅಪ್ಪಣೆಯನ್ನು ಕೊಡು" ಎಂದು ಹೇಳಿದನು. ಅದಕ್ಕೆ ಶ್ರೀನಿವಾಸನು ವಶಿಷ್ಠ ಋಷಿಗಳನ್ನು ಕರೆದು ಅವರನ್ನು ಪೌರೋಹಿತ್ಯದ ಕೆಲಸದಮೇಲೆ ಯೋಜಿಸಿ, ಯಜುಃಶಾಖೋಕ್ತ ಮಂತ್ರಗಳಿಂದ ಪುಣ್ಯಾಹವಾಚನೆಯನ್ನು ಮಾಡತಕ್ಕದ್ದೆಂದು ಹೇಳಿದನು; ಮತ್ತು ಸಮಸ್ತರಾದ ದೇವತೆಗಳಿಗೆ ನೀನೇ ಯಜಮಾನನಾಗೆಂದು ಬ್ರಹ್ಮನನ್ನು ನೇಮಿಸಿದನು; ದೇವತೆಗಳಿಗೂ ಋಷಿಗಳಿಗೂ ಮರ್ಯಾದೆಯನ್ನು ಮಾಡುವ ಕೆಲಸದಲ್ಲಿ ಶಂಕರನನ್ನೂ, ದೇವತೆಗಳನ್ನು ಕರೆದು ಕೊಂಡು ಬರುವದಕ್ಕೆ ಷಣ್ಮುಖನನ್ನೂ ಬೀಗರಿಗೆ ಮರ್ಯಾದೆಯನ್ನು ಕೊಡುವ ದಕ್ಕೆ ಮನ್ಮಥನನ್ನೂ ನೇಮಿಸಿದನು; ಮತ್ತು ಅಗ್ನಿಯನ್ನು ಕರೆದು–ಅಗ್ನಿಯೇ ಋಷಿಗಳಿಗೂ ಸಮಸ್ತ ದೇವತೆಗಳಿಗೂ ನೀನು ಮಾಡುವ ಪಾಕವು ಸಮ್ಮತವಾದ ದ್ದರಿಂದ ನಿನ್ನ ಪತ್ನಿಯರಾದ ಸ್ವಾಹಾ, ಸ್ವಧಾದೇವಿಯರಿಂದ ಯುಕ್ತನಾಗಿ ಪಾಕ ಮಾಡುವ ಕೆಲಸದಲ್ಲಿ ನಿನ್ನನ್ನು ಯೋಜಿಸಿರುವೆನೆಂದು ಹೇಳಿದನು. ಜಲವನ್ನು ಪೂರೈಸುವದಕ್ಕೆ ವರುಣನನ್ನೂ, ದುಷ್ಟರಿಗೆ ದಂಡನೆ, ಶಿಷ್ಟರಿಗೆ ಪರಿಪಾಲನೆ ಮಾಡುವ ಕೆಲಸದಲ್ಲಿ ಯಮನನ್ನೂ, ಸುಗಂಧ ದ್ರವ್ಯಗಳನ್ನು ಪೂರೈಯಿಸುವ ಕೆಲಸದಲ್ಲಿ ವಾಯುವನ್ನೂ, ಬ್ರಾಹ್ಮಣರಿಗೆ ವಸ್ತ್ರಾಲಂಕಾರ ದಕ್ಷಿಣೆ ಮೊದಲಾದ ವುಗಳನ್ನು ದಾನಕೊಡುವ ಕೆಲಸದಲ್ಲಿ ಧನಾಧಿಪತಿಯಾದ ಕುಬೇರನನ್ನೂ ದೀಪ ಜ್ಯೋತಿಯನ್ನು ಮಾಡುವದಕ್ಕೆ ಚಂದ್ರನನ್ನೂ ಭಾಂಡಾದಿಗಳನ್ನು ತೊಳೆಯುವ ದಕ್ಕಾಗಿ ಅಷ್ಟವಸುಗಳನ್ನೂ, ಪಾತ್ರದ್ರೋಣಗಳನ್ನು ಪೂರೈಸುವದಕ್ಕೆ ನವ ಗ್ರಹಗಳನ್ನೂ ನೇಮಿಸಲು, ಶ್ರೀನಿವಾಸನ ಆಜ್ಞಾನುಸಾರವಾಗಿ ಸರ್ವರೂ ತಮ್ಮ ತಮ್ಮ ಕೆಲಸಗಳಲ್ಲಿ ತತ್ಪರರಾಗಿರುತ್ತಿದ್ದರು.

ಆಗ ಬ್ರಹ್ಮದೇವನು–ಪಿತನೇ, ಇನ್ನು ಮೇಲೆ ಪುಣ್ಯಾಹವಾಚನ ಕಾರ್ಯ ವನ್ನೂ, ಇಷ್ಟದೇವತಾ, ಕುಲದೇವತಾ ಪ್ರತಿಷ್ಠಾಪನೆಯನ್ನೂ ಮಾಡತಕ್ಕದ್ದು, ಎಂದು ಹೇಳಿದನು. ಆ ಸಮಯದಲ್ಲಿ ಕರವೀರಪುರದಲ್ಲಿರುವ ತನ್ನ ಸತಿಯಾದ ಲಕ್ಷ್ಮಿಯನ್ನು ನೆನಿಸಿ, ಲೌಕಿಕದೇಹಧಾರಿಯಾದ ಶ್ರೀನಿವಾಸನು ಮನುಷ್ಯರಂತೆ ದುಃಖವನ್ನು ಮಾಡಹತ್ತಿದನು. ಆತನು ಬ್ರಹ್ಮನಿಗೆ–ಪುತ್ರನೇ- ಆಕಾಶಮಂಡಲ ದಲ್ಲಿ ಚಂದ್ರನಿಲ್ಲದೆ ನಕ್ಷತ್ರಗಳು ಹ್ಯಾಗೆ ಶೋಭಿಸುವದಿಲ್ಲವೋ ? ವೃಕ್ಷಗಳಿಂದ ರಹಿತವಾದ ಅರಣ್ಯವೂ, ಫಲಗಳಿಂದ ರಹಿತವಾದ ವೃಕ್ಷಗಳೂ ಹ್ಯಾಗೆ ಶೋಭಿಸುವ

ದಿಲ್ಲವೋ ? ಹಾಗೆ ನೀನೇ ಮೊದಲಾದ ಸಮಸ್ತ ದೇವತೆಗಳು ಇದ್ದರೂ ಮಹಾ ಲಕ್ಷ್ಮಿಯು ಇಲ್ಲಿ ಇಲ್ಲದ್ದರಿಂದ, ಈ ಸಭೆಯು ಶೋಭಿಸುವದಿಲ್ಲೆಂದು ಹೇಳಿದನು. ಆಗ ಶಂಕರನು—"ದೇವೇಶನೇ, ನೀನು ಪ್ರಾಕೃತ ಮನುಷ್ಯರ ಹಾಗೆ ವ್ಯರ್ಥವಾಗಿ ರೋದನವನ್ನು ಮಾಡುವ ಕಾರಣವೇನು ? ಇದೆಲ್ಲ ಲೋಕವಿಡಂಬನಕ್ಕಾಗಿ ನೀನು ಮಾಡುವೆಯೆಂದು ನುಡಿದನು. ಆಗ ಶ್ರೀನಿವಾಸನು—ಶಂಕರನೇ, ನೀನು ಬಾಲಕನು, ನಿನಗೇನು ತಿಳಿಯುವದು ? ಎಲೈ ಶಂಭುವೇ, ಮಹಾಪ್ರಳಯದಲ್ಲಿ ಸಹ ನಿರಾಶ್ರಯವಾದ ಕ್ಷೀರಸಾಗರದಲ್ಲಿ, ಆ ಲಕ್ಷ್ಮಿಯು ನನಗೆ ಹಿತಕರಳಾಗಿ ಶಯ್ಯಾಭೂತಳಾಗಿ ಇರುವಳು. ಅಂಥ ನನ್ನ ಪತ್ನಿಯು ಇಲ್ಲಿ ಇಲ್ಲದೆ ನನಗೆ ಹ್ಯಾಗೆ ಸೌಖ್ಯವಾದೀತು ? ಎಂದು ಕೇಳಿದನು. ಅದಕ್ಕೆ ಬ್ರಹ್ಮನು—"ಶ್ರೀನಿವಾಸನೇ, ಇದನ್ನು ನನಗೆ ಮೊದಲೇ ಯಾಕೆ ಹೇಳಲಿಲ್ಲ ? ಇಷ್ಟರಲ್ಲಿಯೇ ಕರೆದುಕೊಂಡು ಬರುತ್ತಿದ್ದೆನು. ಈಗಾದರೂ ನನಗೆ ಅಪ್ಪಣೆಯನ್ನು ಕೊಡು, ಎಂದು ಕೇಳಿದನು. ಶ್ರೀನಿವಾಸನು ಆ ಕ್ಷಣದಲ್ಲಿಯೇ ಸೂರ್ಯನನ್ನು ಕರೆದು—"ಭಾಸ್ಕರನೇ, ನೀನು ಈಗಲೇ ಹೋಗಿ ಕರವೀರಪುರದಲ್ಲಿರುವ ನನ್ನ ಸತಿಯಾದ ಲಕ್ಷ್ಮಿಯನ್ನು ಕರೆದು ಕೊಂಡು ಬಾ, ಎಂದು ಹೇಳಿದನು. ಅದಕ್ಕೆ ಸೂರ್ಯನು ವಿನಯದಿಂದ—"ಗೋವಿಂದನೇ, ನಿನ್ನ ಆಜ್ಞೆಯಂತೆ ಮಾಡುವೆನು; ಆದರೆ ಆ ಲಕ್ಷ್ಮೀದೇವಿಯು ನನ್ನ ಮೇಲೆ ಹ್ಯಾಗೆ ವಿಶ್ವಾಸವನ್ನಿಡುವಳು ? ಇದೊಂದು ಸಂಶಯವೇ ಸರಿ ಯೆಂದು ಹೇಳಲು, ಶ್ರೀನಿವಾಸನು— ಸೂರ್ಯನೇ, ಪುತ್ರನಾದ ನಿನ್ನ ಮೇಲೆ ಆಕೆಯ ಪ್ರೇಮವಿರುತ್ತದೆ, ನಿನ್ನ ಆಗಮನದಿಂದ ಆಕೆಯು ಸಂತುಷ್ಟಳಾಗಿ ನಿನ್ನ ಕೂಡ ಬರುವಳು; ಇದಕ್ಕೊಂದು ಉಪಾಯವನ್ನು ಹೇಳುತ್ತೇನೆ, ಕೇಳು. ನೀನು ಹೋಗಿ ಆ ಲಕ್ಷ್ಮಿಯ ದ್ವಾರದಲ್ಲಿ ಕಣ್ಣೀರುಗಳನ್ನು ಸುರಿಸುತ್ತ ಕುಳಿತಿರು. ಆಗ ಲಕ್ಷ್ಮಿಯು ನಿನ್ನನ್ನು ಸಮಾಧಾನ ಮಾಡಿ—ಸೂರ್ಯನೇ, ನಿನ್ನ ದುಃಖದ ಕಾರಣ ವೇನು ? ನಿನ್ನ ಅಧಿಕಾರವನ್ನು ಯಾರಾದರೂ ಕಸಕೊಂಡರೋ ಹ್ಯಾಗೆ ? ಎಂದು ಕೇಳುವಳು. ಆಗ ನೀನು—ಲಕ್ಷ್ಮೀದೇವಿಯೇ, ನನ್ನ ಅಧಿಕಾರವನ್ನು ಯಾರೂ ಹರಣ ಮಾಡಲಿಲ್ಲ, ನನಗೆ ಅಧಿಕಾರವನ್ನು ಕೊಟ್ಟ ನಿನ್ನ ಪತಿಯು ನಿಶ್ಚೇತನನಾಗಿ ಮಲಗಿರುವನು; ನಿನ್ನನ್ನು ಯಾವಾಗ ನೋಡುವೆನೋ ಎಂದು ದುಃಖಿಸುತ್ತಲಿರು ವನೆಂದು ಹೇಳು. ಇಂಥ ವೃತ್ತಾಂತವನ್ನು ಲಕ್ಷ್ಮಿಯು ಕೇಳಿದ ಕೂಡಲೆ ಇಲ್ಲಿಗೆ

ಬರುವಳು; ಈ ವಿಷಯದಲ್ಲಿ ಸಂಶಯವಿಲ್ಲವೆಂದು ಹೇಳಿದನು. ಇದನ್ನು ಕೇಳಿ ಸೂರ್ಯನು ಮುಗುಳುನಗೆಯಿಂದ-"ಸ್ವಾಮಿ, ಲಕ್ಷ್ಮೀದೇವಿಯು ಸರ್ವರ ಹೃದ್ಗತವನ್ನು ತಿಳಿಯುವವಳು. ಹೀಗಿದ್ದು ಇಂಥ ಮಾತುಗಳನ್ನು ಹೇಳಿದರೆ ನನ್ನನ್ನು ನಂಬುವ ಬಗೆ ಹ್ಯಾಗೆ? ಇದಲ್ಲದೆ ರೋಗರಹಿತನಾದ ನಿನಗೆ ಬೇನೆ ಬಂದಿರುವ ದೆಂದು ಹ್ಯಾಗೆ ಸುಳ್ಳು ಮಾತುಗಳನ್ನು ಹೇಳಲಿ? ಎಂದು ಬೇಡಿಕೊಳ್ಳಲು, ಶ್ರೀನಿವಾಸನು-ಸೂರ್ಯನೇ, ವಿಶೇಷ ಮಾತುಗಳಿಂದ ಪ್ರಯೋಜನವೇನು? ಆ ಲಕ್ಷ್ಮಿಯು ನನ್ನ ಮಾಯೆಯಿಂದ ಮೋಹಿತಳಾಗಿರುವಳು. ನಾನು ಹೇಳಿದಂತೆ ನೀನು ಅಂದ ಕೂಡಲೆ ಬರುತ್ತಾಳೆ, ಈ ವಿಷಯದಲ್ಲಿ ಸಂಶಯವನ್ನು ಮಾಡಬೇಡ. ಬೇಗನೆ ಹೋಗು, ಎಂದು ಹೇಳಿದನು. ಅದಕ್ಕೆ ಸೂರ್ಯನು ಒಪ್ಪಿ ಶ್ರೀನಿವಾಸನ ರಥದಲ್ಲಿ ಕುಳಿತುಕೊಂಡು ಕರವೀರಪುರಕ್ಕೆ ಹೋಗಿ, ಶ್ರೀನಿವಾಸನು ತನಗೆ ಹೇಳಿದಂತೆ ಮಾಡಿದನು. ಆಗ ಸೂರ್ಯನ ಮಾತುಗಳಿಂದ ಲಕ್ಷ್ಮೀದೇವಿಯು ದುಃಖಪಟ್ಟು, ಕೂಡಲೆ ರಥವನ್ನು ಹತ್ತಿ, ವಾಯುವೇಗದಿಂದ ವೇಂಕಟಾಚಲಕ್ಕೆ ಬಂದಳು.

ಇತ್ತ ಶ್ರೀನಿವಾಸನು, ಲಕ್ಷ್ಮೀದೇವಿಯು ಬಂದ ವರ್ತಮಾನವನ್ನು ಕೇಳಿ, ತಾನು ಬೇನೆಯವನಂತೆ ರೂಪವನ್ನು ಧರಿಸಿಕೊಂಡು, ಆಕೆಯ ಸಮ್ಮುಖಕ್ಕೆ ಹೋಗಬೇಕೆಂದೆಣಿಸಿ, ಭುಜಂಗಭೂಷಣನಾದ ರುದ್ರನ ಭುಜದಮೇಲೆ ತನ್ನ ದೊಂದು ಭುಜವನ್ನೂ, ಬ್ರಹ್ಮನ ಕಂಠದಮೇಲೆ ಮತ್ತೊಂದು ಭುಜವನ್ನೂ ಹಾಕಿ ಕೊಂಡು ಬರುತ್ತಿದ್ದನು. ಶ್ರೀನಿವಾಸನ ಅಶಕ್ತಾಕೃತಿಯು ಅದ್ಭುತವಾಗಿ ತೋರು ತ್ತಿತ್ತು. ಅಂಥರೂಪವು ಅಲ್ಲಿರುವ ದೇವತೆಗಳಿಗೂ, ಋಷಿಗಳಿಗೂ ಆಶ್ಚರ್ಯಕರ ವಾಗಿ ತೋರಿತು. ಶ್ರೀನಿವಾಸನು ಈಪ್ರಕಾರವಾಗಿ ಲಕ್ಷ್ಮೀದೇವಿಯ ಸಮ್ಮುಖಕ್ಕೆ ಬರುತ್ತಿರಲು, ಲಕ್ಷ್ಮಿಯು ತನ್ನ ರಥದಿಂದಿಳಿದು ವೇಗದಿಂದ ಬಂದು, ಕಪಟ ನಾಟಕಿಯಾದ ಶ್ರೀನಿವಾಸನನ್ನು ಕಂಡು ಮುಗುಳುನಗೆಯಿಂದ ಯುಕ್ತಳಾಗಿ ತನ್ನ ಬೊಗಸೆಯಲ್ಲಿದ್ದ ಚಂಪಕ ಪುಷ್ಪಗಳನ್ನು ತನ್ನ ಪತಿಯ ಪಾದಗಳಮೇಲೆ ಸೂರೆ ಮಾಡಿ, ಅತಿಭಕ್ತಿಯಿಂದ ಅಪ್ಪಿಕೊಂಡಳು. ಆಗ ರಮಾದೇವಿಯ ಆಲಿಂಗನ ಮಾತ್ರದಿಂದ ಶ್ರೀನಿವಾಸನು ಪುಷ್ಟವಾದ ದೇಹವುಳ್ಳವನಾದನು. ಬಳಿಕ ಉಭಯ ತರು ತಮ್ಮ ತಮ್ಮ ಕುಶಲಪ್ರಶ್ನೆಗಳನ್ನು ಮಾಡುತ್ತಿದ್ದರು. ಆ ಸಮಯದಲ್ಲಿ

ಸರ್ವಲೋಕಕ್ಕೆ ಮಾತಾಪಿತೃಗಳಾದ ರಮಾ-ನಾರಾಯಣರನ್ನು ಸರ್ವದೇವತೆಗಳೂ, ಋಷಿಗಳೂ ಕಣ್ತುಂಬ ನೋಡಿ ನಮಸ್ಕಾರ ಮಾಡಿದರು. ಬಳಿಕ ಆ ಉಭಯತರು ಏಕಾಂತಸ್ಥಾನಕ್ಕೆ ಹೋದರು. ಆಗ ಲಕ್ಷ್ಮೀದೇವಿಯು—ಪತಿಯೇ, ನೀನು ಮಹಾಕಪಟನಾಟಕಿಯು, ಸುಳ್ಳು ನಿಮಿತ್ತವನ್ನು ಹೇಳಿ ಕಳುಹಿ, ಒಳ್ಳೇ ವಿಚಿತ್ರವಾದ ಕಾರ್ಯವನ್ನು ಮಾಡಿ ನನ್ನನ್ನು ಮೋಹಪಡಿಸಿದೆ. ದೇವಾಧಿದೇವನೇ, ನಿನ್ನ ಮಾಯೆಯಿಂದ ಬ್ರಹ್ಮರುದ್ರೇಂದ್ರಾದಿಗಳು ಮೋಹಿತರಾಗುವರು. ನಾನು ಸಹ ಮೋಹಿತಳಾಗುವೆನು. ಇದಂತಿರಲಿ! ನನ್ನನ್ನು ಕರೆಸಿದ ಕಾರಣವೇನು? ಎಂದು ಕೇಳಲು, ಶ್ರೀನಿವಾಸನು—ಪ್ರಿಯಳೇ, ರಾಮಾವತಾರದಲ್ಲಿ ನೀನು ಏನು ಹೇಳಿರುವೆ? ಅದನ್ನು ನೆನಪಿನಲ್ಲಿ ತಂದುಕೋ. ವೇದವತಿಯು ನನ್ನ ವಚನದಂತೆ ಈಗ ಪದ್ಮಾವತಿಯಾಗಿ ಜನಿಸಿರುವಳು. ಈಗ ಆ ಪದ್ಮಾವತಿಯ ವಿವಾಹ ಕಾಲವು ಪ್ರಾಪ್ತವಾಗಿರುತ್ತದೆ; ಆದ್ದರಿಂದ ಲಕ್ಷ್ಮಿಯೇ, ನಿನ್ನ ಕೋರಿಕೆಯಂತೆ ನಿನ್ನ ಸಮ್ಮುಖದಲ್ಲಿಯೇ ಆಕೆಯ ವಿವಾಹವನ್ನು ಮಾಡಿಕೊಳ್ಳಲಿಚ್ಛಿಸುವೆನು, ಎಂದು ಹೇಳಿದನು. ಆಗ ಲಕ್ಷ್ಮೀದೇವಿಯು ತಾನು ಹೇಳಿದ ವಚನವನ್ನು ಸ್ಮರಿಸಿ,—ಶ್ರೀನಿವಾಸನೇ, ನನ್ನ ವಚನದಂತೆ ವೇದವತಿಯನ್ನು ವಿವಾಹವಿಧಿಪೂರ್ವಕವಾಗಿ ಅಂಗೀಕರಿಸಿ, ನನ್ನ ವಚನವನ್ನು ಸಫಲಮಾಡು, ಎಂದು ಹೇಳಿ, ತನ್ನ ಪತಿಗೆ ನಮಸ್ಕರಿಸಿದಳು. ಶ್ರೀನಿವಾಸನು ತನ್ನ ಪತ್ನಿಯ ವಚನವನ್ನು ಕೇಳಿ, ಸಂಪೂರ್ಣಮನೋರಥವುಳ್ಳವನಾಗಿಯೂ, ಆನಂದಪೂರ್ಣನಾಗಿಯೂ ವೇಂಕಟಾಚಲದಲ್ಲಿ ಶೋಭಿಸುತ್ತಿದ್ದನು.

॥ಇತಿ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿ ಶ್ರೀವೇಂಕಟೇಶ ಮಾಹಾತ್ಮ್ಯದಲ್ಲಿ 'ಶ್ರೀ ಲಕ್ಷ್ಮೀಸಮಾಗಮಯೋಗವೆಂ'ಬ ೧೨ನೆಯ ಅಧ್ಯಾಯವು ಮುಗಿದುದು.॥

## ೧೩ನೆಯ ಅಧ್ಯಾಯ



ಜನಕರಾಜನು ಕೇಳುತ್ತಾನೆ,—"ಶತಾನಂದರೇ, ಅನಂತರದಲ್ಲಿ ಶ್ರೀನಿವಾಸನು ಏನು ಮಾಡಿದನು? ಅದನ್ನು ವಿಸ್ತಾರವಾಗಿ ಹೇಳಿರಿ" ಎನಲು, ಶತಾನಂದ ಋಷಿಗಳು ಹೇಳತೊಡಗಿದರು,—

ಕೇಳೈ ಜನಕರಾಜನೇ, ಆ ಸಮಯದಲ್ಲಿ ಶ್ರೀನಿವಾಸನು ಬ್ರಹ್ಮನನ್ನು ಕರೆದು—ಬ್ರಹ್ಮನೇ, ಇನ್ನು ಮುಂದೆ ಮಾಡತಕ್ಕ ಕಾರ್ಯಗಳನ್ನು ಶೀಘ್ರವಾಗಿ ಮಾಡು, ಎನಲು, ಬ್ರಹ್ಮನು ಸಂತೋಷದಿಂದ ಕಟಾಹಭಾಂಡಗಳನ್ನು ತರುವದಕ್ಕೆ ಗರುಡನೇ ಮೊದಲಾದ ವೀರರಿಗೆ ಆಜ್ಞಾಪಿಸಿದನು. ಆಗ ಆ ವೀರರೆಲ್ಲರೂ ಕೂಡಿ ಅನೇಕ ವಿಧವಾದ ಕಟಾಹಭಾಂಡಗಳನ್ನು ತೆಗೆದುಕೊಂಡು ಬಂದರು. ಅನಂತರದಲ್ಲಿ ನೀರಿನ ಕೆಲಸವನ್ನು ಕೈಕೊಂಡ ವರುಣನು ದಿವ್ಯತೀರ್ಥಗಳಿಂದ ನೀರನ್ನು ತಂದು ಆ ಭಾಂಡಗಳನ್ನು ತುಂಬಿದನು. ಆ ಮೇಲೆ ವಸ್ತ್ರಾಲಂಕಾರಗಳಿಂದ ಭೂಷಿತರಾದ ಸಾವಿತ್ರಿ ಮೊದಲಾದ ಮುತ್ತೈದೆಯರೂ, ಸಿದ್ಧ ಸ್ತ್ರೀಯರೂ, ವೈಖಾನಸಸ್ತ್ರೀಯರೂ ಅರುಂಧತಿಯನ್ನು ಮುಂದೆಮಾಡಿಕೊಂಡು, ಪಾರ್ವತಿಯ ಕೈಯಲ್ಲಿ ದೀಪಯುಕ್ತವಾದ ಕಲಶವನ್ನು ಕೊಟ್ಟು, ಶ್ರೀಹರಿಯು ದಶಾವತಾರಗಳಲ್ಲಿ ಮಾಡಿದ ಚರಿತ್ರೆಯನ್ನು, ಮುಖ್ಯವಾಗಿ ಕೃಷ್ಣಾವತಾರದಲ್ಲಿ ಮಾಡಿದ ಚರಿತ್ರೆಯನ್ನು ಗಾಯನ ಮಾಡುತ್ತಿದ್ದರು. ಹೀಗೆ ವೇಂಕಟಾಚಲಕ್ಕೆ ಸ್ವಾಮಿಯಾದ ಶ್ರೀನಿವಾಸನ ವಿವಾಹಕಾರ್ಯಕ್ಕೆ ಪ್ರಾರಂಭವಾಯಿತು. ಆವತ್ತಿನ ವೈಶಾಖಶುದ್ಧ ಸಪ್ತಮಿ ದಿವಸ, ಶ್ರೀನಿವಾಸನ ಸೊಸೆಯಂದಿರು ಬಕುಲಾವತಿಯನ್ನು ಮುಂದೆ ಮಾಡಿಕೊಂಡು ನಾಲ್ಕುದಿಕ್ಕುಗಳಲ್ಲಿ ನಾಲ್ಕು ಕಲಶಗಳನ್ನಿಟ್ಟು, ಸೂತ್ರದಿಂದ ನಾಲ್ಕೂ ಕಲಶಗಳಿಗೆ ಸುರಿಗೆಯನ್ನು ಸುತ್ತಿ ಅದರ ನಡುವೆ ಒಂದು ರತ್ನಮಯವಾದ ಪೀಠವನ್ನಿಟ್ಟು ಶ್ರೀನಿವಾಸನಿಗೆ—ಪುರುಷೋತ್ತಮನೇ, ಏಳು, ಈ ಸೂತ್ರ ಮಧ್ಯದಲ್ಲಿ ಕೂಡ್ರು, ಎಂದು ಹೇಳಿದರು. ಶ್ರೀನಿವಾಸನು ದುಃಖಪಡುತ್ತ ಬ್ರಹ್ಮನಿಗೆ—ಪ್ರಾಜ್ಞನೇ, ಈ ವಿವಾಹಮಹೋತ್ಸವದಲ್ಲಿ ಆಶೀರ್ವಾದಪೂರ್ವಕವಾಗಿ ನನಗೆ ತೈಲವನ್ನು ಅಭಿಷೇಕಮಾಡುವವರು ಯಾರಿರುವರು ? ಬ್ರಹ್ಮನೇ, ಯಾವ ಮನುಷ್ಯನಿಗೆ ತಾಯಿತಂದೆಗಳಿರುವದಿಲ್ಲವೋ ? ಅವನ ಜನ್ಮಕ್ಕೆ ಧಿಕ್ಕಾರವಿರಲಿ. ವಿವಾಹಕಾಲದಲ್ಲಿಯೂ, ಮರಣಕಾಲದಲ್ಲಿಯೂ ಅಕ್ಕ-ತಂಗಿಯರೂ, ಅಣ್ಣ-ತಮ್ಮಂದಿರೂ, ಸೋದರಮಾವಂದಿರೂ, ಬೀಗರೂ ಇದ್ದರೆ ನೆಟ್ಟಗಾಗುವದು. ಈಗ ನನಗೆ ಯಾರೂ ಇಲ್ಲ. ಮಾತಾ-ಪಿತೃವಿಹೀನನಾದ ನನ್ನ ಗತಿಯು ಏನಾಗುವದೋ, ತಿಳಿಯುವದಿಲ್ಲ. ಯಾಕಂದರೆ, ಮಾತೆಗೆ ಸಮಾನರಾದ ಪ್ರೀತಿಯುಳ್ಳವರು ಯಾರೂ ಇಲ್ಲ, ತಂದೆಗೆ ಸಮಾನವಾದ ಸೌಖ್ಯವು ಯಾವದೂ ಇಲ್ಲ, ಪತ್ನಿಗೆ ಸಮಾನವಾದ ಭಾಗ್ಯವು ಯಾವದು ಇಲ್ಲ, ಪುತ್ರನಿಗೆ ಸರಿಯಾದ ಗತಿ

ಇಲ್ಲ, ಅಣ್ಣ–ತಮ್ಮಂದಿರ ಸಮಾನರಾದ ಸ್ನೇಹಿತರು ಇಲ್ಲ, ಮತ್ತು ವಿಷ್ಣುವಿಗೆ ಸಮಾನನಾದ ಉತ್ತಮದೇವನಿಲ್ಲ. ಹೀಗೆ ಲೀಲಾರ್ಥವಾಗಿ ಮನುಷ್ಯದೇಹವನ್ನು ಧರಿಸಿದ ಶ್ರೀನಿವಾಸನು ಮಾತಾಡುತ್ತಿರಲು, ರುದ್ರನಿಂದ ಸಹಿತನಾಗಿ ಬ್ರಹ್ಮನು ಅವನನ್ನು ಸಮಾಧಾನಪಡಿಸಿ,—ಶ್ರೀನಿವಾಸನೇ, ಮಾಯಾರೂಪ ಪಂಜರದಲ್ಲಿ ವಾಸಮಾಡುವ ನಮ್ಮನ್ನು ಯಾಕೆ ಮೋಹವಡಿಸುವೆ? ದೇವಾಧಿದೇವನೇ, ನನಗೆ ಯಾರೂ ಇಲ್ಲೆಂದು ಹೇಳುತ್ತೀಯಲ್ಲ ? ಇದು ಅಸತ್ಯವಲ್ಲವೇ ? ನಾನು ನಿನಗೆ ಪುತ್ರನಾಗಬೇಕು, ರುದ್ರನು ಪೌತ್ರನಾಗಬೇಕು, ಮನ್ಮಥನೊಬ್ಬನು ನಿನ್ನ ಮತ್ತೊಬ್ಬ ಪುತ್ರನಿರುವನು, ಷಣ್ಮುಖನು ನಿನ್ನ ಪ್ರಪೌತ್ರನು, ಜಗತ್ಪ್ರಾಣನಾಗಿ ರುವ ವಾಯುವು ನಿನ್ನ ಜ್ಯೇಷ್ಠಪುತ್ರನು, ಭಾರತೀದೇವಿಯು ನಿನ್ನ ಸೊಸೆಯು, ಸರಸ್ವತಿ ಮೊದಲಾದವರು ನಿನ್ನ ಪಾದಸೇವಕರು. ಶ್ರೀನಿವಾಸನೇ, ನೀನು ಪರಮ ಪುರುಷನು; ಜಗನ್ಮಾತೆಯಾದ ಲಕ್ಷ್ಮಿಯು ನಿನ್ನ ಪತ್ನಿಯು; ಹೀಗಿದ್ದು, ನೀನು ಈಗ ಮಾತಾಡುವದು ಕ್ರೀಡಾಮಾತ್ರವೆಂದು ತಿಳಿಯುತ್ತೇನೆ ಎಂದು ಹೇಳಿದನು.

ಆಗ ಶ್ರೀನಿವಾಸನು ತನ್ನ ಪತ್ನಿಯಾದ ಲಕ್ಷ್ಮಿಗೆ ಸಂಕೇತವನು ಮಾಡಲು. ಅದನ್ನು ತಿಳಿದು ಲಕ್ಷ್ಮಿಯು ಎದ್ದು—ಶ್ರೀನಿವಾಸನೇ, ನಿನ್ನ ಮನೋಭಿ ಪ್ರಾಯವು ತಿಳಿಯಿತು; ನಾನೇ ನಿನಗೆ ತೈಲದಿಂದ ಅಭಿಷೇಕವನ್ನು ಮಾಡಬೇ ಕೆಂಬ ನಿನ್ನ ಇಚ್ಛೆ ಇರುವದಲ್ಲವೇ ? ಇಕೋ, ನಾನು ಸಿದ್ಧಳಾಗಿರುವೆನು, ಏಳು, ಈ ರತ್ನಮಯವಾದ ಆಸನದಮೇಲೆ ಕೂಡ್ರು, ಎಂದು ಹೇಳಿದಳು. ಅದನ್ನು ಕೇಳಿ ಲೋಕಕ್ಕೆ ವಿಡಂಬನವನ್ನು ತೋರಿಸುವ ಶ್ರೀನಿವಾಸನು ಸಂತೋಷದಿಂದ ಎದ್ದು, ಕಶ್ಯಪ ಅತ್ರಿ ಭರದ್ವಾಜ ವಿಶ್ವಾಮಿತ್ರ ಮೊದಲಾದ ಋಷಿಗಳಿಗೆಲ್ಲ ವಂದಿಸಿ, ತನ್ನ ಪುರೋಹಿತರಿಗೆ—ವಶಿಷ್ಠರೇ, ನನಗೆ ಮಜ್ಜನಕ್ಕೆ ಆಜ್ಞೆಯನ್ನು ಕೊಡಿರಿ, ಎಂದು ಕೇಳಿಕೊಂಡು ಅನಂತರ ಸರ್ವದೇವತೆಗಳನ್ನು ಕೇಳಿ, ತನ್ನ ಕೇಶ ಗಳನ್ನು ಬಿಚ್ಚಿಕೊಂಡು ಪೂರ್ವಾಭಿಮುಖನಾಗಿ ಉತ್ತಮವಾದ ಆಸನದ ಮೇಲೆ ಕುಳಿತನು. ಆಗ ಸರ್ವದೇವತಾಸ್ತ್ರೀಯರ ಮಧ್ಯದಲ್ಲಿ ಒಪ್ಪುತ್ತಿರುವ ಸಮುದ್ರ–ರಾಜನ ಪುತ್ರಿಯಾದ ಲಕ್ಷ್ಮೀದೇವಿಯು ತನ್ನ ಕೈಯೊಳಗೆ ತೈಲದಿಂದ ಯುಕ್ತ ವಾದ ಸುವರ್ಣಪಾತ್ರೆಯನ್ನು ತೆಗೆದುಕೊಂಡು, ತನ್ನ ಪತಿಗೆ ತೈಲಾಭ್ಯಂಗವನ್ನು ಮಾಡಿದಳು. ಆಗ ಆಕೆಯು—ಶ್ರೀನಿವಾಸನೇ, ಬಹುಪುತ್ರರುಳ್ಳವನಾಗು, ಧನ

ವುಳ್ಳವನಾಗು, ಹದಿನಾಲ್ಕು ಲೋಕಕ್ಕೆ ಏಕಛತ್ರಾಧಿಪನಾಗು, ಎಂದು ಹರಿಸಿ, ಆ ಸುಗಂಧತೈಲವನ್ನು ಅವನ ಮೈಗೆಲ್ಲ ಮರ್ದನಮಾಡಿದಳು; ಬ್ರಹ್ಮನ ಪತ್ನಿಯಾದ ಸರಸ್ವತಿಯು ಪುನುಗಿನ ತೈಲವನ್ನೂ, ಪಚ್ಚಕರ್ಪೂರವನ್ನೂ ಕೂಡಿಸಿ ಕಲಿಸಿದ ಅರಿಷಣವನ್ನು ಶ್ರೀನಿವಾಸನ ಮೈಗೆಹಚ್ಚಿದಳು; ಆ ಸಮಯದಲ್ಲಿ ವಾದ್ಯಘೋಷಗಳು ಆಗುತ್ತಿರಲು. ಪುಣ್ಯತೀರ್ಥಗಳಿಂದ ತರಲ್ಪಟ್ಟ ಉಷ್ಣೋದಕವನ್ನು ರತ್ನಖಚಿತವಾದ ಸುವರ್ಣಕುಂಭಗಳಲ್ಲಿ ತುಂಬಿ ಲಕ್ಷ್ಮೀದೇವಿಯು ತಾನೇ ಶ್ರೀನಿವಾಸನಿಗೆ ಅಭಿಷೇಕಮಾಡಿ, ತನ್ನ ಪತಿಸೇವೆಯಿಂದ ಕೃತಕೃತ್ಯಳಾದೆನೆಂದು ತಿಳಿದುಕೊಂಡಳು. ಆ ಮೇಲೆ ನಾಲ್ಕು ಮಂದಿ ಮುತ್ತೈದೆಯರು ತಮ್ಮ ಕೈಗಳಲ್ಲಿ ಕಲಶಗಳನ್ನು ತೆಗೆದುಕೊಂಡು ಶ್ರೀನಿವಾಸನಿಗೆ ಮತ್ತೆ ಅಭಿಷೇಕವನ್ನು ಮಾಡಿದರು. ಅಷ್ಟರಲ್ಲಿ ದೇವತಾಸ್ತ್ರೀಯರು ಕುಂಕುಮೋದಕದಿಂದ ಕದಲಾರತಿಯನ್ನು ಮಾಡಿ, ಆಶೀರ್ವಾದವನ್ನು ಮಾಡಿದರು. ಬಳಿಕ ಬ್ರಹ್ಮಪತ್ನಿಯಾದ ಸಾವಿತ್ರಿಯು ಲಕ್ಷ್ಮೀದೇವಿಯ ಹಸ್ತದಲ್ಲಿ ವಸ್ತ್ರವನ್ನು ಕೊಟ್ಟಳು. ಆ ವಸ್ತ್ರದಿಂದ ಲಕ್ಷ್ಮಿಯು ಶ್ರೀನಿವಾಸನ ಮೈಯನ್ನು ಒರಿಸಿದಳು; ಪಾರ್ವತಿಯು ಧೂಪವನ್ನು ಕೊಡಲು, ಲಕ್ಷ್ಮಿಯು ತನ್ನ ಪತಿಯ ಕೇಶಗಳನ್ನು ಬಿಚ್ಚಿ ಧೂಪದ ಹೊಗೆಯನ್ನು ಕೊಟ್ಟು ಮತ್ತೆ ಕಟ್ಟಿದಳು. ಸಾವಿತ್ರಿಯು ಕನ್ನಡಿಯನ್ನು ತೋರಿಸಿದಳು; ಮತ್ತು ರತಿ, ಶಚಿಯರು ಚಾಮರಗಳನ್ನು ಬೀಸಿದರು; ಭಾರತೀದೇವಿಯು ಶ್ರೀನಿವಾಸನ ಮೇಲೆ ಛತ್ರವನ್ನು ಹಿಡಿದಳು. ಭಾಗೀರಥಿಯು ತನ್ನ ಪಿತನಾದ ಶ್ರೀನಿವಾಸನಿಗೆ ಪಾದುಕೆಗಳನ್ನು ತಂದುಕೊಟ್ಟಳು. ಅವುಗಳನ್ನು ಮೆಟ್ಟಿಕೊಂಡು ಅಹಲ್ಯಾದೇವಿಯನ್ನು ಉದ್ಧಾರಮಾಡಿದ ಪವಿತ್ರ ಪಾದಗಳಿಂದ ನಡೆಯುತ್ತ ಬಂದು, ಶ್ರೀನಿವಾಸನು ರತ್ನಖಚಿತವಾದ ಆಸನದ ಮೇಲೆ ಕುಳಿತನು. ಆ ಸಮಯದಲ್ಲಿ ದೇವತೆಗಳೂ, ಋಷಿಗಳೂ, ದಿಕ್ಪಾಲಕರೂ, ಅರ್ಯಮಾದಿ ಪಿತೃಗಳೂ, ತುಂಬುರ ಮೊದಲಾದ ಗಾಯಕರೂ, ರಂಭೆ ಮೊದಲಾದ ದೇವಸ್ತ್ರೀಯರೂ, ಸೂತ ಮಾಗಧ ಬಂದಿಗಳೂ ಆಸನದ ಮೇಲೆ ಕುಳಿತುಕೊಂಡು ಶ್ರೀನಿವಾಸನನ್ನು ಕಣ್ಣು ತುಂಬ ನೋಡಿ ಸಂತೋಷಪಟ್ಟರು.

ಆಮೇಲೆ ಶ್ರೀನಿವಾಸನು ಅಷ್ಟಮೀಚಂದ್ರನಂತೆ ಶೋಭಿಸುತ್ತಿರುವ ತನ್ನ ಲಲಾಟದಲ್ಲಿ ಊರ್ಧ್ವಪುಂಡವನ್ನು ಧರಿಸಿದನು. ಆಗ ಬಕುಲಾವತಿಯು ಲಕ್ಷ್ಮಿಗೆ-

ಲೋಕಜನನಿಯಾದ ಲಕ್ಷ್ಮಿಯೇ, ಶ್ರೀನಿವಾಸನ ಹಣೆಯಲ್ಲಿ ಕುಂಕುಮದ ರೇಖೆಯನ್ನು ಹಚ್ಚು, ಎಂದು ಹೇಳಲು, ಲಕ್ಷ್ಮೀದೇವಿಯು ಕುಂಕುಮವನ್ನು ಹಚ್ಚಿದಳು. ಆಮೇಲೆ ತನ್ನ ಪತಿಗೆ ಭೂಷಣಗಳಿಲ್ಲದೆ ಇರುವದನ್ನು ನೋಡಿ, ಲಕ್ಷ್ಮೀದೇವಿಯು ಬ್ರಹ್ಮನಿಂದಲೂ, ಶಂಕರನಿಂದಲೂ, ಕುಬೇರನಿಂದಲೂ ಅನೇಕ ರತ್ನಮಯವಾದ ಆಭರಣಗಳನ್ನು ಇಸುಕೊಂಡು ಶ್ರೀನಿವಾಸನ ಕೈಯಲ್ಲಿ ತಂದು ಕೊಟ್ಟಳು. ಆಗ ಅವನು- ಲಕ್ಷ್ಮಿಯೇ, ನೀನೇ ಈ ಭೂಷಣಗಳನ್ನು ಇಡು; ಎಂದು ಹೇಳಲು, ಲಕ್ಷ್ಮಿಯು, ತಾನೇ ಆ ಭೂಷಣಗಳನ್ನಿಟ್ಟಳು. ಆಗ ಶ್ರೀನಿವಾಸನು ಝಗಝಗಿಸುವ ಪೀತಾಂಬರವನ್ನುಟ್ಟುಕೊಂಡು, ಅಮೂಲ್ಯವಾದ ಉಡುದಾರವನ್ನು ಧರಿಸಿ, ಸರ್ವಾಭರಣಗಳಿಂದ ಭೂಷಿತನಾಗಿ, ಲೋಕಕ್ಕೆ ವಿಡಂಬನವನ್ನು ತೋರಿಸುವದಕ್ಕಾಗಿ, ಕಶ್ಯಪಾದಿ ಋಷಿಗಳಿಗೆ ನಮಸ್ಕಾರವನ್ನು ಮಾಡಿ ಸಂಧ್ಯಾವಂದನಾದಿ ಕ್ರಿಯೆಗಳನ್ನು ಮಾಡಿದನು.

ಅನಂತರ ಶ್ರೀನಿವಾಸನು ವಶಿಷ್ಠರಿಗೆ—ಮುನಿಶ್ರೇಷ್ಠರೇ, ಇನ್ನು ಮುಂದೆ ಮಾಡತಕ್ಕ ಕಾರ್ಯಗಳನ್ನು ಮಾಡಿರಿ; ಎಂದು ಹೇಳಿದನು. ಆಗ ವಶಿಷ್ಠರು ಮುತ್ತುಗಳಿಂದ ಚತುರಸ್ರವಾದ ವೇದಿಕೆಯನ್ನು ಹಾಕಿ, ಶ್ರೀನಿವಾಸನಿಂದ ಸಂಕಲ್ಪವನ್ನು ಮಾಡಿಸಿ, ಪುಣ್ಯಾಹವಾಚನೆಯನ್ನು ಮಾಡಿದರು. ಅನಂತರ ಬ್ರಹ್ಮನು ಅಷ್ಟವರ್ಗವನ್ನು ಮಾಡಿ ಬ್ರಾಹ್ಮಣರಿಗೆ ತಾಂಬೂಲ ದಕ್ಷಿಣೆಗಳನ್ನು ಕೊಟ್ಟು, ಸನ್ಮಾನಮಾಡಿದನು. ಆಗ ದೇವತೆಗಳು ಶ್ರೀನಿವಾಸನಿಗೆ ವಸ್ತ್ರಗಳನ್ನು ಕೊಟ್ಟರು. ಆಮೇಲೆ ವಶಿಷ್ಠರು—"ಶ್ರೀನಿವಾಸನೇ, ನಿನ್ನ ಕುಲದೇವತೆಯು ಯಾರು?"ಎಂದು ಕೇಳಲು, ಶ್ರೀನಿವಾಸನು—ವಶಿಷ್ಠರೇ, ನಮ್ಮ ಕುಲದೇವತೆಯು ಶಮಿಯು, ಪಾಂಡವರಿಗೂ ಆಕೆಯೇ ಕುಲದೇವತೆಯು, ಎಂದು ಹೇಳಿದನು. ವಶಿಷ್ಠರು ಅಗಸ್ತ್ಯಋಷಿಯ ಮುಖದಿಂದ ಶಮೀವೃಕ್ಷವು ಉತ್ತರದಿಕ್ಕಿನಲ್ಲಿ ಕೌಮಾರ ತೀರ್ಥದ ಸಮೀಪದಲ್ಲಿರುವದೆಂದು ತಿಳಿದು, ಆ ವೃಕ್ಷವಿದ್ದ ಸ್ಥಳಕ್ಕೆ ಶ್ರೀನಿವಾಸನನ್ನು ಕರೆದುಕೊಂಡು ಹೋದರು. ಅಲ್ಲಿ ಆಗ ವಿಧಾನಪೂರ್ವಕವಾಗಿ ಶಮೀವೃಕ್ಷದ ಪೂಜೆಮಾಡಿ, ನಮಸ್ಕರಿಸಿ,—"ಶಮಿಯೇ, ನೀನು ಶತ್ರುಗಳನ್ನು ನಾಶಮಾಡುವವಳಾಗಿಯೂ, ಅರ್ಜುನನ ಧನುಸ್ಸನ್ನು ಧರಿಸಿದವಳಾಗಿಯೂ, ರಾಮಚಂದ್ರನಿಗೆ ಪ್ರಿಯಳಾಗಿಯೂ ಇರುವೆ. ನೀನು ನನ್ನ ಪಾಪವನ್ನು ಪರಿಹರಿಸು;

ಸುರಪ್ರಿಯಳಾದ ತಾಯಿಯೇ, ನನ್ನ ಲಗ್ನಕಾರ್ಯವನ್ನು ನಿರ್ವಿಘ್ನದಿಂದ ನೆರವೇರಿಸು; ವಿವಾಹದಲ್ಲಿ ಸರ್ವದೇವತೆಗಳಿಗೂ, ಆಕಾಶರಾಜನಿಗೂ ಕಲಹವಾಗದಂತೆ ಮಾಡು." ಎಂದು ಪ್ರಾರ್ಥನೆ ಮಾಡಿ, ಅದರದೊಂದು ಸಣ್ಣ ಶಾಖೆಯನ್ನು ತೆಗೆದು ಅದನ್ನು ತನ್ನ ತಲೆಯ ಮೇಲಿಟ್ಟುಕೊಂಡು, ವಾದ್ಯಘೋಷಗಳಿಂದ ಸಹಿತನಾಗಿ, ತನ್ನ ಸ್ಥಳಕ್ಕೆ ಬಂದನು. ಬಳಿಕ ವಶಿಷ್ಠರಿಗೆ—ಮುನಿಶ್ರೇಷ್ಠರೇ, ಕುಲದೇವತೆಯನ್ನು ಎಲ್ಲಿ ಸ್ಥಾಪನಮಾಡಬೇಕು, ಎಂದು ಕೇಳಿದನು. ಆಗ ಅವರು ಶ್ರೀನಿವಾಸನಿಗೆ-ಪುರುಷೋತ್ತಮನೇ, ವರಾಹಮೂರ್ತಿಯ ಆಲಯದಲ್ಲಿ ನಿಮ್ಮ ಕುಲದೇವತೆಯನ್ನು ಸ್ಥಾಪಿಸಬೇಕು, ಎಂದು ಹೇಳಿದರು. ಶ್ರೀನಿವಾಸನು ವಶಿಷ್ಠರನ್ನು ಕರೆದುಕೊಂಡು ವರಾಹಮೂರ್ತಿಯ ಸನ್ನಿಧಿಗೆ ಬಂದು, -ವರಾಹರೂಪಿಯಾದ ಪರಮಾತ್ಮನೇ, ನಿನ್ನ ಅನುಗ್ರಹದಿಂದ ನಾನು ಲಗ್ನವನ್ನು ಮಾಡಿಕೊಳ್ಳಬಚ್ಛಿಸುತ್ತೇನೆ; ಆದ್ದರಿಂದ ನಿನ್ನ ಪತ್ನಿಯಾದ ಧರಾದೇವಿಯಿಂದ ಸಹಿತನಾಗಿ ಬಂದು ನನ್ನ ಕಾರ್ಯವನ್ನು ಸಾಂಗಮಾಡಬೇಕು, ಎಂದನು. ಅವಕ್ಕೆ ವರಾಹನು ಬಕುಲಾವತಿಯು ಬಂದರೆ ನಾನು ಬಂದಂತಾಯಿತೆಂದು ತಿಳಿ, ನನ್ನ ಸ್ಥಾನವನ್ನು ಬಿಟ್ಟು ಬರಲಾರೆನು, ಎಂದು ಹೇಳಿದನು. ಶ್ರೀನಿವಾಸನು—ಹಾಗೇ ಆಗಲಿ, ನನ್ನ ಕುಲದೇವತೆಯನ್ನು ನಿನ್ನ ಆಲಯದಲ್ಲಿ ಪ್ರತಿಷ್ಠಾಪನ ಮಾಡುತ್ತೇನೆಂದು ಹೇಳಿ, ಅವನ ಅಪ್ಪಣೆಯಿಂದ ಶ್ರೀನಿವಾಸನು ಒಂದು ಸುವರ್ಣದ ಕಲಶದಲ್ಲಿ ಮುತ್ತುಗಳನ್ನು ತುಂಬಿ, ಅದನ್ನು ವಸ್ತ್ರದಿಂದ ಸುತ್ತಿ ವಿಧಾನಪೂರ್ವಕವಾಗಿ ಪೂಜೆಯನ್ನು ಮಾಡಿ, ಕುಲದೇವತೆಯ ಪ್ರತಿಷ್ಠಾಪನೆ ಮಾಡಿ ಸ್ವಸ್ಥಾನಕ್ಕೆ ಬಂದನು.

ಆ ಸಮಯದಲ್ಲಿ ಶ್ರೀನಿವಾಸನು ತನ್ನ ಮನಸ್ಸಿನಲ್ಲಿ— ಇಲ್ಲಿ ಕೂಡಿರುವ ಇಷ್ಟು ಮಂದಿ ದೇವತೆಗಳಿಗೂ ಋಷಿಗಳಿಗೂ ಭೋಜನ ಮಾಡಿಸುವದು ನನ್ನಿಂದ ಆಗುವದಿಲ್ಲ; ಯಾಕಂದರೆ ಯಾವ ಸಾಹಿತ್ಯಗಳೂ ಭಾಂಡಗಳೂ ನನ್ನಲ್ಲಿ ಇರುವದಿಲ್ಲ; ಆದ್ದರಿಂದ ಇಲ್ಲಿಂದ ಹೊರಟು ಆಕಾಶರಾಜನ ಪಟ್ಟಣಕ್ಕೆ ಹೋದರೆ ಅಲ್ಲಿ ಸಹಜವಾಗಿ ಭೋಜನವಾಗುವದಲ್ಲದೆ, ನನ್ನ ವೆಚ್ಚವೂ ಉಳಿಯುವದು, ಎಂದೆಣಿಸಿ, ಶೀಘ್ರದಿಂದ ಪ್ರಯಾಣಮಾಡುವ ಮನಸ್ಸುಳ್ಳವನಾಗಿ ಬ್ರಹ್ಮನಿಗೆ—ಚತುರ್ಮುಖನೇ, ಈಗಲೇ ನಿನ್ನ ಚತುರಂಗ ಸೈನ್ಯದಿಂದಲೂ ಉಳಿದ ಎಲ್ಲ ಮಂಡಳಿಯಿಂದಲೂ ಕೂಡಿಕೊಂಡು ಹೊರಟು, ನಾರಾಯಣಪುರಕ್ಕೆ ಶೀಘ್ರವಾಗಿ ಮುಟ್ಟು

ನಂತೆ ವ್ಯವಸ್ಥೆಯನ್ನು ಮಾಡು; ಮಾರ್ಗವು ದೂರವಿದ್ದ ಕಾರಣ ವ್ಯರ್ಥವಾಗಿ ವೇಳೆಗಳೆಯಬೇಡ. ವೃದ್ಧರೂ ಬಾಲಕರೂ, ಸ್ತ್ರೀಯರೂ, ಋಷಿಗಳೂ ಮೆಲ್ಲ ಮೆಲ್ಲನೆ ನಡೆಯಲಿ, ಎಂದು ಹೇಳಲು, ಬ್ರಹ್ಮನು—ಪಿತನೇ, ಪುಣ್ಯಾಹವಾಚನೆಯನ್ನು ಮಾಡಿಕೊಂಡು, ಕುಲದೇವತೆಯನ್ನು ಪ್ರತಿಷ್ಠಾಪಿಸಿ, ಉಪವಾಸದಿಂದ ಹಾಗೇ ಲಗ್ನಕ್ಕೆ ಹೊರಡಬಾರದೆಂದು ನನ್ನ ಬುದ್ಧಿಗೆ ತೋರುತ್ತದೆ; ಇದಲ್ಲದೆ ಋಷಿಗಳೂ, ಬಾಲಕರೂ, ವೃದ್ಧರೂ ಬಹಳೇ ಹಸಿದಿರುವರು, ಎಂದು ಹೇಳಿದನು. ಅದಕ್ಕೆ ಶ್ರೀನಿವಾಸನು ಕೋಪದಿಂದ—ಬ್ರಹ್ಮನೇ, ನಿನಗೆ ಸ್ವಲ್ಪವಾದರೂ ತಿಳುವಳಿಕೆಯಿಲ್ಲೆಂಬ ಹಾಗೆ ತೋರುತ್ತದೆ. ಯಾಕಂದರೆ, ಮಾಡತಕ್ಕ ಕಾರ್ಯ ಯಾವದು—ಮಾಡಬಾರದ ಕಾರ್ಯ ಯಾವದು, ಇದು ಸಹ ನಿನಗೆ ತಿಳಿಯುವದಿಲ್ಲ. ದೇಶಕಾಲಗಳನ್ನು ಅನುಸರಿಸಿ ನಡೆಯಬೇಕು. ಎಲೈ ಬ್ರಹ್ಮನೇ, ನಾನು ಈ ಪರ್ವತದಲ್ಲಿ ಹತ್ತು ಸಾವಿರ ವರ್ಷ ಕಷ್ಟದಿಂದ ಕಾಲ ಕಳೆದೆನು, ಈಗ ಎಲ್ಲಿಯೋ ಸ್ವಲ್ಪ ಉದಯ ಕಾಲವು ನನಗೆ ಪ್ರಾಪ್ತವಾದದ್ದನ್ನು ಹ್ಯಾಗೆ ಕಣ್ಣಿನಿಂದ ನೋಡೀ. ನನ್ನ ದರಿದ್ರತ್ವವನ್ನು ತಿಳಿದೂ ತಿಳಿದೂ ಹೀಗೆ ಮಾತಾಡುತ್ತೀಯಲ್ಲ ! ನಿನಗೇನು ಅನ್ನಬೇಕು ! ಎಂದು ನುಡಿದನು. ಅದಕ್ಕೆ ಬ್ರಹ್ಮನು ಸುಮ್ಮನಾದನು. ಆನಂತರ ನೀಲಕಂಠನು ಮುಂದಕ್ಕೆ ಬಂದು,—ಶ್ರೀನಿವಾಸನೇ, ಬ್ರಹ್ಮನಿಗೆ ನೀನು ಹೀಗೆ ಮಾತಾಡುವದು ಯೋಗ್ಯವಾಗುವದೇ ? ಈ ಲೋಕದಲ್ಲಿ ವಿವಾಹ ಕಾರ್ಯಕ್ಕಾಗಲಿ, ಮನೆಕಟ್ಟುವ ಕೆಲಸಕ್ಕಾಗಲಿ ಪ್ರಾರಂಭವನ್ನು ಮಾಡಿ, ಯಾವನು ಸಂಪೂರ್ಣಮಾಡುವನೋ ಅವನೇ ಧನ್ಯನೆಂದು ಹೇಳತಕ್ಕದ್ದು. ಬಹಳ ದ್ರವ್ಯವನ್ನು ವೆಚ್ಚಮಾಡಿ ಸರ್ವಸಾಹಿತ್ಯವನ್ನು ಸಂಪಾದಿಸಿ ಇಂಥ ಕಾರ್ಯಗಳನ್ನು ಪೂರ್ಣಮಾಡಬೇಕು; ತನ್ನ ಹತ್ತರ ಹಣವಿಲ್ಲದಿದ್ದರೆ, ಸಾಲವನ್ನಾದರೂ ಮಾಡಿ ತಾನು ಹಿಡಿದ ಕಾರ್ಯವನ್ನು ಪೂರ್ಣಮಾಡಬೇಕು; ಹೀಗಿದ್ದು, "ನಾನು ದರಿದ್ರನು" ಎಂದು, ಹೇಳಿದವರ ಮೇಲೇ ಸಿಟ್ಟು ಮಾಡಿದರೆ, ಮುಂದೆ ಕಾರ್ಯವು ನಡೆಯುವ ಬಗೆ ಹ್ಯಾಗೆ ? ಎಂದು ಸಿಟ್ಟು ಮಾಡಿ ಹೇಳಿದನು. ಶ್ರೀನಿವಾಸನು ಅವನ ಮಾತುಗಳನ್ನು ಕೇಳಿ ಮತ್ತಿಷ್ಟು ಸಿಟ್ಟಾಗಿ,—ನೀಲಕಂಠನೇ, ಸಭೆಯಲ್ಲಿ ಕುಳಿತುಕೊಂಡು ಬರೇ ಬಾಯಿಂದ ಈ ಪ್ರಕಾರ ಪರಾಕ್ರಮದ ಮಾತುಗಳನ್ನು ಹೇಳಿದೆಯಲ್ಲ ! ಇದು ಯೋಗ್ಯವೇ ಸರಿ. ವಿವಾಹ ಕಾರ್ಯದಲ್ಲಿ ಬಹಳ ದ್ರವ್ಯವನ್ನು ವೆಚ್ಚ ಮಾಡಿ ಸಾಹಿತ್ಯವನ್ನು ಮಾಡಿಸತಕ್ಕ

ದ್ದೆಂಬುದೂ, ಹಣವಿಲ್ಲದಿದ್ದರೆ ಸಾಲವನ್ನಾದರೂ ಮಾಡಬೇಕೆಂಬದೂ ನನಗೆ ತಿಳಿಯುತ್ತದೆ; ಆದರೆ ನನಗೆ ಬೇಕಾಗುವ ವಿಪುಲ ದ್ರವ್ಯವನ್ನು ಸಾಲವಾಗಿ ಕೊಡುವವರು ಯಾರಿರುವರು ? ಇದನ್ನು ಹೇಳು, ವ್ಯರ್ಥವಾಗಿ ಮಾತಾಡಬೇಡ, ಎಂದು ನುಡಿದು, ಮತ್ತೆ ತನ್ನ ಮನಸ್ಸಿನಲ್ಲಿ—ಇವರು ನನ್ನನ್ನು ಹಾಗೇ ಬಿಡುವಂತೆ ತೋರುವದಿಲ್ಲ. ಒಳ್ಳೇದು, ವೆಚ್ಚಮಾಡದೆ ಕಾರ್ಯವನ್ನು ಸಾಗಿಸಬೇಕೆಂದರೆ, ನಡೆಯುವದು ಹ್ಯಾಗೆ ? ಇವರು ಹೇಳುವ ಮಾತುಗಳು ಯೋಗ್ಯವೇ ಸರಿ, ಎಂದು ಯೋಚಿಸಿ, ಶ್ರೀನಿವಾಸನು ಕುಬೇರನನ್ನೂ, ಬ್ರಹ್ಮನನ್ನೂ ಕರೆದುಕೊಂಡು, ಸ್ವಾಮಿಪುಷ್ಕರಣೀ ತೀರ್ಥದ ಪಶ್ಚಿಮದಿಕ್ಕಿನಲ್ಲಿರುವ ಅಶ್ವತ್ಥವೃಕ್ಷದ ಕೆಳಗೆ ಏಕಾಂತಸ್ಥಳದಲ್ಲಿ ಕುಳಿತು, ಕುಬೇರನಿಗೆ—ಧನಾಧಿಪನೇ, ಈ ಕಲಿಯುಗದಲ್ಲಿ ಆಗುವ ನನ್ನ ವಿವಾಹದದೆಸೆಯಿಂದ ನನ್ನ ಪುತ್ರನಾದ ಬ್ರಹ್ಮನಿಗೆ ಎಷ್ಟು ದ್ರವ್ಯವು ಬೇಕೋ, ಅಷ್ಟು ದ್ರವ್ಯವನ್ನು ಸಾಲವಾಗಿ ಕೊಟ್ಟು ನನ್ನ ಕಾರ್ಯವನ್ನು ಸಾಂಗ ಮಾಡು, ಎಂದು ಹೇಳಿದನು. ಅದಕ್ಕೆ ಕುಬೇರನು – ಶ್ರೀನಿವಾಸನೇ, ಈ ಚರಾಚರಾತ್ಮಕವಾದ ಜಗತ್ತು ನಿನ್ನ ಅಧೀನದಲ್ಲಿರುವದು. ಬಹು ಸಂಖ್ಯಾಕವಾದ ಜೀವರಾಶಿಗಳ ಮಧ್ಯದಲ್ಲಿ ನಾನು ಎಷ್ಟರವನು ? ನೀನಾಗಿ ಕೊಟ್ಟ ದ್ರವ್ಯವನ್ನು, ನಾನು ರಕ್ಷಣೆ ಮಾಡುತ್ತಿರುವೆನಲ್ಲದೆ, ಆ ದ್ರವ್ಯವನ್ನು ಕೊಡುವದಕ್ಕೂ ಬಿಡುವದಕ್ಕೂ ನಾನು ಅಧಿಕಾರಿಯಲ್ಲ. ನೀನೇ ಸ್ವತಂತ್ರನು, ಎಂದು ಹೇಳಿದನು. ಆಗ ಶ್ರೀನಿವಾಸನು,–ಕುಬೇರನೇ, ಬ್ರಹ್ಮನ ಒಂದು ದಿವಸದಲ್ಲಿ ನಾನು ಹತ್ತು ಅವತಾರಗಳನ್ನು ಧರಿಸುವೆನು; ಆ ಅವತಾರ ಸಮಯದಲ್ಲಿ ನಾನು ನನ್ನ ಮನೆಯಿಂದ ದ್ರವ್ಯವನ್ನು ತರುವದಿಲ್ಲ; ಮತ್ತು ಭೂಗತವಾದ ಧನವನ್ನು ನಾನು ಮನೆಗೆ ಒಯ್ಯುವದಿಲ್ಲ. ನಾನು ಯುಗಾನುಸಾರವಾಗಿ, ಕಾಲಾನುಸಾರವಾಗಿ, ದೇಶಾನುಸಾರವಾಗಿ, ವಯೋನುಸಾರವಾಗಿ ಅವತಾರ ಮಾಡಿ, ಲಕ್ಷ್ಮಿಯಿಂದ ಸಹಿತನಾಗಿ ಕ್ರೀಡಿಸುವೆನು; ಕುಬೇರನೇ, ನೀನು ಹೇಳಿದಂತೆ ಈ ಧನವನ್ನು ನನಗೆ ಕೊಡುವಲ್ಲಿ, ನೀನು ನಿಮಿತ್ತಮಾತ್ರನು. ಆದರೂ ಯುಗಾನುಸಾರಿಯಾದ ನನಗೆ ದೇಶಕಾಲಾನುಸಾರವಾಗಿ ದ್ರವ್ಯವನ್ನು ಕೊಡು, ಎಂದು ಕೇಳಿದನು. ಆಗ ಕುಬೇರನು– ಶ್ರೀನಿವಾಸನೇ, ಯುಗಾನುಸಾರವಾಗಿ ವರ್ತಿಸುವ ನಿನಗೆ, ಈ ಕಲಿಯುಗದಲ್ಲಿ ದ್ರವ್ಯವನ್ನು ಹಾಗೇ ಹ್ಯಾಗೆ ಕೊಡಲಿ ನೀನೇ ಹೇಳು. ಈ ಲೋಕದಲ್ಲಿ ದರಿದ್ರರು ಧನಿಕರಿಗೆ ಪತ್ರ ಬರೆದು ಕೊಟ್ಟು ಸಾಲವನ್ನು ಒಯ್ಯುತ್ತಿರುವ ಹಾಗೆ, ನೀನೂ

ನನಗೆ ಪತ್ರವನ್ನು ಬರೆದು ಕೊಟ್ಟರೆ, ದ್ರವ್ಯವನ್ನು ಕೊಡುತ್ತೇನೆಂದು ಹೇಳಿದನು. ಆ ಮಾತಿಗೆ ಒಪ್ಪಿ, ಬ್ರಹ್ಮನು ಹೇಳಿದ ಪ್ರಕಾರ ಶ್ರೀನಿವಾಸನು ಪತ್ರವನ್ನು ಬರೆದುಕೊಟ್ಟನು. ಅದು ಹ್ಯಾಗಂದರೆ—ಧನವಂತನಾದ ಕುಬೇರನಿಗೆ, ಋಣವಂತನಾದ ಶ್ರೀನಿವಾಸನು ಈ ವಿಳಂಬಿ ಸಂ॥ ವೈಶಾಖ ಶುದ್ಧ ಸಪ್ತಮಿಯಲ್ಲಿ ಬರಕೊಟ್ಟದ್ದೇನಂದರೆ—ನನ್ನ ಆತ್ಮಕಾರ್ಯವಾದ ವಿವಾಹಕ್ಕಾಗಿ ನಿನ್ನ ಕಡೆಯಿಂದ ಹದಿನಾಲ್ಕು ಲಕ್ಷ ರಾಮಟಂಕಿಯ ವರಹಗಳನ್ನು ತೆಗೆದುಕೊಂಡಿದ್ದೇನೆ; ಇವತ್ತಿನಿಂದ ಇನ್ನು ಒಂದು ಸಾವಿರ ವರುಷಗಳ ಮೇಲೆ, ಆದ ಬಡ್ಡಿ ಸಹ ದ್ರವ್ಯವನ್ನು ಕೊಡುತ್ತೇನೆ. ಇದಕ್ಕೆ ಸಾಕ್ಷಿ ಬ್ರಹ್ಮನೂ, ಶಂಕರನೂ, ಅಶ್ವತ್ಥ ವೃಕ್ಷರಾಜನೂ ಆಗಿರುವರು, ಎಂದು ಋಣಪತ್ರವನ್ನು ಬರೆದು, ಕುಬೇರನ ಕೈಯಲ್ಲಿ ಕೊಟ್ಟು,—ಕುಬೇರನೇ ಪತ್ರದಲ್ಲಿ ಬರೆದ ಪ್ರಕಾರ ದ್ರವ್ಯವನ್ನು ಕೊಡು, ಎಂದು ಹೇಳಿದನು. ಆ ಪ್ರಕಾರವಾಗಿ ಕುಬೇರನು ದ್ರವ್ಯವನ್ನು ಕೊಟ್ಟನು. ಅದನ್ನು ಕಂಡು ಶ್ರೀನಿವಾಸನು ಸಂತೋಷದಿಂದ—ಧನಾಧಿಪನೇ, ಈ ದ್ರವ್ಯವನ್ನು ನಿನ್ನ ಸ್ವಾಧೀನದಲ್ಲಿಯೇ ಇಟ್ಟುಕೊಂಡು, ಲಗ್ನಕ್ಕೆಬೇಕಾದ ಸಾಹಿತ್ಯಗಳನ್ನು ಸಿದ್ಧಪಡಿಸು; ಪ್ರಸ್ತುಕ್ಕೆ ಮೂಲವಾದ ಅಕ್ಕಿ, ಉದ್ದು, ತೊಗರಿ, ಹೆಸರು, ಗೋಧಿಯ ಹಿಟ್ಟು, ಬೆಲ್ಲ, ಎಣ್ಣೆ, ಸಕ್ಕರೆ, ತುಪ್ಪ ಮೊದಲಾದ ಪದಾರ್ಥಗಳನ್ನು ತರಿಸು; ಮತ್ತು ಅಮೂಲ್ಯವುಳ್ಳ ಅರಿಷಣ ಬಣ್ಣದ ವಸ್ತ್ರಗಳು, ದೇವತೆಗಳಿಗೂ, ದೇವತಾಸ್ತ್ರೀಯರಿಗೂ ಬೇಕಾದ ಉತ್ತಮವಾದ ಉತ್ತರೀಯ ವಸ್ತ್ರಗಳು, ದುಕೂಲಗಳು, ಎಲೆ, ಅಡಿಕೆ, ಯಾಲಕ್ಕಿ, ಲವಂಗ, ಕರ್ಪೂರ, ಕಸ್ತೂರಿ ಮೊದಲಾದ ಸಣ್ಣ ಸಣ್ಣ ಪದಾರ್ಥಗಳು ಇವನ್ನೆಲ್ಲ ಮರೆಯದೆ ಒದಗಿಸು, ಮತ್ತು ಕನ್ಯಾರ್ಥವಾಗಿ ಮಾಂಗಲ್ಯವನ್ನೂ, ಮಡಿಯುಂಗರವನ್ನೂ, ನನ್ನದೆಸೆಯಿಂದ ಉಂಗುರಗಳನ್ನೂ ಮಾಡಿಸು, ಎಂದು ಹೇಳಿದನು. ಆತನ ಅಪ್ಪಣೆಯ ಮೇರೆಗೆ ಕುಬೇರನು ಆ ಕ್ಷಣದಲ್ಲಿಯೇ ಯಾವತ್ತೂ ಪದಾರ್ಥಗಳನ್ನು ಸಿದ್ಧಪಡಿಸಿದನು.

ಆಗ ಕುಬೇರನು ಯಾವತ್ತು ಪದಾರ್ಥಗಳನ್ನು ಮಾಡಿದೆನೆಂದು ಶ್ರೀನಿವಾಸನಿಗೆ ಹೇಳಿದನು. ಹಾಗು ಇನ್ನುಮೇಲೆ ಅಡಿಗೆಯನ್ನು ಮಾಡುವದಕ್ಕಾಗಿ ಅಗ್ನಿಗೆ ಆಜ್ಞೆಯನ್ನು ಮಾಡೆಂದು ಅರಿಕೆಮಾಡಿದನು. ಆಗ ಶ್ರೀನಿವಾಸನು ಅಗ್ನಿಯನ್ನು ಕರೆದು—"ಹವ್ಯವಾಹನನೇ, ಸರ್ವಸಾಹಿತ್ಯವು ಸಿದ್ಧವಾಗಿದೆ, ಬೇಗನೆ ಸ್ವಾಹಾದೇವಿ-

ಯಿಂದ ಕೂಡಿ, ಭಕ್ಷ್ಯ, ಅನ್ನ, ಶಾಕ ಮೊದಲಾದವುಗಳನ್ನು ಮಾಡು " ಎಂದು ಆಜ್ಞಾಪಿಸಿದನು. ಅಗ್ನಿಯು—"ಪುರುಷೋತ್ತಮನೇ, ನಿನ್ನ ಆಜ್ಞೆಯಂತೆ ಪಾಕವನ್ನು ಮಾಡುವೆನು, ಆದರೆ ಪಾತ್ರೆಗಳು ಒಂದಾದರೂ ಇಲ್ಲ. ಇದಕ್ಕೆ ಹ್ಯಾಗೆ ಮಾಡಬೇಕು ? " ಎಂದು ಕೇಳಲು, ಶ್ರೀನಿವಾಸನು ಅಗ್ನಿಯ ಮಾತುಗಳನ್ನು ಕೇಳಿ ಸಿಟ್ಟಿಗೆದ್ದು.—"ಅಗ್ನಿಯೇ, ನಿಮ್ಮ ಮನೆಯಲ್ಲಿಯೇ ಕಾರ್ಯಗಳಾಗುವದಿದ್ದರೆ, ನಿಮ್ಮಲ್ಲಿ ಇಲ್ಲದಿದ್ದರೂ ಮತ್ತೆ ಎಲ್ಲಿಯಾದರೂ ತಂದು ಮಾಡುತ್ತಿರುವ ಹಾಗೆ ನನ್ನಲ್ಲಿ ಯಾಕೆ ಮಾಡಬಾರದು ? ಇರಲಿ! ತನ್ನ ಕೆಲಸವನ್ನು ತಾನೇ ಮಾಡಿಕೊಳ್ಳಲಿಕ್ಕೆ ಬೇಕು. ಅದರಂತೆ ನನಗೆ ಅಡಿಗೆಯನ್ನು ಮಾಡುವದಕ್ಕಾಗಿ ತಾನೇ ಭಾಂಡಗಳನ್ನು ತಂದುಕೊಡುತ್ತೇನೆ; ಸ್ವಾಮಿಪುಷ್ಕರಣಿ ಎಂಬ ಪಾತ್ರೆಯಲ್ಲಿ ಅನ್ನವನ್ನೂ, ಪಾಪವಿನಾಶಿನೀ ತೀರ್ಥದಲ್ಲಿ ತೊವ್ವೆಯನ್ನೂ, ವಿಯದ್ಗಂಗೆಯಲ್ಲಿ ಪಾಯಸವನ್ನೂ, ದೇವತೀರ್ಥದಲ್ಲಿ ಶಾಕವನ್ನೂ ಮಾಡು. ತುಂಬುರತೀರ್ಥದಲ್ಲಿ ಬೆಣ್ಣೆಯನ್ನು ಕಾಸು. ಕುಮಾರಧಾರಿಕಾ ತೀರ್ಥದಲ್ಲಿ ನಾನಾ ಪ್ರಕಾರವಾದ ಭಕ್ಷ್ಯಗಳನ್ನೂ. ಪಾಂಡುತೀರ್ಥದಲ್ಲಿ ಸಾರನ್ನೂ, ಅನ್ಯ ತೀರ್ಥಗಳಲ್ಲಿ ಕಂದಮೂಲಗಳಿಂದ ವ್ಯಂಜನ ಪದಾರ್ಥಗಳನ್ನೂ ಮಾಡು, ಎದು ಹೇಳಿದನು. ಶ್ರೀನಿವಾಸನ ಈ ಪ್ರಕಾರವಾದ ಯುಕ್ತಿಯನ್ನು ಕೇಳಿ ಸರ್ವಋಷಿಗಳು ಅವನನ್ನು ಕೊಂಡಾಡಿದರು.

ಕೂಡಲೆ ಅಗ್ನಿಯು ಶ್ರೀನಿವಾಸನ ಆಜ್ಞೆಯ ಪ್ರಕಾರವಾಗಿ ಸರ್ವಪಾಕವನ್ನು ಸಿದ್ಧಮಾಡಿದನು. ಎಲೈ ಜನಕರಾಜನೇ, ಯುಗಾನುಸಾರವಾಗಿ ಅವತಾರ ಮಾಡುವ ವೈಕುಂಠಪತಿಯಾದ ಶ್ರೀನಿವಾಸನ ವಿಚಿತ್ರಕಾರ್ಯಗಳು ಆಶ್ಚರ್ಯಕರವಾದವುಗಳು. ಅವನ ಕಾರ್ಯಗಳು ಚಿಂತಿಸಲಶಕ್ಯವಾದವುಗಳೂ, ವಾಚಾಮಗೋಚರವಾದವುಗಳೂ ಆಗಿರುವವು ಇರಲಿ. ಆಗ ಅಗ್ನಿಯು ಬಂದು—ಸ್ವಾಮಿ, ನಿನ್ನ ಅನುಗ್ರಹದಿಂದ ಪಾಕವು ಸಿದ್ಧವಾಗಿರುವದು; ಇನ್ನುಮೇಲೆ ಬ್ರಾಹ್ಮಣರನ್ನೂ, ಮುನಿಗಳನ್ನೂ, ದೇವತೆಗಳನ್ನೂ ಭೋಜನಕ್ಕೆ ಕರೆಯಿಸು, ಎನಲು, ಕೂಡಲೆ ಶ್ರೀನಿವಾಸನು ಸರ್ವರನ್ನು ಕರೆಯುವದಕ್ಕಾಗಿ ಷಣ್ಮುಖನನ್ನು ಕಳಿಸಿದನು. ಆತನು ಹೋಗಿ ಶೀಘ್ರವಾಗಿ ಕಶ್ಯಪ, ಅತ್ರಿ, ಭರದ್ವಾಜ ಮೊದಲಾದ ಋಷಿಗಳನ್ನೂ, ದೇವತೆಗಳು ಮೊದಲಾದವರೆಲ್ಲರನ್ನೂ ಕರೆದುಕೊಂಡು ಬಂದನು.

ಆಗ ಶಂಕರನು ಅವರವರನ್ನು ಪ್ರತ್ಯೇಕ ಪ್ರತ್ಯೇಕವಾಗಿಯೂ, ಅವರವರ ತಾರತಮ್ಯಾನುಸಾರವಾಗಿಯೂ ಕೂಡ್ರಿಸಿ ಪಾತ್ರಗಳನ್ನು ಹಾಕಿದನು, ಬ್ರಾಹ್ಮಣರು ಪಾಂಡುತೀರ್ಥದ ಆರಂಭದಿಂದ ಶ್ರೀಶೈಲಪರ್ವತದವರೆಗೆ ಕುಳಿತರು. ಇದರಂತೆ ದೇವತೆಗಳೆಲ್ಲರೂ ತಮ್ಮ ತಮ್ಮ ಪಾತ್ರೆಗಳಮೇಲೆ ಕುಳಿತಿರಲು, ಶ್ರೀನಿವಾಸನು ಬ್ರಹ್ಮನಿಗೆ—ಚತುರ್ಮುಖನೇ, ದೇವರಿಗೆ ಸಮರ್ಪಿತವಾಗದೆಯಿದ್ದ ಅನ್ನವನ್ನು ಬ್ರಾಹ್ಮಣರಿಗೆ ಕೊಡತಕ್ಕದ್ದಲ್ಲವೆಂದು ಹೇಳಲು, ಬ್ರಹ್ಮನು—ಗೋವಿಂದನೇ, ನೀನೇ ಸರ್ವಜ್ಞನು, ಸರ್ವಭೋಕ್ತೃವು, ಸರ್ವಲೋಕೇಶ್ವರನು; ಹೀಗಿದ್ದು ನಿನಗಿಂತ ಅಧಿಕನು ಯಾವನಿರುವನು ? ಆದರೂ ಯಾವ ದೇವರಿಗೆ ಈ ಅನ್ನವನ್ನು ಸಮರ್ಪಿಸತಕ್ಕದ್ದೆಂಬದನ್ನು ನೀನು ಹೇಳಿದರೆ ಅದರಂತೆ ಮಾಡುವೆನು, ಎಂದನು. ಬ್ರಹ್ಮನ ಮಾತುಗಳನ್ನು ಕೇಳಿ, ಮುಗುಳುನಗೆಯಿಂದ ಯುಕ್ತನಾಗಿ ಶ್ರೀನಿವಾಸನು—ಬ್ರಹ್ಮನೇ, ಅಹೋಬಲ ನೃಸಿಂಹನ ಪೂಜೆಯನ್ನು ಮಾಡಿ ನೈವೇದ್ಯ ಸಮರ್ಪಣವನ್ನು ಮಾಡು, ಎನಲು, ಬ್ರಹ್ಮನು ಅದರಂತೆ ನೈವೇದ್ಯವನ್ನೂ, ವೈಶ್ವದೇವವನ್ನೂ, ದೇವತೆಗಳ ಪೂಜೆಯನ್ನೂ, ಬ್ರಾಹ್ಮಣರ ಪೂಜೆಯನ್ನೂ ಮಾಡಿದನು. ಆ ಮೇಲೆ ಶ್ರೀನಿವಾಸನು ನವಗ್ರಹಗಳ ಆರಾಧನೆಯನ್ನು ಮಾಡಿ, ಅವರಿಗೆ ನಮಸ್ಕಾರವನ್ನು ಮಾಡಿದನು.

ಅನಂತರದಲ್ಲಿ ಅಷ್ಟದಿಕ್ಪಾಲಕರು ಲವಣ ಮೊದಲು ಮಾಡಿಕೊಂಡು ಘೃತಪರಿಯಂತವಾಗಿ ಪಾತ್ರೆಗಳಲ್ಲಿ ಬಡಿಸಿದರು. ಆ ಸಮಯದಲ್ಲಿ ಶ್ರೀನಿವಾಸನು ತನ್ನ ಕೈಯಲ್ಲಿ ಕುಸುಮಾಕ್ಷತೆಗಳನ್ನು ತೆಗೆದುಕೊಂಡು,—ಸಮಸ್ತ ಪ್ರಾಣಿ ಸಮೂಹವೇ ಅಂಗಗಳಾಗಿರುವ ನಾರಾಯಣನೊಬ್ಬನೇ ವಿರಾಟ್‌ರೂಪಿಯಾಗಿರುವನು. ಮತ್ತು ಪ್ರತ್ಯೇಕವಾಗಿ ಪ್ರಾಣಿಗಳು ಅನೇಕ ಸಂಖ್ಯಾಕವಾಗಿವೆ, ಪ್ರಳಯಕಾಲದಲ್ಲಿ ವಿಶ್ವಭುಕ್, ಆಗಿಯೂ, ನಾಶರಹಿತನಾಗಿಯೂ ಇರುವ ನಾರಾಯಣನು ತ್ರಿಲೋಕಗಳನ್ನು ವ್ಯಾಪಿಸಿಕೊಂಡು ಆ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿಯೂ ಇದ್ದುಕೊಂಡು ಭೋಜನವನ್ನು ಮಾಡುವನು" ಎಂಬ ಈ ಅರ್ಥದ ಮಂತ್ರದಿಂದ ಅಹೋಬಲ ನೃಸಿಂಹನಿಗೆ ಕೃಷ್ಣಾರ್ಪಣವನ್ನು ಮಾಡಿ ಸರ್ವರಿಗೂ ಭೋಜನ ಮಾಡಿರೆಂದು ಹೇಳಿದನು. ಆಗ ಸರ್ವರು ಭೋಜನ ಮಾಡುತ್ತಿರಲು, ಶ್ರೀನಿವಾಸನು ಕೈಜೋಡಿಸಿ,—"ತಪೋಧನರೇ, ಜ್ಞಾನಪೂರ್ಣರಾದ ನಿಮಗೆ

ಈ ಅನ್ನದಿಂದ ಏನು ಪೂರ್ಣತೆಯಾದೀತು! ಆದರೂ ದರಿದ್ರನಾದ ನಾನು ಕೊಡುವ ಅನ್ನೋದಕವು ಇದೇ ಮಹತ್ವವಾದದ್ದೆಂದು ತಿಳಿದು ನನ್ನ ಮೇಲೆ ಕೃಪೆಯನ್ನು ಮಾಡಿ, ಸಾವಕಾಶವಾಗಿ ಭೋಜನವನ್ನು ಮಾಡಬೇಕು" ಎಂದು ಪ್ರಾರ್ಥನೆಯನ್ನು ಮಾಡಿದನು. ಅದಕ್ಕೆ ಬ್ರಾಹ್ಮಣರು—ಶ್ರೀನಿವಾಸನೇ, ನಿನ್ನ ಅನ್ನವು ಅಮೃತಕ್ಕೆ ಸಮಾನವಾದದ್ದಾಗಿಯೂ, ಮುಕ್ತಿಗೆ ಸಾಧನವಾಗಿಯೂ ಇರುವದು. ಇಂಥ ನಿನ್ನ ಅನ್ನವನ್ನು ಉಂಡು ಪಾಪಿಷ್ಠರಾದ ನಾವು, ಈ ಕಲಿಯುಗದಲ್ಲಿ ಕೃತಾರ್ಥರಾದೆವು, ಎಂದು ಶ್ರೀನಿವಾಸನನ್ನು ಹೊಗಳಿ, ಸಂತೋಷದಿಂದ ಭೋಜನವನ್ನು ಮಾಡಿದರು. ಊಟವಾದಮೇಲೆ ಶ್ರೀನಿವಾಸನು ಬ್ರಾಹ್ಮಣರಿಗೆ ಯೋಗ್ಯತಾನುಸಾರವಾಗಿ ತಾಂಬೂಲ ದಕ್ಷಿಣೆಗಳನ್ನು ಕೊಟ್ಟನು;—ದ್ವಿಜಶ್ರೇಷ್ಠರಿಗೆ ಒಂದು ನಿಷ್ಕವನ್ನೂ, ಬ್ರಹ್ಮವಾದಿಗಳಿಗೆ ಅರ್ಧನಿಷ್ಕವನ್ನೂ, ಬ್ರಹ್ಮಚಾರಿಗಳಿಗೆ ನಿಷ್ಕದ ನಾಲ್ಕನೆಯ ಭಾಗವನ್ನೂ, ಉಳಿದವರಿಗೆ ಅವರವರ ಯೋಗ್ಯತಾನುಸಾರವಾಗಿಯೂ ದಕ್ಷಿಣೆಯನ್ನು ಕೊಟ್ಟನು.

ಈ ಪ್ರಕಾರ ಬ್ರಾಹ್ಮಣರನ್ನು ತೃಪ್ತಿಪಡಿಸಿದನಂತರ ಶ್ರೀನಿವಾಸನು ತನ್ನ ಪುತ್ರಪೌತ್ರರು ಭಾರ್ಯೆಯು, ಬಂಧುಗಳು, ಅಗ್ನಿಯೇ ಮೊದಲಾದ ಲೋಕಪಾಲಕರು, ಗರುಡಶೇಷರು, ಇವರೆಲ್ಲರೊಡನೆ ಭೋಜನಮಾಡಿದನು, ಅಷ್ಟರಲ್ಲಿ ಹೊತ್ತು ಮುಳುಗಿತು; ಆಗ ರಾತ್ರಿಯಲ್ಲಿ ಶ್ರೀನಿವಾಸನು ಲಕ್ಷ್ಮೀಸಮೇತನಾಗಿ ಪರ್ಯಂಕದಲ್ಲಿ ಶಯನಮಾಡಿದನು. ಪಾಪರಹಿತನಾದ ಶ್ರೀನಿವಾಸನು ತಾನು ನಿದ್ರಾರಹಿತನಾದರೂ, ಪ್ರಾಕೃತ ಪುರುಷನಂತೆ ಕ್ರೀಡಿಸುವವನಾದನು. ಆವೊತ್ತಿನ ಸಪ್ತಮಿಯ ದಿವಸ ದೇವತೆಗಳೂ, ಋಷಿಗಳೂ ಸಂಭ್ರಮದಿಂದ ಯುಕ್ತರಾಗಿ ರಾತ್ರಿಯನ್ನು ಕಳೆದರು. ಬ್ರಹ್ಮಾದಿದೇವತೆಗಳೂ, ಸರ್ವಋಷಿಗಳೂ ಕಂದರಗಳಲ್ಲಿಯೂ ವೃಕ್ಷಗಳಲ್ಲಿಯೂ ಗುಹೆಗಳಲ್ಲಿಯೂ ಶಯನಮಾಡಿದರು.

ಬೆಳಗಾಯಿತು; ಆಗ ಶ್ರೀನಿವಾಸನು ಎದ್ದು ಗರುಡನನ್ನು ಕರೆದು—ಗರುಡನೇ, ಬೇಗನೆ ಹೋಗಿ, ಬ್ರಹ್ಮನಿಗೆ ತನ್ನ ಸರ್ವಸೈನ್ಯದಿಂದ ಯುಕ್ತನಾಗಿ ಹೊರಡುವದಕ್ಕೆ ಸಿದ್ಧನಾಗೆಂದು ಹೇಳು, ಎನಲು, ಗರುಡನು ಶೀಘ್ರದಿಂದ ಬ್ರಹ್ಮನಿದ್ದಲ್ಲಿಗೆ ಹೋಗಿ,—ಬ್ರಹ್ಮನೇ, ಏಳು, ವಸ್ತ್ರಾಲಂಕಾರಗಳಿಂದ ಭೂಷಿತನಾಗಿ ನಿನ್ನ ವಾಹನವಾದ ಹಂಸವನ್ನು ಆರೋಹಣಮಾಡಿ ಹೊರಡಲುದ್ಯುಕ್ತ

ನಾಗು, ಶ್ರೇಷ್ಠವಾದ ವಾದ್ಯಗಳ ಧ್ವನಿಯು ಮಾಡಲ್ಪಡಲಿ, ನಾನಾವಿಧವಾದ ವಾಹನಗಳೂ, ಆಂದೋಲನಗಳೂ, ರಥಗಳೂ ಸಿದ್ಧವಾಗಲಿ, ಎಂದು ಹೇಳಿದನು. ಅವನ ಮಾತುಗಳನ್ನು ಕೇಳಿ, ಬ್ರಹ್ಮನು ತನ್ನ ಚತುರಂಗಬಲವನ್ನು ಶೃಂಗರಿಸಿ, ಆ ಸೈನ್ಯದೊಂದಿಗೆ ಶ್ರೀನಿವಾಸನ ಸಮೀಪಕ್ಕೆ ಬಂದು ನಿಲ್ಲಲು, ಶ್ರೀನಿವಾಸನು— ಪುತ್ರನೇ, ಇನ್ನು ಆಲಸ್ಯಮಾಡುವದೇಕೆ ? ಬೇಗನೆ ಆಕಾಶರಾಜನ ಪಟ್ಟಣಕ್ಕೆ ಸಾಗಬೇಕು, ಎಂದು ಹೇಳಲು, ಬ್ರಹ್ಮನು—ತಾತನೇ, ನನ್ನ ಸೈನ್ಯವು ಶಸ್ತ್ರಾಸ್ತ್ರ ಗಳನ್ನು ಧರಿಸಿ ಸಿದ್ಧವಾಗಿದೆ, ನೀನು ಏಳು, ಗರುಡನನ್ನು ಆರೋಹಣಮಾಡು, ಎನಲು, ಶ್ರೀನಿವಾಸನು ತಾನು ಗರುಡನನ್ನು ಹತ್ತಿ, ಮುಂದೆ ಬ್ರಹ್ಮನನ್ನೂ, ಬಲಭಾಗದಲ್ಲಿ ರುದ್ರನನ್ನೂ, ಎಡಭಾಗದಲ್ಲಿ ವಾಯುವನ್ನೂ, ಹಿಂಭಾಗದಲ್ಲಿ ಷಣ್ಮುಖನನ್ನೂ ಮಾಡಿಕೊಂಡು ಬಂಗಾರದ ರಥದಲ್ಲಿ ಲಕ್ಷ್ಮಿಯನ್ನು ಕೂಡ್ರಿಸಿ, ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ ವಿಮಾನದಲ್ಲಿ ತನ್ನ ತಾಯಿಯಾದ ಬಕುಲಾದೇವಿಯನ್ನು ಆರೋಹಣ ಮಾಡಿಸಿ, ಸರ್ವರಿಂದ ಸಹಿತನಾಗಿ ಸಂಭ್ರಮ ದಿಂದ ತನ್ನ ಲಗ್ನಕ್ಕೆ ಆಕಾಶರಾಜನ ಪಟ್ಟಣವನ್ನು ಕುರಿತು ಹೊರಟನು.

ಜನಕರಾಜನೇ, ಈ ಪ್ರಕಾರ ಹೋಗುತ್ತಿರಲಾಗಿ ಚಂದ್ರನಂತೆ ಕಾಂತಿ ಯುಳ್ಳ ಶ್ವೇತಛತ್ರವನ್ನು ಶೇಷನು ಶ್ರೀನಿವಾಸನ ಮೇಲೆ ಹಿಡಿದನು. ವಾಯುವು ಚಾಮರಗಳನ್ನು ಬೀಸಿದನು, ವಿಷ್ವಕ್ಸೇನನು ರತ್ನಮಯವಾದ ದಂಡದಿಂದ ಯುಕ್ತವಾದ ಬೀಸಣಿಕೆಯನ್ನು ಬೀಸುತ್ತಿದ್ದನು. ಆಗ ಸೈನ್ಯದಲ್ಲಿ ಭೇರಿ, ದುಂದು ಭಿಗಳ ಧ್ವನಿಯು ಮೊಳಗುತ್ತಿರಲು ನರ್ತಕರಿಂದಲೂ, ಗಾಯನದಿಂದಲೂ ಹಾಹಾ ಹೂಹೂ ಎಂಬ ಗಂಧರ್ವರಿಂದಲೂ ಯುಕ್ತನಾಗಿ ಸಕಲ ವಿಭವದಿಂದ ಶ್ರೀನಿವಾ ಸನು ಹೋಗುತ್ತಿದ್ದನು. ಆಗ ದೇವತೆಗಳೂ ಋಷಿಗಳೂ ದೈತ್ಯರೂ ಗಂಧರ್ವರೂ ತಪಸ್ವಿಗಳೂ ಒತ್ತಟ್ಟಿಗೆ ಕೂಡಿಕೊಂಡು ಹೋಗುತ್ತಿದ್ದರು. ಮತ್ತೊಂದು ಕಡೆಯಲ್ಲಿ ಮನುಷ್ಯರೂ ಸ್ತ್ರೀಯರೂ ವೃದ್ಧರೂ ಬಾಲಕರೂ ಕೂಡಿಕೊಂಡು ಹೋಗುತ್ತಿದ್ದರು.

ಹೀಗೆ ಹೋಗುತ್ತಿರುವಾಗ ಮಾರ್ಗದಲ್ಲಿ ಸ್ತ್ರೀಯರು ತಮ್ಮ ತಮ್ಮೊಳಗೆ ಜಗಳಾಡುತ್ತಿದ್ದರು. ದೇವತೆಗಳಿಗೂ—ದೇವ ಶಾಸ್ತ್ರೀಯರಿಗೂ, ಋಷಿಗಳಿಗೂ— ಋಷಿಸ್ತ್ರೀಯರಿಗೂ ಆಗಾಗ್ಗೆ ಕಲಹವು ನಡೆಯುತ್ತಿತ್ತು. ಬಡವರಾದವರು ತಮ್ಮ

ತಮ್ಮ ಸ್ತ್ರೀಯರನ್ನು ಕರೆದುಕೊಂಡು ಈ ಗದ್ದಲವನ್ನು ಬಿಟ್ಟು ಮತ್ತೊಂದು ಮಾರ್ಗದಿಂದ ನಡೆಯುತ್ತಿದ್ದರು. ಹೀಗೆ ಅಡವಿಯ ಬಿದ್ದು ಹೋಗುತ್ತಿರಲಾಗಿ ಒಬ್ಬ ಸ್ತ್ರೀಯು ತನ್ನ ಪತಿಯನ್ನು ಹಿಂಬಾಲಿಸಿ ತನ್ನ ಪುತ್ರನನ್ನು ಎತ್ತಿಕೊಂಡು ಗಂಟನ್ನು ತಲೆಯಮೇಲೆ ಹೊತ್ತುಕೊಂಡು ನಡೆಯುತ್ತಿದ್ದಳು. ಜನರ ದಟ್ಟಣೆ ಯಲ್ಲಿ ಮಾರ್ಗವು ಕಟ್ಟಾಗಲು, ರಥಗಳಲ್ಲಿ ಕುಳಿತಿರುವ ದೇವತೆಗಳು ಬಡ ಮನುಷ್ಯರನ್ನು ಬೆದರಿಸಿ ಮಾರ್ಗವನ್ನು ಬಿಡಿಸಿಕೊಂಡು ರಥಗಳನ್ನು ಓಡಿಸುತ್ತ ಹೋಗುತ್ತಿದ್ದರು. ಒಬ್ಬ ಸ್ತ್ರೀಯು ತನ್ನ ಭಾರವನ್ನು ಹೊತ್ತುಕೊಂಡು ಮೆಲ್ಲಗೆ ಹೋಗುವ ಕಾಲದಲ್ಲಿ ತನ್ನ ಪತಿಯನ್ನು ಅಗಲಿ ಅಡವಿಯಲ್ಲಿ ದಾರಿಯನ್ನು ಕಾಣದೆ-ಪತಿಯೇ, ಅಡವಿಯಲ್ಲಿ ನನ್ನನ್ನು ಬಿಟ್ಟು ಎಲ್ಲಿ ಹೋದೆ? ಎಂದು ಒದ ರುತ್ತ ಓಡಿಹೋಗುತ್ತಿರುವಾಗ, ತನ್ನ ಕೂಸಿನಿಂದ ಸಹಿತಳಾಗಿ ಭೂಮಿಯಲ್ಲಿ ಬಿದ್ದಳು. ಕೆಲವರು ಮಾರ್ಗವನ್ನು ನಡೆದು ನಡೆದುದಣಿದು ನರಳುತ್ತಿದ್ದರು, ಕೆಲವರು ನಗುತ್ತಿದ್ದರು, ಹಲವರು ನೀರಡಿಕೆಯಿಂದಲೂ ಹಸಿವೆಯಿಂದಲೂ ಬಳಲುತ್ತಿದ್ದರು, ಮತ್ತೆ ಕೆಲವರು ತಮ್ಮ ಬುತ್ತಿಯನ್ನು ಬಿಚ್ಚಿಕೊಂಡು ಭೋಜನ ಮಾಡುತ್ತಿದ್ದರು. ಒಬ್ಬನು ಬೀಳುತ್ತಿರಲು, ಮತ್ತೊಬ್ಬನು ಅವನನ್ನು ಎಬ್ಬಿಸು ತ್ತಿದ್ದನು. ಕೆಲವರು ಬಿದ್ದವರನ್ನು ಕಂಡು ನಗುತ್ತಿದ್ದರು.

ಹೀಗೆ ಶ್ರೀನಿವಾಸನು ತನ್ನ ಸಮೂಹದೊಂದಿಗೆ ವೇಂಕಟಾಚಲವನ್ನಿಳಿದು ಹೋಗುತ್ತಿರಲು, ಶೇಷಾಚಲದಿಂದ ಆಕಾಶರಾಜನ ಪಟ್ಟಣದವರೆಗೂ ಜನ ಸಮೂಹವು ರೇಜಗಟ್ಟಿತ್ತು. ಹೀಗೆ ಮಾರ್ಗಕ್ರಮಣಮಾಡುತ್ತ ಶ್ರೀನಿವಾಸನು ಪದ್ಮತೀರ್ಥದ ಸಮೀಪಕ್ಕೆ ಬಂದನು. ಅಲ್ಲಿ ವಾಸಿಸುತ್ತಿರುವ ಶುಕಮುನಿಗಳು, ದೇವತೆಗಳಿಂದಲೂ, ಗಂಧರ್ವ–ಸಿದ್ಧ–ಸಾಧ್ಯ–ಮರುದ್ಗಣಗಳಿಂದಲೂ ಸಹಿತ ರಾಗಿ ಗರುಡಾರೂಢನಾದ ಶ್ರೀನಿವಾಸನು ಬಂದದ್ದನ್ನು ಕಂಡು, ಬೇಗನೆ ಎದುರಿಗೆ ಹೋಗಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿ–"ಪುರುಷೋತ್ತಮನೇ, ಇವತ್ತಿನ ದಿವಸ ನಾನು ಮಾಡುವ ತಪಸ್ಸು ಸಫಲವಾಯಿತೆಂದು ತಿಳಿಯುತ್ತೇನೆ, ಯಾಕಂ ದರೆ, ವೇದಗೋಚರನೇ, ನೀನು ಬ್ರಹ್ಮರುದ್ರೇಂದ್ರಾದಿ ದೇವತೆಗಳಿಗೆ ಸಹ ತಿಳಿ ಯಲಶಕ್ಯನು. ಅಂಥ ನೀನು ಈವೊತ್ತಿನ ದಿವಸದಲ್ಲಿ ನಿನ್ನ ಪುತ್ರಮಿತ್ರರಿಂದಲೂ, ಅಖಿಳಲೋಕ ಪಾಲಕರಿಂದಲೂ, ಶೇಷಲಕ್ಷ್ಮಿಯರಿಂದಲೂ ಸಹಿತನಾಗಿ ಇರುವ

ದನ್ನು ಭಾಗ್ಯಶಾಲಿಯಾದ ನಾನು ನನ್ನ ಕಣ್ಣುಗಳಿಂದ ನೋಡಿದೆನು; ಅಂದಮೇಲೆ ನಾನೇ ಧನ್ಯನೆಂದು ತಿಳಿಯುತ್ತೇನೆ. ಇರಲಿ! ದೇವಾಧಿದೇವನೇ, ನನ್ನ ಒಂದು ವಿಜ್ಞಾಪನೆಯೇನಂದರೆ–"ನನ್ನ ಮೇಲೆ ಕೃಪೆಯನ್ನು ಮಾಡಿ, ನನ್ನಲ್ಲಿರುವ ಕಂದ, ಮೂಲ, ಫಲಗಳನ್ನು ಭಕ್ಷಣಮಾಡಿ ಹೋಗಬೇಕು" ಎಂದರು. ಇದನ್ನು ಕೇಳಿ. ಶ್ರೀನಿವಾಸನು–"ಶುಕ ಮುನಿಯೇ, ನಿನ್ನ ಮಾತು ಯೋಗ್ಯವೇ ಸರಿ. ನೀನು ಬಡವನೂ, ಬ್ರಹ್ಮಚಾರಿಯೂ, ದೃಢವ್ರತವುಳ್ಳವನೂ, ವೈರಾಗ್ಯ ವೃತ್ತಿಯನ್ನು ಧರಿಸಿದವನೂ ಆಗಿರುವೆ; ಆದರೆ ನಾವು ಸಾಂಸಾರಿಕರಾಗಿ ಬಹಳ ಜನರಿರುವೆವು. ಅಂದಮೇಲೆ ನಮ್ಮೆಲ್ಲರ ಆದರಾತಿಥ್ಯವನ್ನು ಮಾಡುವದು ನಿನ್ನಿಂದ ಹ್ಯಾಗಾದೀತು. ನಾವು ಹ್ಯಾಗೂ ಈವೊತ್ತಿನ ದಿವಸ ಆಕಾಶರಾಜನ ಪಟ್ಟಣಕ್ಕೆ ಮುಟ್ಟಿ, ಅಲ್ಲಿಯೇ ಭೋಜನಮಾಡಬೇಕೆಂದು ನಿಶ್ಚಯವನ್ನು ಮಾಡಿರುವೆವು, ಎಂದು ಹೇಳಲು ಶುಕಮುನಿಯು–"ಶ್ರೀನಿವಾಸನೇ, ಇಷ್ಟು ಜನರಿಗೆ ಭೋಜನಮಾಡಿಸುವದು ಹ್ಯಾಗಾದೀತೆಂದು ನೀನು ಸಂಶಯಪಡುತ್ತೀಯಾ? ಪುರುಷೋತ್ತಮನೇ. ನೀನೊಬ್ಬನು ಭೋಜನ ಮಾಡಿದರೆ ಸಕಲ ಜಗತ್ತೇ ತೃಪ್ತಿಯಾಗುವದು. ಅಂದಮೇಲೆ ಸಂಶಯವೇಕೆ? ಎಂದು ಹೇಳಿದನು. ಅಷ್ಟರಲ್ಲಿ ಬಕುಲಾವತಿಯು ಬಂದು–ಶ್ರೀನಿವಾಸನೇ, ಶುಕಾಚಾರ್ಯರ ಮಾತನ್ನು ಮೀರಬೇಡ. ನಿನ್ನ ವಿವಾಹ ನಿಶ್ಚಯದ ಕೆಲಸದಲ್ಲಿ ಇವರು ಆಕಾಶರಾಜನಿಗೆ ಬಹಳ ಪ್ರಕಾರವಾಗಿ ಹೇಳಿ, ಯತ್ನವನ್ನು ಮಾಡಿರುತ್ತಾರೆ; ಆದ್ದರಿಂದ ಅವರ ಮಾತನ್ನು ಮನ್ನಿಸು ಎನಲು, ತನ್ನ ತಾಯಿಯ ಮಾತನ್ನು ಕೇಳಿ. ಶ್ರೀನಿವಾಸನು–"ಶುಕಮುನಿಯೇ, ನಿನ್ನ ಮಾತಿನಿಂದ ನನಗೆ ಸಂತೋಷವಾಯಿತು; ಅಲ್ಪ ರಸವುಳ್ಳ ಫಲದಿಂದಲೂ, ಪ್ರಾಕೃತಾನ್ನದಿಂದಲೂ ನನಗೇನು ಪ್ರಯೋಜನವು? ಆದರೂ ನಿನ್ನ ಮಾತಿನಿಂದ ನಾನು ಭೋಜನವನ್ನು ಮಾಡುತ್ತೇನೆ" ಎಂದು ಹೇಳಿ, ಆ ಋಷಿಯನ್ನು ಸಮಾಧಾನಪಡಿಸಿ, ತಾನು ಗರುಡನಿಂದ ಇಳಿದು, ತನ್ನ ಪತ್ನೀಪುತ್ರಮೊದಲಾದವರಿಂದ ಸಹಿತನಾಗಿ ಶುಕಮುನಿಯ ಪರ್ಣಶಾಲೆಯನ್ನು ಪ್ರವೇಶಿಸಿದನು. ಆ ಮುನಿಯು ಒಂದು ಆಸನವನ್ನು ಹಾಕಿ ಶ್ರೀನಿವಾಸನನ್ನು ಕೂಡ್ರಿಸಿದನು. ಆ ಮೇಲೆ ಶುಕಮುನಿಯು ಪದ್ಮತೀರ್ಥದಲ್ಲಿ ಸ್ನಾನವನ್ನು ಮಾಡಿ, ಪರಮಭಕ್ತಿಯಿಂದ ಶ್ರೀನಿವಾಸನಿಗೋಸ್ಕರ ಅನ್ನವನ್ನು ಸಿದ್ಧಮಾಡಿದನು; ಅದು ಹ್ಯಾಗಂದರೆ–ಉತ್ತರಾಣಿಯ ಬೀಜಗಳನ್ನು ಮುಷ್ಟಿಯಿಂದ ಕುಟ್ಟಿ ಮಾಡಿದ ಅಕ್ಕಿಯಿಂದ ಉತ್ತಮ

ವಾದ ಅನ್ನವನ್ನು ಮಾಡಿದನು. ಬೃಹತೀ ಫಲದಿಂದಲೂ, ಹುಣಸೇ ಹಣ್ಣಿನ ರಸದಿಂದಲೂ ಯುಕ್ತವಾದ ಸಾರನ್ನು ಮಾಡಿದನು. "ಅಂತರ್ಯಾಮಿಯಾದ ಪರಮಾತ್ಮನ ಪೂಜೆಯನ್ನು ಮಾಡುವವನೇ ಬಾಹ್ಯಮೂರ್ತಿಯ ಪೂಜೆಯ ಫಲ ಹೊಂದುವನು, ಇದು ಸಾಧು ಸಮ್ಮತವಾದದ್ದು" ಎಂಬ ತತ್ವದ ಅರ್ಥವನ್ನು ಬಲ್ಲವನಾದ ಶುಕಮುನಿಯು, ಶ್ರೀನಿವಾಸನ ಪಾದಪ್ರಕ್ಷಾಲನವನ್ನು ಮಾಡಿ, ಪದ್ಮಪತ್ರಗಳನ್ನು ಹರವಿ, ಆ ಪತ್ರಗಳಲ್ಲಿ ರಸದಿಂದ ಯುಕ್ತವಾದ ಅನ್ನವನ್ನು ಹಾಕಿ, ಸಾಷ್ಟಾಂಗ ನಮಸ್ಕಾರವನ್ನು ಮಾಡಿ–"ಪೂರ್ಣ ಮನೋರಥವುಳ್ಳ ಶ್ರೀನಿವಾಸನೇ, ಭೋಜನವನ್ನು ಮಾಡು" ಎಂದು ಹೇಳಿಕೊಂಡನು. ಆಗ ಸರ್ವಭೋಕ್ತೃವಾದ ಶ್ರೀ ಹರಿಯು ಋಷಿಗಳಿಗೆ ಉಚಿತವಾದ ಆಹಾರವನ್ನು ಭೋಜನ ಮಾಡಿದನು, ಅನಂತರದಲ್ಲಿ ಲಕ್ಷ್ಮೀದೇವಿಯೂ ಬಕುಲಾವತಿಯೂ ಶ್ರೀನಿವಾಸನ ಅಜ್ಞೆಯಿಂದ ಅಮೃತಕ್ಕೆ ಸರಿಯಾದ ಆ ಋಷಿಯ ಅನ್ನವನ್ನು ಭೋಜನಮಾಡಿದರು.

ಹೀಗೆ ಶ್ರೀ ಲಕ್ಷ್ಮೀಪತಿಯಾದ ಶ್ರೀನಿವಾಸನು ಭೋಜನಮಾಡುತ್ತಿರಲು, ಸಮಸ್ತ ಋಷಿಗಳು ಕೋಪವುಳ್ಳವರಾಗಿ, ಶುಕಮುನಿಯನ್ನು ಭಯಪಡಿಸುತ್ತ ತಮ್ಮ ಆಸನಗಳಿಂದ ಎದ್ದು ಹೊರಗೆ ಬಂದರು. ಶಾಪಾನುಗ್ರಹಶಕ್ತರಾದ ಋಷಿಗಳು ರೋಷವಶರಾದದ್ದನ್ನು ನೋಡಿ ಅವರ ಅಭಿಪ್ರಾಯವನ್ನು ಬಲ್ಲವನಾದ ಶ್ರೀನಿವಾಸನು ಹೊರಗೆ ಬಂದು,–"ಸರ್ವರೂ ತೃಪ್ತರಾಗಲಿ" ಎಂದು ಫೂತ್ಕಾರವನ್ನು ಮಾಡಿದನು. ಶ್ರೀನಿವಾಸನ ಮುಖದಿಂದ ಉತ್ಪನ್ನವಾದ ಆ ಗಾಳಿಯಿಂದ, ಕಾಮಧೇನುವು ಮನೋಬಯಕೆಯನ್ನು ತೃಪ್ತಿಪಡಿಸಿದಂತೆ ಸರ್ವರೂ ತೃಪ್ತರಾದರು. ಆಗ ಎಲ್ಲ ಋಷಿಗಳು ಸಂತುಷ್ಟರಾಗಿ ಶುಕಮುನಿಯನ್ನು ಹೊಗಳಿದರು. ಈ ಪ್ರಕಾರ ಆಹೊತ್ತಿನ ಅಷ್ಟಮಿ ದಿವಸದಲ್ಲಿ ಎಲ್ಲರೂ ಶುಕಾಶ್ರಮದಲ್ಲಿಯೇ ವಾಸಮಾಡಿದರು.

ಶ್ರೀನಿವಾಸನು ನವಮಿ ಗುರುವಾರ ಪ್ರಾತಃಕಾಲದಲ್ಲಿ ಎದ್ದು, ತನ್ನ ವಾಹನವಾದ ಗರುಡನನ್ನು ಆರೋಹಣಮಾಡಿ, ಚತುರಂಗಬಲದಿಂದ ಯುಕ್ತನಾದ ಬ್ರಹ್ಮನನ್ನು ಮುಂದೆಮಾಡಿಕೊಂಡು ಹೊರಟನು. ಎಲ್ಲರೂ ಅವತ್ತಿನ ಸಂಜೆಯ ಸಮಯಕ್ಕೆ ಆಕಾಶರಾಜನ ಪಟ್ಟಣಕ್ಕೆ ಬಂದು ಮುಟ್ಟಿದರು. ಇತ್ತ ನಾರಾಯಣಪುರದಲ್ಲಿ ಬಂಧುಬಳಗದವರೊಡನೆ ಆಕಾಶರಾಜನು ಮಂಗಳ ಸ್ನಾನ

ವನ್ನು ಮಾಡಿ ಅಷ್ಟ ವರ್ಗವನ್ನು ಮಾಡಿಕೊಂಡಿದ್ದನು. ಶ್ರೀನಿವಾಸನು ಬಂದ ದ್ದನ್ನು ತಿಳಿದು; ಅತನು ತನ್ನ ಮಗಳಾದ ಪದ್ಮಾವತಿಯನ್ನು ಅನೇಕ ಅಲಂಕಾರ ಗಳಿಂದ ಅಲಂಕರಿಸಿ ಶೃಂಗರಿಸಿದ ಗಜದ ಮೇಲೆ ಆಕೆಯನ್ನು ಕೂಡ್ರಿಸಿಕೊಂಡು, ತನ್ನ ಚತುರಂಗಬಲವು, ಪುರೋಹಿತನು, ತಮ್ಮನಾದ ತೋಂಡಮಾನನು, ದೇವೇಂದ್ರನು ಇವರೆಲ್ಲರ ಕೂಡ ಹೊರಟು, ಬೀಗರನ್ನು ಎದುರುಗೊಂಡು ಕರೆ ತರುವದಕ್ಕೆ ಹೊರಟನು. ಹೀಗೆ ಸೈನ್ಯದ ಧ್ವಜ,-ಪತಾಕೆಗಳಿಂದಲೂ, ಚಾಮರ ಗಳಿಂದಲೂ, ವ್ಯಜನಗಳಿಂದಲೂ, ಭೇರಿ ದುಂದುಭಿ ವಾದಿತ್ರ ಮೊದಲಾದವುಗಳ ಧ್ವನಿಗಳಿಂದಲೂ, ನಟ ನರ್ತನ ಸೂತ ಮಾಗಧ ಬಂದಿ ಮೊದಲಾದವರ ಸ್ತೋತ್ರ ಧ್ವನಿಗಳಿಂದಲೂ ಯುಕ್ತನಾದ ಆಕಾಶರಾಜನು, ಆಕಾಶದಲ್ಲಿ ನಕ್ಷತ್ರಮಂಡಲ ಮಧ್ಯದಲ್ಲಿ ಚಂದ್ರನು ಶೋಭಿಸುವ ಹಾಗೆ ಶೋಭಿಸುತ್ತಿದ್ದನು. ಹೀಗೆ ರಾಜನು ಶ್ರೀನಿವಾಸನ ಸಮೀಪಕ್ಕೆ ಬರುತ್ತಿರಲು, ದೇವೇಂದ್ರನು ಅವನಿಗೆ-ಗರುಡಾ ರೂಢನೂ, ಶ್ವೇತಛತ್ರದಿಂದ ಯುಕ್ತನೂ, ತರುಣನೂ, ಸುಂದರನೂ, ಮನೋ ಹರವಾದ ಮುಖವುಳ್ಳವನೂ ಆಗಿರುವ ಶ್ರೀನಿವಾಸನನ್ನು ಆಕಾಶರಾಜನು ತೋರಿಸಿ ದನು. ಆತನನ್ನು ಕಂಡು ಸಂತೋಷಪಟ್ಟು ತನ್ನ ರಥದಿಂದಿಳಿದು, ಪದ್ಮಾವತಿ ಯನ್ನೂ, ಪುರೋಹಿತನೇ ಮೊದಲಾದವರೆಲ್ಲರನ್ನೂ ಮುಂದೆ ಮಾಡಿಕೊಂಡು ಹೊರಟು ತನ್ನ ಮನಸ್ಸಿನಲ್ಲಿ-"ನಾನೇ ಧನ್ಯನು, ನನ್ನ ಜನ್ಮವು ಸಫಲವಾಯಿತು" ಎಂದು ಅಂದುಕೊಳ್ಳುತ್ತಿದ್ದನು. ಅಷ್ಟರಲ್ಲಿ ನಾರದರು ಶ್ರೀನಿವಾಸನಿಗೆ-"ಪುರು ಷೋತ್ತಮನೇ, ಇವನೇ ನೋಡು ಆಕಾಶರಾಜನು; ದೀರ್ಘಬಾಹುಗಳುಳ್ಳವ ನಾಗಿಯೂ ಎಲ್ಲರ ಮಧ್ಯದಲ್ಲಿ ಕಾಣಿಸುವವನು" ಎಂದು ತೋರಿಸಲು, ಶ್ರೀನಿ ವಾಸನು ತನ್ನ ಶ್ವಶುರನನ್ನು ನೋಡಿ,- "ನಾರದರೇ, ನಾನು ಧನ್ಯನು, ಯಾಕಂ ದರೆ, ನಾನು ಮಾಡಿದ ಪುಣ್ಯದಿಂದ ಈ ಆಕಾಶರಾಜನು ಸಂಬಂಧಿಕನಾದನು" ಎಂದು ಹೇಳುತ್ತಿದ್ದನು. ಆಕಾಶರಾಜನು ದ್ವಾರತೋರಣವನ್ನು ದಾಟಿ ಬಂದು ಶ್ರೀನಿವಾಸನನ್ನು ವಸ್ತ್ರಾಭರಣಗಳಿಂದಲೂ, ಸುಗಂಧತೈಲದಿಂದಲೂ ಪೂಜಿಸಿದನು ಪದ್ಮಾವತಿಯು ಪರಮ ಸುಂದರನಾದ ತನ್ನ ಪತಿಯನ್ನು ನೋಡಿ, ಲಜ್ಜೆಯಿಂದ ಮೋಹಿತಳಾದಳು. ಇತ್ತ ಶ್ರೀನಿವಾಸನಾದರೂ ಪದ್ಮಾವತಿಯನ್ನು ನೋಡಿ ಮೋಹಿತನಾದನು. ಹೀಗೆ ಪರಸ್ಪರರು ಮುಂದಿಗೆ ತೋರಿದಹಾಗೆ ಕಡೆಗಣ್ಣ ನೋಟದಿಂದ ಒಬ್ಬರನ್ನೊಬ್ಬರು ನಡುನಡುವೆ ನೋಡುತ್ತಿದ್ದರು.

ಆ ಸಮಯದಲ್ಲಿ ಬೀಗ ಬೀಗರು ಪರಸ್ಪರವಾಗಿ ಆಲಿಂಗನವನ್ನು ಮಾಡುತ್ತ ಎದುರುಗೊಳ್ಳುವ ಉತ್ಸವವನ್ನು ತೀರಿಸಿಕೊಂಡು, ಸಮಸ್ತ ಸಮೂಹದೊಡನೆ ಶ್ರೀನಿವಾಸನನ್ನು ಕರೆದುಕೊಂಡು ಬರುತ್ತಿರುವಾಗ, ನಗರದ್ವಾರದಲ್ಲಿ ದುರ್ಗಾ ದೇವಿಯ ಗುಡಿಯು ಹತ್ತಿತು. ಆಗ ಶ್ರೀನಿವಾಸನು ಪದ್ಮಾವತಿಯಿಂದ ಸಹಿತ ನಾಗಿ ವಾಹನದಿಂದಿಳಿದುಬಂದು ದೇವಿಗೆ ನಮಸ್ಕರಿಸಿ—ದೇವಿಯೇ, ಪದ್ಮಾವತಿ ಯನ್ನು ನನಗೆ ಭಾರ್ಯೆಯನ್ನಾಗಿ ಮಾಡು, ಎಂದು ಬೇಡಿಕೊಂಡನು. ಇತ್ತ ಪದ್ಮಾವತಿಯು— ನನಗೆ ಶ್ರೀನಿವಾಸನನ್ನೇ ಪತಿಯನ್ನು ಮಾಡೆಂದು, ವರವನ್ನು ಬೇಡಿಕೊಂಡಳು. ಉಭಯತರು ತಮ್ಮ ತಮ್ಮ ವಾಹನಗಳನ್ನೇರಿಕೊಂಡು ಹೋಗುತ್ತಿರಲು, ಸಹಸ್ರಸಂಖ್ಯಾಕವಾದ ದೀವಟಿಗೆಗಳ ಬೆಳಕು ಪ್ರಜ್ವಲಿಸ ಹತ್ತಿತು. ಜನರು ವಧೂವರರ ಮೇಲೆ ಪುಷ್ಪಗಳನ್ನೂ, ಅಕ್ಷತೆಗಳನ್ನೂ ಎರಚು ತ್ತಿದ್ದರು. ಸೂತ, ಮಾಗಧ, ಬಂದಿಗಳು ಹೊಗಳುತ್ತಿದ್ದರು, ಬ್ರಾಹ್ಮಣರು ವೇದಘೋಷಗಳಿಂದ ಆಶೀರ್ವಾದಗಳನ್ನು ಮಾಡುತ್ತಿದ್ದರು. ವೀಣಾ, ವೇಣು, ಪಣವ, ಆನಕ ದುಂದುಭಿಗಳ ಧ್ವನಿಗಳು ಮೊಳಗುತ್ತಿದ್ದವು. ಗಾನದಲ್ಲಿ ನಿಪುಣ ರಾದ ಗಂಧರ್ವರು ಗಾನವನ್ನು ಮಾಡುತ್ತಿದ್ದರು. ಹೀಗೆ ಉತ್ಸವದಿಂದ ಆಕಾಶರಾಜನು ವಧೂವರರನ್ನು ಕರೆದುಕೊಂಡು ಬರುತ್ತಿದ್ದನು. ಆ ನಾರಾಯಣ ಪುರದಲ್ಲಿ ಬೀದಿಗಳನ್ನು ಕದಳೀ ಸ್ತಂಭಗಳಿಂದಲೂ, ಅಡಿಕೆಯ ಗೊಂಚಲು ಗಳಿಂದಲೂ, ಮಾವಿನತೋರಣಗಳಿಂದಲೂ ಅಲ್ಲಲ್ಲಿ ಅಲಂಕರಿಸಿದ್ದರು; ಕೆಲವೆಡೆ ಯಲ್ಲಿ ಮುತ್ತಿನ ಗೊಂಚಲುಗಳಿಂದಲೂ, ವಜ್ರ ವೈಡೂರ್ಯಗಳ ತೋರಣ ಗಳಿಂದಲೂ, ಕುಂಕುಮೋದಕಗಳಿಂದ ಪೂರ್ಣವಾದ ಬಂಗಾರದ ಪಾತ್ರೆ ಗಳಿಂದಲೂ ಅಲಂಕರಿಸಿದ್ದರು. ಹೀಗೆ ಶೃಂಗರಿಸಲ್ಪಟ್ಟ ರಾಜಬೀದಿಯಲ್ಲಿ ವಧೂ ವರರು ಬರುತ್ತಿರುವಾಗ ಸ್ತ್ರೀಯರು ನೀರಾಜನವನ್ನು ಅಲ್ಲಲ್ಲಿ ಬೆಳಗುತ್ತಿದ್ದರು. ಈ ಪ್ರಕಾರ ಶ್ರೀನಿವಾಸನು ಉತ್ಸವದಿಂದ ಬಂದು ತನಗಾಗಿ ಸಿದ್ಧಪಡಿಸಿದ್ದ ಮಂದಿರದಲ್ಲಿ ಪ್ರವೇಶಮಾಡಿದನು; ಮತ್ತು ಅವನ ಬಾಂಧವರೂ ಚತುರಂಗ ಬಲವೂ ಮೊದಲೇ ಸಿದ್ಧಮಾಡಿದ ಮಂದಿರಗಳಲ್ಲಿ ಇಳಿದುಕೊಂಡರು. ಅಷ್ಟರಲ್ಲಿ ಐದುಗಳಿಗೆ ರಾತ್ರಿಯಾಯಿತು. ಆಕಾಶರಾಜನು ತನ್ನ ಮನೆಗೆ ಹೋದನು.

ಆಕಾಶರಾಜನು ಮನೆಗೆ ಹೋದ ಮೇಲೆ ತೋಂಡಮಾನನು ಬಂದು ಶ್ರೀನಿವಾಸನ ದರ್ಶನವನ್ನು ತೆಗೆದುಕೊಂಡನು. ಆಗ ಹಸಿವೆಯಿಂದ ಪೀಡಿತನಾದ

ಶ್ರೀನಿವಾಸನು— ತೋಂಡಮಾನನೇ, ನಮ್ಮ ಸಮಸ್ತ ಜನರು, ನಾನು, ನನ್ನ ಪುತ್ರನಾದ ಬ್ರಹ್ಮನು, ತಾಯಿಯಾದ ಬಕುಲಾದೇವಿಯು, ನನ್ನ ಭಾರ್ಯೆಯಾದ ಲಕ್ಷ್ಮಿಯು ಇವರೆಲ್ಲರೂ ಕ್ಷುಧೆಯಿಂದ ಪೀಡಿತರಾಗಿರುವೆವು; ಆದ್ದರಿಂದ ಇಷ್ಟು ಮಂದಿಗೆ ಅನ್ನವನ್ನೂ ನಾನಾವಿಧವಾದ ಭಕ್ಷ್ಯಗಳನ್ನೂ ಕಳಿಸು. ಋಷಿಗಳಿಗಾಗಿ ಅಗ್ನಿಯಿಂದ ಪಾಕವನ್ನು ಮಾಡಿಸಿ ಭೋಜನವನ್ನು ಮಾಡಿಸು; ನನಗೋಸ್ಕರ ಉತ್ತಮವಾದ ಪಕ್ವಾನ್ನಗಳನ್ನು ಕಳಿಸು, ಎಂದು ಹೇಳಲು, ತೋಂಡಮಾನನು— ಶ್ರೀನಿವಾಸನೇ, ಈ ನಮ್ಮ ದೇಹಗಳೂ, ರಾಜ್ಯವೂ ಎಲ್ಲವೂ ನಿನ್ನವೇ ಇರುತ್ತವೆ; ಹೀಗಿದ್ದು ಲೌಕಿಕದೇಹಧಾರಿಯಾದ ನೀನು, ನಮ್ಮನ್ನು ಯಾಕೆ ಮೋಹಪಡಿಸುತ್ತೀ ! ಆದರೂ ನೀನು ಹೇಳಿದ ಪ್ರಕಾರ ಮಾಡುತ್ತೇನೆ, ಎಂದು ಹೇಳಿ ಮನೆಗೆ ಹೋಗಿ ಕ್ಷಣಮಾತ್ರದಲ್ಲಿ ಅಗ್ನಿಯ ಕೈಯಿಂದ ಪಾಕವನ್ನು ಮಾಡಿಸಿ. ಋಷಿಗಳಿಗೂ, ದೇವತೆಗಳಿಗೂ, ಬ್ರಾಹ್ಮಣರಿಗೂ ಭೋಜನವನ್ನು ಮಾಡಿಸಿ, ಶ್ರೀನಿವಾಸನ ಸಲುವಾಗಿ ಭಕ್ತಿಯಿಂದ ಬಹು ವಿಧವಾದ ಅನ್ನಗಳನ್ನೂ, ಭಕ್ಷ್ಯಗಳನ್ನೂ ತೋಂಡಮಾನನು ತಾನೇ ತಂದನು. ಹಾಗು ಶ್ರೀನಿವಾಸನಿಗೂ, ಲಕ್ಷ್ಮೀದೇವಿಗೂ, ಬ್ರಹ್ಮನಿಗೂ, ಬಕುಲಾವತಿಗೂ, ಗರುಡ–ಶೇಷರಿಗೂ ಸ್ವತಃ ಭೋಜನವನ್ನು ಮಾಡಿಸಿದನು. ಶ್ರೀನಿವಾಸನಿಗೆ ವಸ್ತ್ರಗಳನ್ನು ಕೊಟ್ಟು, ಅವನ ಅಪ್ಪಣೆಯನ್ನು ತೆಗೆದುಕೊಂಡು, ತನ್ನ ಮನೆಗೆ ಹೋದನು. ಆ ಮೇಲೆ ಶ್ರೀನಿವಾಸನು ತಾನು ದೋಷರಹಿತನಾದರೂ, ಸೌಖ್ಯದಿಂದ ಸುಖಾಸನದಲ್ಲಿ ಲಕ್ಷ್ಮಿಯಿಂದ ಸಹಿತನಾಗಿ ಶಯನಮಾಡಿದನು.

ಮರುದಿವಸ ಬೆಳಗಾಗಲು, ದಶಮೀ ಶುಕ್ರವಾರದಲ್ಲಿ ಶ್ರೀನಿವಾಸನು ಮಂಗಳಸ್ನಾನವನ್ನು ಮಾಡಿ ವಶಿಷ್ಠಮುನಿಗಳಿಗೆ— ಪುರೋಹಿತರೇ, ನಮ್ಮ ಮನೆಯಲ್ಲಿ ನಾನು, ಲಕ್ಷ್ಮಿಯು, ತಾಯಿಯಾದ ಬಕುಲಾವತಿಯು, ಪುರೋಹಿತರಾದ ನೀವು, ಬ್ರಹ್ಮನು, ಈ ಪ್ರಕಾರ ಐದುಮಂದಿ ಉಪವಾಸದಿಂದಿರಬೇಕು; ಇದರಂತೆ ಆಕಾಶರಾಜನ ಗೃಹದಲ್ಲಿ ರಾಜನು, ರಾಜಪತ್ನಿಯು, ಕನ್ನಿಕೆಯು, ತೋಂಡಮಾನನು, ಪುರೋಹಿತರು ಈ ಪ್ರಕಾರ ಐದು ಜನರು ಉಪವಾಸದಿಂದಿರಬೇಕು, ಎಂದು ಹೇಳಿ, ಕುಬೇರನಿಗೆ—ಧನಾಧಿಪನೇ, ನೀನು ಆಕಾಶರಾಜನಲ್ಲಿಗೆ ಹೋಗಿ ಯಾವತ್ತು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕೆಂದು ಹೇಳು, ಎನಲು, ಆಗ ಯಕ್ಷರಾಜನಾದ ಕುಬೇರನು, ಆಕಾಶರಾಜನಲ್ಲಿಗೆ ಹೋಗಿ—

ರಾಜನೇ, ರಾತ್ರಿಯಲ್ಲಿ ಹದಿಮೂರು ಗಳಿಗೆಯ ಮೇಲೆ ವಿವಾಹ ಮುಹೂರ್ತವಿರುವಕಾರಣ ಅಪರಾತ್ರಿಯಲ್ಲಿ ಬ್ರಾಹ್ಮಣರ ಭೋಜನವು ಶಾಸ್ತ್ರಸಮ್ಮತವಾಗುವದಿಲ್ಲ. ಆದಕಾರಣ ಲಗ್ನದ ಪೂರ್ವದಲ್ಲಿಯೇ ಭೋಜನವನ್ನು ಮಾಡಿಸತಕ್ಕದ್ದು, ಎಂದು ಹೇಳಿದನು. ಅದರಂತೆ ಆಕಾಶರಾಜನು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ, ತಾಂಬೂಲ ದಕ್ಷಿಣೆಗಳಿಂದ ಅವರನ್ನು ಸತ್ಕರಿಸಿದನು.

ರಾತ್ರಿಯಾಗಲು ಲಗ್ನಮುಹೂರ್ತವು ಸಮೀಪಕ್ಕೆ ಬಂದದ್ದನ್ನು ನೋಡಿ, ಆಕಾಶರಾಜನು ತನ್ನ ಸಮಸ್ತ ಚತುರಂಗಬಲವನ್ನೂ, ತನ್ನ ಪುತ್ರನನ್ನೂ, ತೋಂಡಮಾನನನ್ನೂ, ಪುರೋಹಿತರನ್ನೂ ಮುಂದೆಮಾಡಿಕೊಂಡು, ಬಂಧು-ಬಾಂಧವರಿಂದ ಯುಕ್ತನಾಗಿ, ಐರಾವತವೆಂಬ ದೇವೇಂದ್ರನ ಆನೆಯನ್ನು ಶೃಂಗರಿಸಿ, ದೇವೇಂದ್ರನಿಂದ ಕೂಡಿಕೊಂಡು ಜಾಮಾತನನ್ನು ಲಗ್ನಕ್ಕೆ ಕರೆಯುವದಕ್ಕೆ ಅವನ ಗೃಹಕ್ಕೆ ಬಂದನು.

ಆ ಗೃಹವನ್ನು ವಿಶ್ವಕರ್ಮನು ಅಯುತ ಸಂಖ್ಯಾಕವಾದ ಸ್ತಂಭಗಳಿಂದಲೂ ರತ್ನಗಳಿಂದಲೂ ನಿರ್ಮಿಸಿದ್ದನು. ಅದರಲ್ಲಿ ಶ್ರೀನಿವಾಸನಿಗೆ ಪ್ರಿಯಕರವಾಗುವಂತೆ ಸಭೆಯನ್ನೂ ಮಾಡಿದ್ದನು. ಆ ಸಭೆಯಲ್ಲಿ ಮಹಾಭಾಗ್ಯಶಾಲಿಗಳಾದ ದೇವತೆಗಳು ಅಲಂಕೃತರಾಗಿ ಕುಳಿತಿದ್ದರು. ವಿಶ್ವಾಮಿತ್ರ, ಭರದ್ವಾಜ, ವಶಿಷ್ಟ, ಗೌತಮ, ಭೃಗು, ಅತ್ರಿ, ಪುಲಸ್ತ್ಯ, ವಾಲ್ಮೀಕಿ, ವೈಖಾನಸ, ದುರ್ವಾಸ, ಮಾರ್ಕಂಡೇಯ, ಗಾಲವ, ದಧೀಚಿ, ಚ್ಯವನ, ಸನಕ, ಸನಂದನ ಮೊದಲಾದ ಋಷಿಗಳು ಪಾಪರಹಿತರಾಗಿಯೂ, ಜಟಾಮುಕುಟಗಳಿಂದ ಶೋಭಿತರಾಗಿಯೂ, ಪ್ರಕಾಶಿತವಾದ ಕೃಷ್ಣಾಜಿನವೆಂಬ ವಸ್ತ್ರಗಳನ್ನು ಧರಿಸಿದವರಾಗಿಯೂ ಕುಳಿತಿದ್ದರು. ಅವರೆಲ್ಲರ ಮುಂಭಾಗದಲ್ಲಿ ಕಶ್ಯಪನು ಕುಳಿತಿದ್ದನು. ಅವರ ಮಧ್ಯದಲ್ಲಿ ಶೋಭಿಸುತ್ತಿರುವ ರತ್ನಗಂಬಳಿಯ ಮೇಲೆ ಶ್ರೀನಿವಾಸನು ಕುಳಿತಿದ್ದನು. ಆತನ ಮುಂಭಾಗದಲ್ಲಿ ಪಿತಾಮಹನಾದ ಬ್ರಹ್ಮನು ಕೈಜೋಡಿಸಿಕೊಂಡು ನಿಂತಿದ್ದನು. ಆ ಸಮಯದಲ್ಲಿ ಆಕಾಶರಾಜನು ಪುರೋಹಿತನನ್ನು ಮುಂದೆ ಮಾಡಿಕೊಂಡು ಸಭಾದ್ವಾರದಿಂದ ಶ್ರೀನಿವಾಸನ ಸಮೀಪಕ್ಕೆ ಬರುತ್ತಿರಲು, ಆ ರಾಜನನ್ನು ಕಂಡು ಶ್ರೀನಿವಾಸನು ಎದ್ದುನಿಂತು, ಅವನನ್ನು ಅಪ್ಪಿಕೊಂಡು,—ರಾಜೇಂದ್ರನೇ, ನೀನು ಶ್ರೇಷ್ಠನೂ ವೃದ್ಧನೂ ಇದ್ದು, ಇಲ್ಲಿಯವರೆಗೆ ನನ್ನನ್ನು ಕರೆಯುವದಕ್ಕೆ ನೀನೇ ಯಾಕೆ ಬಂದೆ ? ನಿನ್ನ ಪುತ್ರನನ್ನು ಕಳಿಸತಕ್ಕದ್ದಿತ್ತು.

ಎಂದು ಸಮಾಧಾನಕರವಾದ ಮಾತುಗಳಿಂದ ಸಂತೋಷಪಡಿಸಿದನು. ಆಕಾಶ ರಾಜನು ಶ್ರೀನಿವಾಸನ ಮಾತುಗಳಿಗೆ ಆನಂದಪಟ್ಟು, ಪುರೋಹಿತರಿಗೆ— ಗುರುಗಳೇ, ಲಗ್ನಮುಹೂರ್ತವು ಸಮೀಪಿಸಿರುವದು, ವರಪೂಜೆಯನ್ನು ಶೀಘ್ರವಾಗಿ ಮಾಡಿಸಿರಿ, ಎನಲು, ವಶಿಷ್ಠರು ಧರಣೀದೇವಿಗೆ,—ರಾಜಪತ್ನಿಯೇ, ಅರುಂಧತಿಯನ್ನು ಮುಂದೆಮಾಡಿಕೊಂಡು, ನಿನ್ನ ಅಳಿಯನ ಪೂಜೆಯನ್ನು ಮಾಡು, ಎಂದರು. ಧರಣೀದೇವಿಯು ಸಂತೋಷದಿಂದ ಎದ್ದು ಶ್ರೀನಿವಾಸನ ಸುಂದರವಾದ ಮುಖಕಮಲವನ್ನು ನೋಡಿ, ಆನಂದಪರವಶಳಾಗಿ ನಾನು ಕೃತಾರ್ಥಳಾದೆನೆಂದು ಭಾವಿಸಿ, ಲಜ್ಜೆಯಿಂದ ಕೂಡಿದವಳಾಗಿ, ಸಚ್ಚಿದಾನಂದ ನಾದ ಶ್ರೀನಿವಾಸನನ್ನು ಪೂಜಿಸಿದಳು. ಆಗ ಅಲ್ಲಿರುವ ಸಮಸ್ತ ಸ್ತ್ರೀಯರೂ ಆಶ್ಚರ್ಯಪಟ್ಟು ಧರಣೀದೇವಿಗೆ—ಧರಣೀದೇವಿಯೇ, ನೀನು ಪೂರ್ವಜನ್ಮದಲ್ಲಿ ಏನು ಪುಣ್ಯವನ್ನು ಮಾಡಿದ್ದೆಯೋ! ಆ ಪುಣ್ಯಪ್ರಭಾವದಿಂದ ಸಾಕ್ಷಾತ್ ನಾರಾಯಣನ ಪೂಜೆಯನ್ನು ಮಾಡುತ್ತೀ! ಅಂದ ಮೇಲೆ ನಿನ್ನ ಪುಣ್ಯಕ್ಕೆ ಜೋಡೇ ಇಲ್ಲವೆಂದು ಹೊಗಳಿದರು. ಆಗ ಧರಣೀದೇವಿಯು ತನ್ನ ಅಳಿಯನಿಗೆ ಸುಗಂಧದ ಚಂದನವನ್ನೂ, ತೈಲಗಳನ್ನೂ ಹಚ್ಚಿ, ರತ್ನಖಚಿತವಾದ ಮುತ್ತಿನ ಮಾಲೆಗಳಿಂದಲೂ, ವಸ್ತ್ರಗಳಿಂದಲೂ ಆತನನ್ನು ಅಲಂಕರಿಸಿದಳು.

ಆ ಮೇಲೆ ಪುರೋಹಿತನ ಆಜ್ಞೆಯಂತೆ ಶ್ರೀನಿವಾಸನನ್ನು ಶೃಂಗರಿಸಿದ ಐರಾವತದ ಮೇಲೆ ಕೂಡ್ರಿಸಿಕೊಂಡು, ಬ್ರಹ್ಮ, ಶೇಷ, ಗರುಡ, ಅಗ್ನಿ, ವಾಯು, ವರುಣ, ಯಮ, ಮರುದ್ಗಣಗಳಿಂದಲೂ, ದೇವತಾಸ್ತ್ರೀಯರಿಂದಲೂ, ಸ್ತ್ರೀ-ಪುತ್ರ ಮೊದಲಾದವರಿಂದಲೂ, ವಶಿಷ್ಠಾದಿ ಋಷಿಗಳಿಂದಲೂ ಸಹಿತನಾಗಿ ಆಕಾಶರಾಜನು ರತ್ನತೋರಣಗಳಿಂದ ಶೋಭಿತವಾದ ರಾಜಗೃಹಕ್ಕೆ ಬಂದನು. ಅದೇ ಸಮಯದಲ್ಲಿ ತೋಂಡಮಾನ ರಾಜನ ಪತ್ನಿಯು ದ್ವಾರತೋರಣದ ಸಮೀಪದಲ್ಲಿ ನಿಂತು, ಶ್ರೀನಿವಾಸನಿಗೆ ಕುಂಕುಮೋದಕಗಳಿಂದ ಕದಲಾರತಿಯನ್ನು ಮಾಡಿದಳು. ಆಗ ಅನೇಕ ವಾದ್ಯಧ್ವನಿಗಳು ಮೊಳಗುತ್ತಿದ್ದವು. ಶ್ರೀನಿವಾಸನು ಐರಾವತದಿಂದ ಇಳಿದು, ಆಕಾಶರಾಜನಿಂದ ಸಹಿತನಾಗಿ ತನ್ನ ಸಮಸ್ತ ಸಮೂಹದೊಡನೆ ರಾಜಮಂದಿರವನ್ನು ಪ್ರವೇಶ ಮಾಡಿದನು. ಅವನು ಆ ರಾಜ ಮಂದಿರದ ಅನೇಕ ದ್ವಾರಗಳನ್ನು ದಾಟಿ, ಒಂದು ಭವ್ಯವಾದ ಪಡಸಾಲೆಯಲ್ಲಿ ಆಕಾಶರಾಜನಿಂದ ನಿರ್ಮಿತವಾದ ಒಂದು ರತ್ನಕೆಚ್ಚಿದ ಜಗಲಿಯ ಮೇಲೆ ಹೋಗಿ

ಕುಳಿತುಕೊಂಡನು. ಆ ಜಗಲಿಯ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಬಾಳೆಯ ಕಂಬಗಳನ್ನು ನಿಲ್ಲಿಸಿದ್ದರು. ಅಂಥ ಜಗಲಿಯ ಸುತ್ತುಮುತ್ತು ಸರ್ವ ಋಷಿಗಳು ಕುಳಿತುಕೊಂಡರು. ದೇವತೆಗಳೆಲ್ಲರು ಬ್ರಹ್ಮನನ್ನು ಮುಂದೆಮಾಡಿಕೊಂಡು ತಮ್ಮ ತಮ್ಮ ಆಸನಗಳಲ್ಲಿ ವಿವಾಹಮಹೋತ್ಸವವನ್ನು ನೋಡುವದಕ್ಕಾಗಿ ಕುಳಿತುಕೊಂಡರು. ಆ ಸಮಯದಲ್ಲಿ ಧರ್ಮಿಷ್ಠನಾದ ಆಕಾಶರಾಜನೂ ಧರಣೀದೇವಿಯೂ ಮಂಗಳಸ್ನಾನವನ್ನು ಮಾಡಿ ಅಲಂಕೃತರಾಗಿ, ಶ್ರೀನಿವಾಸನು ಕುಳಿತಿರುವ ವಿವಾಹದ ಜಗಲಿಯ ಹತ್ತರ ಬಂದು ಕುಳಿತುಕೊಂಡರು. ಆಗ ಪುರೋಹಿತನು ಕನ್ಯಾದಾನಾಂಗಭೂತವಾದ ಸಂಕಲ್ಪವನ್ನು ಆಕಾಶರಾಜನಿಂದ ಮಾಡಿಸಿ, ಮಧುಪರ್ಕವನ್ನು ಮಾಡಿದನು. “ ಸಹಸ್ರಶೀರ್ಷ” ಎಂಬ ಮಂತ್ರ ದೊಡನೆ ಧರಣೀದೇವಿಯು ಸುವರ್ಣಕುಂಭದಿಂದ ಹಾಕುತ್ತಿರುವ ಸ್ವಾಮಿ ಪುಷ್ಕರಣಿಯ ಪವಿತ್ರವಾದ ಜಲದಿಂದ, ರಾಜನು ಶ್ರೀನಿವಾಸನ ಪಾದಪ್ರಕ್ಷಾಲನೆ ಯನ್ನು ಮಾಡಿದನು. ಆ ಪಾದೋದಕವನ್ನು ತನ್ನ, ಹಾಗು ತನ್ನ ಸತೀಪುತ್ರರ ಮೇಲೆಯೂ, ತನ್ನ ಮನೆ, ಭಾಂಡಾರ, ಗಜಶಾಲೆ, ಅಶ್ವಶಾಲೆಗಳ ಮೇಲೆಯೂ ಪ್ರೋಕ್ಷಣವನ್ನು ಮಾಡಿ— ಇವತ್ತಿನ ದಿವಸ ನನ್ನ ಜನ್ಮವು ಸಫಲವಾಯಿತು, ನನ್ನ ಪಿತೃಗಳು ಸಂತುಷ್ಟರಾದರು. ಎಂದೆನ್ನುತ್ತ, ಅನೇಕವಾದ ಅಲಂಕಾರ ಗಳಿಂದ ಭೂಷಿತಳಾದ ಪದ್ಮಾವತಿಯನ್ನು ಶ್ರೀನಿವಾಸನ ಸಮ್ಮುಖದಲ್ಲಿ ಕೂಡ್ರಿಸಿದನು. ಆಗ ಗುರುಗಳಾದ ಬೃಹಸ್ಪತ್ಯಾಚಾರ್ಯರು ಕನ್ಯೆಯ ಗೋತ್ರ, ಪ್ರವರಗಳನ್ನು ಉಚ್ಚಾರಮಾಡಿದರು; “ ಅತ್ರಿಗೋತ್ರೋತ್ಪನ್ನನಾದ ಸುವೀರ ರಾಜನ ಪ್ರಪೌತ್ರಿಯೂ, ಸುಧರ್ಮರಾಜನ ಪೌತ್ರಿಯೂ, ಆಕಾಶರಾಜನ ಪುತ್ರಿಯೂ ಆದ ಪದ್ಮಾವತಿಯೆಂಬ ಸಾಲಂಕೃತ ಕನ್ಯೆಯನ್ನು ಶ್ರೀನಿವಾಸನೇ, ಅಂಗೀಕರಿಸು ” ಎಂದು ಉಚ್ಚರಿಸಿದನು. ಆಗ ವಶಿಷ್ಠರು ವರನ ಗೋತ್ರವನ್ನು ಉಚ್ಚರಿಸಿದರು; “ವಶಿಷ್ಠಗೋತ್ರೋತ್ಪನ್ನನಾದ ಯಯಾತಿರಾಜನ ಪ್ರಪೌತ್ರನೂ, ಶೂರಸೇನರಾಜನ ಪೌತ್ರನೂ, ವಸುದೇವನ ಪುತ್ರನೂ ಆದ ವೇಂಕಟೇಶನಿಗೆ ಕನಕಾಭರಣಗಳಿಂದ ಭೂಷಿತಳಾದ “ ಪದ್ಮಾವತೀ”ನಾಮಕ ಕನ್ಯೆಯನ್ನು ನಾವು ಗ್ರಹಣಮಾಡುತ್ತೇವೆ, ” ಹೀಗೆ ಕನ್ಯಾವರಗಳ ಗೋತ್ರೋಚ್ಚಾರಗಳನ್ನು ಮಾಡಿ, ವಧೂವರರ ಮಧ್ಯದಲ್ಲಿ ರತ್ನಮಯವಾದ ಅಂತಃಪಟವನ್ನು ಹಿಡಿದರು. ದೈವಜ್ಞನು “ ಸುಮುಹೂರ್ತ”ವೆಂದು ಮಂಗಳಾಷ್ಟಕವನ್ನು ಹೇಳುವವನಾದನು.

ಆಗ ಸಮಸ್ತರಾದ ಋಷಿಗಳೂ, ದೇವತೆಗಳೂ " ತದೇವಲಗ್ನಂ" ಎಂಬ ಮಂತ್ರದಿಂದ ಶ್ರೀನಿವಾಸ ಪದ್ಮಾವತಿಯರ ಮೇಲೆ ಮಂತ್ರಾಕ್ಷತೆಯನ್ನು ಎರಚಿದರು.

ಅನಂತರದಲ್ಲಿ ಕನ್ಯಾದಾನಪರಾಯಣನಾದ ಆಕಾಶರಾಜನು ಶುದ್ಧಾಂತಃ ಕರಣದಿಂದ ಶ್ರೀನಿವಾಸನಿಗೆ— " ದೇವಾಧಿದೇವನಾದ ಶ್ರೀನಿವಾಸನೇ, ಈ ಕನ್ನಿಕೆಯನ್ನು ನಿನಗೆ ಕೊಡುತ್ತೇನೆ, ಗ್ರಹಣಮಾಡು" ಎಂದು ನುಡಿದು, ಧರಣೀದೇವಿಯಿಂದ ಹಾಕಲ್ಪಟ್ಟ, ಹಾಗು ಮಂತ್ರದಿಂದ ಪವಿತ್ರವಾದ, ಸ್ವಾಮಿ ಪುಷ್ಕರಣಿಯ ಉದಕವನ್ನು ತನ್ನ ಬೊಗಸೆಯೊಳಗಿಂದ ಶ್ರೀನಿವಾಸನ ಬೊಗಸೆಯಲ್ಲಿ ಬಿಟ್ಟು, ಕನಕಾಭರಣಗಳಿಂದ ಸಹಿತಳಾದ ಪದ್ಮಾವತಿಯನ್ನು ಅವನಿಗೆ ಕೊಟ್ಟನು. ಅನಂತರದಲ್ಲಿ ಪುರೋಹಿತರು ಶ್ರೀನಿವಾಸನ ಕೈಯಲ್ಲಿ ಕಂಕಣವನ್ನು ಕಟ್ಟಿದರು. ಬೃಹಸ್ಪತ್ಯಾಚಾರ್ಯರು ಪದ್ಮಾವತಿಯ ಕೈಯಲ್ಲಿ ಕಂಕಣವನ್ನು ಕಟ್ಟಿದರು. ವಶಿಷ್ಠಋಷಿಗಳು ಶ್ರೀನಿವಾಸನ ಕೈಯೊಳಗೆ ಮಾಂಗಲ್ಯಸೂತ್ರವನ್ನು ಕೊಟ್ಟು— " ಪುರುಷೋತ್ತಮನೇ, ಪದ್ಮಾವತಿಯ ಕೊರಳಲ್ಲಿ ಇದನ್ನು ಬಂಧನಮಾಡು" ಎಂದು ಹೇಳಿದರು. ಶ್ರೀನಿವಾಸನು ಆ ಮಾಂಗಲ್ಯಸೂತ್ರವನ್ನು ತನ್ನ ಕೈಯೊಳಗೆ ತೆಗೆದುಕೊಂಡು, ಅದನ್ನು ಬ್ರಾಹ್ಮಣರ ಕೈಗೆ ಮುಟ್ಟಿಸಿ, ಆ ಮೇಲೆ ಆಕಾಶರಾಜನ ಕರಸ್ಪರ್ಶವನ್ನು ಮಾಡಿಸಿದನು. ಮುತ್ತೈದೆಯರು— " ಪದ್ಮಾವತಿಯೇ, ಮುತ್ತೈದೆಯಾಗು, ಕಲ್ಯಾಣಕರಳಾಗು, ಬಹು ಪುತ್ರವತಿಯಾಗು ಸರ್ವಲೋಕಕ್ಕೆ ತಾಯಿಯಾಗು" ಎಂದು ಆಶೀರ್ವಾದಪೂರ್ವಕವಾದ ಗಾಯನ ಮಾಡುತ್ತಿದ್ದರು. ಮಂಗಳವಾದ್ಯಗಳು ಮೊಳಗುತ್ತಿದ್ದವು. ಬಳಿಕ ಶ್ರೀನಿವಾಸನು— ಪದ್ಮಾವತಿಯೇ, " ಜಗಜ್ಜೀವನಕ್ಕೆ ಕಾರಣವಾದ ಈ ಮಾಂಗಲ್ಯಸೂತ್ರವನ್ನು ನಿನ್ನ ಕಂಠದಲ್ಲಿ ಬಂಧನ ಮಾಡುತ್ತೇನೆ; ನನ್ನೊಡನೆ ನೀನು ಬಹುಕಾಲಪರ್ಯಂತರವಾಗಿ ಜೀವಿಸು" ಎಂಬ ಮಂತ್ರದಿಂದ ಪದ್ಮಾವತಿಯ ಕಂಠದಲ್ಲಿ ಕಟ್ಟಿದನು.

ಆ ಸಮಯದಲ್ಲಿ ಆಕಾಶರಾಜನು ಕೋಟಿಸಂಖ್ಯಾಕವಾದ ಮೊಹರುಗಳನ್ನು ವರದಕ್ಷಿಣೆಯಾಗಿ ಶ್ರೀನಿವಾಸನಿಗೆ ಕೊಟ್ಟನು. ಅವನ್ನು ನೋಡಿ ಶ್ರೀನಿವಾಸನು ಸಂತೋಷಪಟ್ಟು,— ಆಕಾಶರಾಜನೇ, ನೀನು ಮಹಾ ದಾನಶೂರನು, ಮತ್ತು ವಿವಾಹಕಾರ್ಯದಲ್ಲಿ ನಿಪುಣನಾದವನು; ಆದ್ದರಿಂದ ಈ ವರದಕ್ಷಿಣೆಯಲ್ಲದೆ,

ವರೋಪಚಾರಾರ್ಥವಾಗಿ [ಅನೇಕವಾದ ರತ್ನಗಳಿಂದ ಸಹಿತವಾದ ಭೂಷಣ ಗಳನ್ನು ಕೊಡು; ಎಂದು ಹೇಳಿದನು. ಆಗ ರಾಜನು ಸಂತೋಷಪಟ್ಟು ಶತಭಾರ ವುಳ್ಳ ಕಿರೀಟವನ್ನೂ, ಕಾಂಚಿಯನ್ನೂ, ಬಾಹುಪುರಿಗಳನ್ನೂ, ಮನೋಹರವಾದ ನೂಪುರಗಳನ್ನೂ, ಪಾದುಕೆಗಳನ್ನೂ, ಏಳು ಪದಕಗಳುಳ್ಳ ಮುತ್ತಿನ ಮಾಲೆ ಗಳನ್ನೂ, ಭುಜಭೂಷಣಗಳನ್ನೂ, ಕರ್ಣಭೂಷಣಗಳನ್ನೂ, ಅಮೂಲ್ಯವಾದ ರತ್ನ. ಮಾಣಿಕ್ಯ, ವಜ್ರ, ವೈಡೂರ್ಯಗಳಿಂದ ನಿರ್ಮಿತವಾದ ಕಂಕಣಗಳನ್ನೂ, ನಾಗಭೂಷಣಗಳನ್ನೂ, ಹತ್ತು ಉಂಗುರಗಳನ್ನೂ ಬಹುರತ್ನಗಳಿಂದ ಯುಕ್ತವಾದ ಕಟಿಸೂತ್ರವನ್ನೂ, ಇನ್ನೂ ಬೇರೆ ಬೇರೆ ಭೂಷಣಗಳನ್ನೂ ಕೊಟ್ಟದ್ದಲ್ಲದೆ, ಸುವರ್ಣದ ಭೋಜನಪಾತ್ರೆಯನ್ನೂ ನೀರಿನ ಪಾತ್ರೆಗಳನ್ನೂ ಕೊಟ್ಟನು. ಈ ಪ್ರಕಾರ ರಾಜನು ಕೊಟ್ಟ ಆಭರಣಗಳನ್ನಿಟ್ಟುಕೊಂಡು ಶ್ರೀನಿವಾಸನು ಪ್ರಕಾಶ ಮಾನನಾಗಿ ತೋರುತ್ತಿದ್ದನು.

ಅನಂತರದಲ್ಲಿ ಪುರೋಹಿತರಾದ ವಶಿಷ್ಠರು, ಅಗ್ನಿಯನ್ನು ಪ್ರತಿಷ್ಠಿಸಿ, ಪದ್ಮಾವತಿಯ ಅಂಜಲಿಯಿಂದ ಅರ್ಪಿತವಾದ ಲಾಜೆಗಳಿಂದ ಹೋಮವನ್ನು ಮಾಡಿಸಿ, ವಿವಾಹವಿಧಿಯನ್ನು ಮುಗಿಸಿದರು. ಆ ಮೇಲೆ ರಾಜಪುರೋಹಿತನು ಸರ್ವಮುನಿಗಳ ಹಸ್ತದಲ್ಲಿ ಸ್ವಸ್ತಿವಾಚನಪೂರ್ವಕವಾಗಿ ರತ್ನಾಕ್ಷತೆಗಳನ್ನು ಕೊಡಲು, ಆ ಋಷಿಗಳು ವೇದಮಂತ್ರದಿಂದ ಶ್ರೀನಿವಾಸ–ಪದ್ಮಾವತಿಯರ ಮೇಲೆ ರತ್ನಾಕ್ಷತೆಗಳನ್ನು ಎರಚಿದರು ಆ ಕಾಲದಲ್ಲಿ ಆಕಾಶರಾಜನು ಬ್ರಾಹ್ಮಣ ರಿಗೆ ದಕ್ಷಿಣೆ ತಾಂಬೂಲಗಳನ್ನು ಕೊಟ್ಟು ತೃಪ್ತಿಪಡಿಸಿದನು; ಕೋಟಿಸಂಖ್ಯಾಕ ವಾದ ಆಕಳುಗಳನ್ನೂ, ಅಶ್ವಗಳನ್ನೂ, ವಸ್ತ್ರಗಳನ್ನೂ ದಾನಮಾಡಿದನು; ಅನಂತರ ದಲ್ಲಿ ವಧೂ–ವರರನ್ನು ಕೂಡಿಸಿ ಭೋಜನಸಮಾರಂಭವನ್ನು ಮಾಡಿಸಿದನು. ಶ್ರೀನಿವಾಸನ ಪುತ್ರ–ಪೌತ್ರಾದಿಗಳಿಗೂ, ಪುರೋಹಿತ ಮೊದಲಾದ ಸಮಸ್ತರಿಗೂ ಬಹು ವಿಧವಾದ ಅನ್ನಗಳಿಂದಲೂ, ಭಕ್ಷ್ಯಗಳಿಂದಲೂ, ಘೃತಕ್ಷೀರಯುಕ್ತವಾದ ಪರಮಾನ್ನಗಳಿಂದಲೂ, ಸೂಪ–ಶಾಕಾದಿಗಳಿಂದಲೂ ಭೋಜನವನ್ನು ಮಾಡಿ ಸಿದನು. ಆವತ್ತಿನ ದಿವಸ ಧರ್ಮಿಷ್ಠನಾದ ಆಕಾಶರಾಜನು ಶ್ರೀನಿವಾಸನ ಸಮೀಪದಲ್ಲಿ ಕುಳಿತು ಸಂತೋಷದಿಂದ ಭೋಜನವನ್ನು ಮಾಡಿದನು. ಮತ್ತು ಧರಣೀದೇವಿಯು, ಲಕ್ಷ್ಮೀದೇವಿ–ಬಕುಲಾವತಿಯರಿಂದ ಯುಕ್ತಳಾಗಿ ಶ್ರೀನಿವಾ ಸನ ಸಮೀಪದಲ್ಲಿ ತನ್ನ ಪುತ್ರನಿಂದ ಕೂಡಿಕೊಂಡು ಭೋಜನಮಾಡಿದಳು.

ಆಕಾಶರಾಜನು ಮರುದಿವಸ ಪ್ರಾತಃಕಾಲದಲ್ಲಿ ವಧೂವರರಿಗೆ ಮಂಗಳ ಸ್ನಾನವನ್ನು ಮಾಡಿಸಿ, ಋಷಿಗಳಿಗೂ, ದೇವತೆಗಳಿಗೂ ದೇವತಾಸ್ತ್ರೀಯರಿಗೂ ನಾನಾವಿಧವಾದ ಅಪೂಪಗಳಿಂದಲೂ, ಸೂಪಶಾಕಾದಿಗಳಿಂದಲೂ ಬಹುಮಾನ ಪೂರ್ವಕವಾಗಿ ಭೋಜನವನ್ನು ಮಾಡಿಸಲು, ಘೃತದ ಕಾಲಿವೆಯೂ, ಕ್ಷೀರದ ಕಾಲಿವೆಯೂ, ದಧಿಯ ಕಾಲಿವೆಯೂ ಹರಿದವು. ಈ ಪ್ರಕಾರ ನಾಲ್ಕು ದಿವಸಗಳ ವರೆಗೆ ಭೋಜನೋತ್ಸವವು ನಡೆಯಿತು. ಐದನೇ ದಿವಸ ಪ್ರಾತಃಕಾಲ ವಾಗಲು, ಆಕಾಶರಾಜನು ನಾಗವಲಿಯನ್ನು ನೂಡುವದಕ್ಕಾಗಿ. ದೀಪಜ್ವಾಲೆ ಯಿಂದ ವಿರಾಜಿಸುತ್ತಿರುವ ನಾಲ್ಕು ಕಲಶಗಳನ್ನು ಸ್ಥಾಪಿಸಿ, ರತ್ನಖಚಿತವಾದ ಸಿಂಹಾಸನದಲ್ಲಿ ವಧೂ-ವರರನ್ನು ಕೂಡ್ರಿಸಿ ಪೂಜಿಸಿದನು. ಅನಂತರದಲ್ಲಿ ಕ್ಷೀರಪಾತ್ರೆಯನ್ನು ತೆಗೆದುಕೊಂಡು ಬಕುಲಾವತಿಯನ್ನು ವಸ್ತ್ರಾಲಂಕಾರಗಳಿಂದ ಸತ್ಕರಿಸಿ, ಕ್ಷೀರದಿಂದ ಆಕೆಯ ನಾಭಿಯನ್ನು ಸಮ್ಮಾರ್ಜನಮಾಡಿ, ದುಃಖದಿಂದ ತನ್ನ ಮಗಳನ್ನು ಆಕೆಗೆ ಒಪ್ಪಿಸಿದನು; ಮತ್ತು ಲಕ್ಷ್ಮೀದೇವಿಯ ನಾಭಿಮೂಲ ವನ್ನು ಘೃತಸಹಿತವಾದ ಕ್ಷೀರದಿಂದ ಮಾರ್ಜನಮಾಡಿ, ಗದ್ಗದಕಂಠವುಳ್ಳವನಾಗಿ ತನ್ನ ಮಗಳನ್ನು ಒಪ್ಪಿಸಿದನು. ಅನಂತರದಲ್ಲಿ ರಾಜಪತ್ನಿಯಾದ ಧರಣೀ ದೇವಿಯು ರೋದನಮಾಡುತ್ತ ಶ್ರೀನಿವಾಸನ ಕೈಯಲ್ಲಿ ಪದ್ಮಾವತಿಯನ್ನು ಕೊಟ್ಟು, ಆತನ ನಾಭಿಯಲ್ಲಿ ಕ್ಷೀರವನ್ನು ಸೇಚನಮಾಡಿ, " ಜೀವಂ ರುದಂತಿ" ಎಂಬ ಮಂತ್ರದಿಂದ ಬಹು ಕಷ್ಟವುಳ್ಳವಳಾಗಿ ತನ್ನ ಪುತ್ರಿಯನ್ನು ಒಪ್ಪಿಸಿ,— ಜಗನ್ನಾಥನೇ, ನನ್ನಿಂದ ನವಮಾಸಪರಿಯಂತವಾಗಿ ಧರಿಸಲ್ಪಟ್ಟವಳಾಗಿಯೂ, ಪಾಲಿತಳಾಗಿಯೂ, ಲಾಲಿತಳಾಗಿಯೂ, ಇರುವ ಈ ನನ್ನ ಪುತ್ರಿಯನ್ನು ನಿನ್ನ ಅಧೀನಮಾಡಿರುವೆನು, ಎಂದು ಹೇಳುತ್ತಿರಲು, ಆಗ ತನ್ನ ಪತ್ನಿಯ ದುಃಖವನ್ನು ನೋಡಿ ಆಕಾಶರಾಜನಿಗೂ ಪರಮದುಃಖವಾಗಿ, ದೀನಮುಖದಿಂದ ಪದ್ಮಾವತಿ ಯನ್ನು ಅಪ್ಪಿಕೊಂಡು,— " ಮಗಳೇ, ನಿನ್ನ ವಿಯೋಗದಿಂದ ಮಂದಭಾಗ್ಯ ನಾಗಿ ನಾನು ಇನ್ನು ಮೇಲೆ ಬಹಳ ದಿವಸ ಬದುಕುವದಿಲ್ಲ. ಎಲೌ ಪದ್ಮಾ ವತಿಯೇ, ನೀನು ಹೋದ ಮೇಲೆ ಭೋಜನಗೃಹದಲ್ಲಿಯೂ, ಕ್ರೀಡಾಗೃಹ ದಲ್ಲಿಯೂ ನಿನ್ನ ತಮ್ಮನು ನಿನ್ನನ್ನು ಬಿಟ್ಟು ಹ್ಯಾಗೆ ಇರುವನು ?" ಎಂದು ರಾಜನು ದುಃಖಪಡುತ್ತಿದ್ದನು. ಅದನ್ನು ಕಂಡು ತೋಂಡಮಾನನು, ತಾನೂ ದುಃಖಿಸುತ್ತ— ಪದ್ಮಾವತಿಯೇ, ನೀನು ಹೋದ ಮೇಲೆ ದರಿದ್ರರಾಗಿಯೂ,

ದೀನರಾಗಿಯೂ, ನಿರ್ಭಾಗ್ಯರಾಗಿಯೂ ನಾವು ಮರಣವನ್ನು ಹೊಂದುವದೇ ನಿಶ್ಚಯವು. ಈ ಕಲಿಯುಗದಲ್ಲಿ ನಿನ್ನಂಥ ಮಗಳನ್ನು ನಾವು ಎಂದಿಗೂ ಕಾಣುವದಿಲ್ಲವೆಂದು ರೋದನ ಮಾಡುತ್ತಿರಲು, ರಾಜಪುತ್ರನಾದ ವಸುದಾನನು ಅತ್ಯಂತ ದುಃಖದಿಂದ ಅಕ್ಕನಾದ ಪದ್ಮಾವತಿಯನ್ನು ಅಪ್ಪಿಕೊಂಡು— ಪದ್ಮಾವತಿಯೇ, ಲೋಕದಲ್ಲಿ ದ್ರವ್ಯವನ್ನು ಗಳಿಸಬೇಕೆಂಬ ಇಚ್ಛೆಯುಳ್ಳವನು ತಾಯಿಯನ್ನೂ, ಬಾಲಕನನ್ನೂ, ಬಿಟ್ಟು ಹೋಗುವಹಾಗೆ, ನನ್ನನ್ನು ಬಿಟ್ಟು ನೀನು ಹೋಗುವೆಯಾ ? ಎಂದು ದುಃಖಿಸುತ್ತಿರಲು, ಆಗ ಆಕಾಶರಾಜನ ಸರ್ವ ಬಂಧುಬಾಂಧವರಿಗೂ ದೇವತೆಗಳಿಗೂ ಸಹ ಪರಮದುಃಖವಾಯಿತು. ಈ ಪ್ರಕಾರವನ್ನು ನೋಡಿ ಸರ್ವಸಂಗಪರಿತ್ಯಾಗವನ್ನು ಮಾಡಿದ ಋಷಿಗಳಿಗೆ ಸಹ ದುಃಖವೆನಿಸಿತು. ಎಲ್ಲರೂ ಈ ರೀತಿಯಾಗಿ ದುಃಖಪಡುವದನ್ನು ನೋಡಿ ಶ್ರೀನಿವಾಸನಾದರೂ, ತನ್ನ ತಂಗಿಯಾದ ಸುಭದ್ರೆಯನ್ನು ಅರ್ಜುನನಿಗೆ ಒಪ್ಪಿಸಿದ ಸಂಗತಿಯನ್ನು ಸ್ಮರಣೆಯಲ್ಲಿ ತಂದು ತಾನೂ ಲೌಕಿಕಮನುಷ್ಯನಂತೆ ರೋದನ ಮಾಡಲಾರಂಭಿಸಿದನು. ಈ ಪ್ರಕಾರ ಲೌಕಿಕ ಕಾರ್ಯಗಳನ್ನು ಮುಗಿಸಿ, ಶ್ರೀನಿವಾಸನು ಪದ್ಮಾವತಿಯಿಂದ ಸಹಿತನಾಗಿ ಐರಾವತವನ್ನು ಹತ್ತಿಕೊಂಡು ಸರ್ವವಾದ್ಯಘೋಷಗಳೊಡನೆ ಗ್ರಾಮಪ್ರದಕ್ಷಿಣೆಯನ್ನು ಮಾಡಿ ತನ್ನ ಸಮಸ್ತ ಸಮೂಹದೊಡನೆ ತನ್ನ ಮಂದಿರಕ್ಕೆ ಬಂದನು.

ಆಮೇಲೆ ಶ್ರೀನಿವಾಸನು ತನ್ನ ಸ್ಥಳಕ್ಕೆ ಹೋಗಲಿಚ್ಛಿಸಿ, ಪದ್ಮಾವತಿಯಿಂದ ಸಹಿತನಾಗಿ ಗರುಡಾರೂಢನಾಗಿ ಆಕಾಶರಾಜನ ಮಂದಿರಕ್ಕೆ ಬಂದು ರಾಜನಿಗೂ, ರಾಜಪತ್ನಿಯಾದ ಧರಣೀದೇವಿಗೂ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಆಗ ಆ ಉಭಯತರು ಶ್ರೀನಿವಾಸ–ಪದ್ಮಾವತಿಯರಿಗೆ ಆಶೀರ್ವಾದಗಳನ್ನು ಮಾಡಿದರು. ಆಗ ಧರಣೀದೇವಿಯು–"ಶ್ರೀನಿವಾಸನೇ, ಇಲ್ಲಿ ಇನ್ನೊಂದು ತಿಂಗಳ ಪರ್ಯಂತವಿದ್ದು ಅನಂತರದಲ್ಲಿ ಉಭಯತರು ಹೋಗಬಹುದು" ಎಂದು ಹೇಳಲು, ಶ್ರೀನಿವಾಸನು ಆ ಧರಣೀದೇವಿಯ ಮಾತುಗಳನ್ನು ಕೇಳಿ, ಆಕಾಶರಾಜನಿಗೆ—"ರಾಜನೇ, ಇಲ್ಲಿ ನಾನು ನಿಲ್ಲುವಹಾಗಿಲ್ಲ, ನನಗೆ ಅವಸರದ ಕೆಲಸವದೆ; ಆದ್ದರಿಂದ ನಾನು ಈಗಲೇ ಹೊರಡಲಿಕ್ಕೆಬೇಕು; ನನ್ನ ಮೇಲೆ ದಯವನ್ನು ಮಾಡಿ ಹೊರಡುವದಕ್ಕೆ ಆಜ್ಞೆಯನ್ನು ಕೊಡು" ಎಂದು ಹೇಳಿ, ಅವರ ಅಪ್ಪಣೆಯನ್ನು ತೆಗೆದುಕೊಂಡು ಸರ್ವ ದೇವತೆಗಳಿಂದಲೂ, ಋಷಿಗಳಿಂದಲೂ ಯುಕ್ತ

ನಾಗಿ ಹೊರಟನು. ಆಗ ನಗರಸ್ಥರಾದ ಜನರು ವ್ಯಾಕುಲಚಿತ್ತರಾಗಿ ಪ್ರಾಕಾರ ಗೋಪುರಗಳನ್ನೇರಿಕೊಂಡು ಶ್ರೀನಿವಾಸನನ್ನೂ ಪದ್ಮಾವತಿಯನ್ನೂ ನೋಡಿ, ತಮ್ಮ ತಮ್ಮೊಳಗೆ,—"ಕಮಲಮುಖಿಯಾದ ಪದ್ಮಾವತಿಯು ಧನ್ಯಳು ಧನ್ಯಳು, ತನ್ನ ಪತಿಯನ್ನನುಸರಿಸಿ ಹೋಗುವಳು, ನೋಡಿರಿ" ಎಂದು ಮಾತಾಡುತ್ತಿದ್ದರು.

ಆ ಸಮಯದಲ್ಲಿ ಆಕಾಶರಾಜನು ತನ್ನ ಅಳಿಯನಿಗೆ—ಅಕ್ಕಿಯ ಇನ್ನೂರು ಗೋಣಿಗಳನ್ನೂ. ಹೆಸರಿನ ಮುನ್ನೂರು ಗೋಣಿಗಳನ್ನೂ, ಬೆಲ್ಲದ ಅನೇಕ ಹೇರು ಗಳನ್ನೂ, ಸಹಸ್ರಸಂಖ್ಯಾಕವಾದ ಹಾಲಿನ ಕೊಡಗಳನ್ನೂ, ನೂರು ಮೊಸರಿನ ಕೊಡಗಳನ್ನೂ, ಐದುನೂರು ತುಪ್ಪದಕೊಡಗಳನ್ನೂ, ಇನ್ನೂರು ಹೇರು ಸಕ್ಕರೆ ಯನ್ನೂ, ಕಂದಮೂಲಫಲಾದಿಗಳನ್ನೂ, ಎರಡುನೂರು ಮಧುಭಾಂಡಗಳನ್ನೂ, ದಶಸಹಸ್ರ ಕುದುರೆಗಳನ್ನೂ, ಸಹಸ್ರಸಂಖ್ಯಾಕವಾದ ಆನೆಗಳನ್ನೂ, ಐದು ಸಾವಿರ ಆಕಳುಗಳನ್ನೂ, ಅನೇಕ ದಾಸ-ದಾಸಿಯರನ್ನೂ, ನಾನಾವಿಧವಾದ ವಸ್ತ್ರಗಳನ್ನೂ, ಪರ್ಯಂಕವನ್ನೂ, ಇನ್ನೂ ಎಷ್ಟೋ ವಸ್ತುಗಳನ್ನೂ ಕೊಟ್ಟನು; ಹಾಗು ಅವನು ತನ್ನ ಮಗನಿಂದ ಸಹಿತನಾಗಿ ಅಳಿಯನನ್ನೂ ಮಗಳನ್ನೂ ಕಳಿ ಸುವದಕ್ಕಾಗಿ ಹೊರಟು, ದೂರದ ತನಕ ಬರಲು, ರಾಜನನ್ನು ನೋಡಿ ಶ್ರೀನಿ ವಾಸನು—ಮಹಾರಾಜನೇ, ನೀನು ಬಹಳ ದೂರಬಂದೆ, ಇನ್ನುಮೇಲೆ ತಿರುಗಿ ಹೋಗಬೇಕು. ರಾಜನೇ, ನೀನು ನನಗೆ ಇನ್ನೇನು ಕೊಡತಕ್ಕದ್ದದೆ ? ಕನ್ನಿಕೆ ಯನ್ನು ಕೊಟ್ಟು ನನ್ನನ್ನು ತೃಪ್ತಿಪಡಿಸಿದೆ; ಆದರೆ ನಿನಗೆ ತಿರುಗಿ ನಾನೇನು ಕೊಡ ತಕ್ಕದ್ದೆಂಬದನ್ನು ಹೇಳು, ಮನಸ್ಸಿನಲ್ಲಿ ಸಂದೇಹಪಡಬೇಡ; ಎಂದು ಹೇಳಿದನು. ಆಕಾಶರಾಜನು—ಶ್ರೀನಿವಾಸನೇ, ನಿನ್ನ ಪಾದಾನುಗ್ರಹದಿಂದ ನನಗೇನೂ ಕಡಿಮೆ ಯಿರುವದಿಲ್ಲ; ಆದರೂ ನಾನು ಬೇಡುವದೇನಂದರೆ, ಕುಟುಂಬ ಸಹಿತನಾದ ನನಗೆ ನಿನ್ನ ಪಾದಕಮಲಗಳಲ್ಲಿ ನಿಶ್ಚಲವಾದ ಭಕ್ತಿಯನ್ನು ಕೊಡು, ಇಷ್ಟೇ ನನ್ನ ಇಚ್ಛೆಯು, ಎಂದು ಕೇಳಿಕೊಂಡನು. ತನ್ನ ಶ್ವಶುರನ ವಚನವನ್ನು ಕೇಳಿ, ಶ್ರೀಹ ರಿಯು ಸಂತೋಷಚಿತ್ತನಾಗಿ—ಆಕಾಶರಾಜನೇ, ನಿನಗೆ ಸಾಯುಜ್ಯಪದವಿಯನ್ನು ಕೊಟ್ಟಿರುವೆನು; ಎಂದು ಹೇಳಿ, ಶ್ಯಾಲಕನಾದ ವಸುದಾನನಿಗೆ ಶ್ರೀನಿವಾಸನು ತನ್ನ ಮೈಮೇಲಿನ ವಸ್ತ್ರವನ್ನು ಅನುಗ್ರಹಮಾಡಿ ಕೊಟ್ಟನು. ಆ ಮೇಲೆ ಆಕಾಶ ರಾಜನು ಶ್ರೀನಿವಾಸನಿಂದ ಅಪ್ಪಣೆಯನ್ನು ತೆಗೆದುಕೊಂಡು, ತನ್ನ ಪುತ್ರಿಗೆ—

ಪದ್ಮಾವತಿಯೇ, ನೀನು ಪತಿಗೆ ಪ್ರಿಯಳಾಗಿ, ಪತಿಯಾಜ್ಞೆಯಂತೆ ವರ್ತಿಸುತ್ತಿರು; ಎಂದು ಹೇಳಿ ಆಕೆಯ ಅನುಜ್ಞೆಯನ್ನು ಪಡೆದು, ಗದ್ಗದ ಕಂಠವುಳ್ಳವನಾಗಿ ತನ್ನ ಪುತ್ರನಿಂದ ಸಹಿತವಾಗಿ ತಿರುಗಿ ತನ್ನ ನಗರಕ್ಕೆ ಬಂದನು.

ಆಕಾಶರಾಜನು ಹೋದಮೇಲೆ, ಶ್ರೀನಿವಾಸನು ಬ್ರಹ್ಮರುದ್ರೇಂದ್ರಾದಿ ದೇವತೆಗಳಿಂದಲೂ, ಸರ್ವಋಷಿಗಳಿಂದಲೂ ಕೂಡಿಕೊಂಡು ಪ್ರಯಾಣವನ್ನು ಮಾಡಿ, ಸುವರ್ಣಮುಖರೀ ನದಿಯನ್ನು ದಾಟಿ ಅಲ್ಲಿರುವ ಅಗಸ್ತ್ಯಾಶ್ರಮಕ್ಕೆ ಬಂದು, ಆರು ತಿಂಗಳವರೆಗೂ ಪರ್ವತವನ್ನು ಏರಬಾರದೆಂದು ನಿಶ್ಚಯಿಸಿ, ಅಲ್ಲಿಯೇ ವಾಸಮಾಡಿದನು. ಆಗ ಶ್ರೀನಿವಾಸನು ಬ್ರಹ್ಮರುದ್ರೇಂದ್ರಾದಿ ದೇವತೆಗಳಿಗೂ ಋಷಿಗಳಿಗೂ ಯೋಗ್ಯತಾನುಸಾರವಾಗಿ ವಸ್ತ್ರಗಳನ್ನು ಕೊಟ್ಟನು. ಆ ಮೇಲೆ ಸಮಸ್ತಋಷಿಗಳೂ ದೇವತೆಗಳೂ ಜಗತ್ಪತಿಯಾದ ಶ್ರೀನಿವಾಸನ ಆಜ್ಞೆಯನ್ನು ತೆಗೆದುಕೊಂಡು ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ಇತ್ತ ಲಕ್ಷ್ಮೀದೇವಿಯೂ ತನ್ನ ಪತಿಯ ಅಪ್ಪಣೆಯನ್ನು ತೆಗೆದುಕೊಂಡು ಕರವೀರ ಪುರಕ್ಕೆ ಹೊರಟು ಹೋದಳು.

ಈ ಪ್ರಕಾರ ಸರ್ವರೂ ಹೋದಮೇಲೆ ಶ್ರೀನಿವಾಸನು ಪದ್ಮಾವತಿಯಿಂದ ಸಹಿತನಾಗಿ ಅಗಸ್ತ್ಯಾಶ್ರಮದಲ್ಲಿದ್ದುಕೊಂಡು, ಮನುಷ್ಯಸಂಬಂಧಿಕವಾದ ಭೋಗವನ್ನು ಭೋಗಿಸುತ್ತ ಇರುತ್ತಿದ್ದನು.

ಶತಾನಂದಋಷಿಗಳು ಹೇಳುತ್ತಾರೆ,—ಜನಕರಾಜನೇ, ಶ್ರೀನಿವಾಸನ ಈ ವಿವಾಹಾಧ್ಯಾಯ ಮಾಹಾತ್ಮ್ಯವನ್ನು ಕೇಳುವ ಮನುಷ್ಯನು ಕೋಟಿ ಸಂಖ್ಯಾಕವಾದ ಕನ್ಯಾದಾನ ಮಾಡಿದರೆ ಎಷ್ಟುಫಲವು ಬರುವದೋ, ಮತ್ತು ಪೃಥ್ವೀದಾನವನ್ನು ಮಾಡಿದರೆ ಎಷ್ಟುಫಲವು ಬರುವದೋ, ಅಷ್ಟುಫಲವನ್ನು ಹೊಂದುವನು. ಇದಲ್ಲದೆ, ಶ್ರೀನಿವಾಸನ ವಿವಾಹೋತ್ಸವವನ್ನು ಯಾವ ಮನುಷ್ಯನು ಮಾಡುವನೋ ಅವನ ಕಲ್ಯಾಣವಾಗುವದು. ಈ ಚರಿತ್ರವು ಸರ್ವರಿಗೂ ಶುಭಕರವಾಗಿಯೂ, ಮಂಗಳಪ್ರದವಾಗಿಯೂ ಇರುವದು.

॥ ಇತಿ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿ, ಶ್ರೀವೇಂಕಟೇಶ ಮಾಹಾತ್ಮ್ಯದಲ್ಲಿ "ಶ್ರೀನಿವಾಸ ವಿವಾಹಪ್ರಶಂಸನ"ವೆಂಬ ಹನ್ನೆರಡನೇ ಅಧ್ಯಾಯವು ಮುಗಿದುದು ॥

---

# ೧೩ನೆಯ ಅಧ್ಯಾಯ



ಜನಕರಾಜನು ಕೇಳಿದ್ದೇನಂದರೆ,- ಸ್ವಾಮಿಾ ಗುರುಗಳೇ, ವಿವಾಹವು ಆದ ಮೇಲೆ ಶ್ರೀನಿವಾಸನು ಏನು ಮಾಡಿದನು ? ಅದನ್ನು ಸವಿಸ್ತಾರವಾಗಿ ಹೇಳಿರಿ, ಎನಲು, ಶತಾನಂದ ಋಷಿಗಳು ಹೇಳತೊಡಗಿದರು:—

ಕೇಳೈ ಜನಕರಾಜನೇ, ಪದ್ಮಾವತಿಯಿಂದ ಸಹಿತನಾಗಿ ಶ್ರೀನಿವಾಸನು ಅಗಸ್ತ್ಯಾಶ್ರಮದಲ್ಲಿಯೇ ಸರ್ವಭೋಗಗಳನ್ನು ಭೋಗಿಸುತ್ತ, ಸಂತೋಷದಿಂದ ಆರುತಿಂಗಳತನಕ ಇರುತ್ತಿದ್ದನು. ಆಗ ಒಂದು ದಿವಸ ಪದ್ಮಾವತಿಯು ಸುವರ್ಣಮುಖರೀ ನದಿಯಲ್ಲಿ ಸ್ನಾನವನ್ನು ಮಾಡಲಿಕ್ಕೆ ಹೋದ ಸಮಯದಲ್ಲಿ ನಾರಾಯಣಪುರದಿಂದ ಬಂದಿದ್ದ ಒಬ್ಬ ದೂತನನ್ನು ಕಂಡಳು. ಪದ್ಮಾವತಿಯು ಆತುರದಿಂದ ಆ ದೂತನಿಗೆ-" ದೂತನೇ, ನೀನು ಏನು ಕಾರಣ ಪ್ರಾಪ್ತನಾಗಿರುವೆ ! ನಿನ್ನನ್ನು ರಾಜನು, ಅಥವಾ ರಾಜಪುತ್ರನಾದ ವಸುದಾನನು, ಇಲ್ಲವೆ ತೋಂಡಮಾನನು ಕಳುಹಿದನೋ ಏನು, ಹೇಳು. ಇದಲ್ಲದೆ ನನ್ನ ಮಾತಾ-ಪಿತೃಗಳೂ, ಕಕ್ಕನಾದ ತೋಂಡಮಾನನೂ, ತಮ್ಮನಾದ ವಸುದಾನನೂ ಮೊದಲಾದವರು ಕ್ಷೇಮದಿಂದಿದ್ದಾರೆಯೋ ಹ್ಯಾಗೆ ಹೇಳು, ಎಂದು ಕೇಳಲು, ಆ ದೂತನು ದುಃಖದಿಂದ ಕಣ್ಣುಗಳಲ್ಲಿ ನೀರನ್ನು ತಂದು -" ತಾಯಿಯೇ, ಏನು ಹೇಳಲಿ ! ನಿಮ್ಮ ತಂದೆಯಾದ ಆಕಾಶರಾಜನು ಅಸ್ವಸ್ಥನಾಗಿ ತೀರ ಮರಣೋನ್ಮುಖನಾಗಿರುವನು; ಆದ್ದರಿಂದ ನಿನ್ನನ್ನೂ ನಿನ್ನ ಪತಿಯಾದ ಶ್ರೀನಿವಾಸನನ್ನೂ ಕರೆಯಲಿಕ್ಕೆ ಬಂದಿರುವೆನು" ಎಂದು ಹೇಳಲು, ಆ ದೂತನ ಮುಖದಿಂದ ಈ ವರ್ತಮಾನವನ್ನು ಕೇಳಿ ತಾಕ್ಷಣವೇ ಪದ್ಮಾವತಿಯು ಮೂರ್ಛೆಯಿಂದ ಭೂಮಿಯಲ್ಲಿ ಬಿದ್ದಳು. ಆಗ ಸಮೀಪದಲ್ಲಿದ ಅಗಸ್ತ್ಯಋಷಿಯ ಪತ್ನಿಯಾದ ಲೋಪಾಮುದ್ರೆಯು ಆಕೆಯನ್ನು ಎಬ್ಬಿಸಿ ಮೆಲ್ಲಗೆ ಕರೆದುಕೊಂಡು ಹೋಗಿ, ದೂತನು ಹೇಳಿದ ವೃತ್ತಾಂತವನ್ನೂ ಪದ್ಮಾವತಿಯು ಮೂರ್ಛಿತಳಾಗಿ ಬಿದ್ದ ಸಂಗತಿಯನ್ನೂ ಶ್ರೀನಿವಾಸನಿಗೆ ತಿಳಿಸಿದಳು. ಅದನ್ನು ಕೇಳಿದ ಕೂಡಲೆ ಅವನು ಪ್ರಾಕೃತಮನುಷ್ಯನಂತೆ ದುಃಖವನ್ನು ಮಾಡಹತ್ತಿ, ಲೋಪಾಮುದ್ರೆಗೆ—"ಅಗಸ್ತ್ಯಪತ್ನಿಯೇ, ನನಗೆ ಮಹತ್ ಸಂಕಟವು ಪ್ರಾಪ್ತವಾಯಿತು. ಹಾ! ಪದ್ಮಾವತಿಯೇ ಏನು ಮಾಡಲಿ ? ಎಲ್ಲಿಗೆ

ಹೋಗಲಿ ! ” ಎಂದು ಕಷ್ಟಪಡುತ್ತ, ಅಗಸ್ತ್ಯಋಷಿಗಳ ಬಳಿಗೆ ಬಂದು,-- ಅಗಸ್ತ್ಯಋಷಿಗಳೇ, ಇವತ್ತಿನ ದಿವಸವೇ ಪದ್ಮಾವತಿಯಿಂದಲೂ, ಬಕುಲಾವತೀ ದೇವಿಯಿಂದಲೂ ಸಹಿತನಾಗಿ ನಾನು ಆಕಾಶರಾಜನ ಪಟ್ಟಣಕ್ಕೆ ಹೋಗುತ್ತೇನೆ; ನೀವು ನನ್ನ ಸಂಗಡ ಬರಬೇಕು, ಎಂದು ಹೇಳಿ ಎಲ್ಲರನ್ನೂ ಕರೆದುಕೊಂಡು ಆ ಹೊತ್ತಿನ ಸೂರ್ಯಾಸ್ತಮಾನಕ್ಕೆ ಆಕಾಶರಾಜನ ಪಟ್ಟಣಕ್ಕೆ ಬಂದು ಮುಟ್ಟಿದನು. ಆಗ ನಗರದ್ವಾರದಲ್ಲಿರುವ ದ್ವಾರಪಾಲಕರನ್ನು ಆಕಾಶರಾಜನ ವಿಷಯವಾಗಿ ವಿಚಾರಿಸುತ್ತ ಅವನು ಹಾಗೇ ರಾಜಮಾರ್ಗವಿಡಿದು ಎಲ್ಲರಿಂದ ಸಹಿತನಾಗಿ ರಾಜನು ಮಲಗಿರುವ ಗೃಹಕ್ಕೆ ಬಂದು ನೋಡಲು, ಸ್ವಲ್ಪ ಶ್ವಾಸಮಾತ್ರವುಳ್ಳವನಾಗಿ ದರ್ಭಶಯ್ಯೆಯಮೇಲೆ ಮಲಗಿಸಲ್ಪಟ್ಟಿರುವ ಆಕಾಶರಾಜನನ್ನು ಕಂಡನು. ಕೂಡಲೆ ಶ್ರೀನಿವಾಸನು ಆತನ ಹತ್ತರ ಬಂದು, ಆತನ ಮುಖದಲ್ಲಿ ತನ್ನ ಮುಖವನ್ನೂ, ಲಲಾಟದಲ್ಲಿ ಲಲಾಟವನ್ನೂ, ಉದರದಲ್ಲಿ ಉದರವನ್ನೂ ಇಟ್ಟು, ಆ ರಾಜನಿಗೆ ಅಂತ್ಯಕಾಲದಲ್ಲಿ ತನ್ನ ಅಂಗಸಂಗವನ್ನು ಕೊಟ್ಟು, ಆ ಮೇಲೆ ದುಃಖದಿಂದ,—ರಾಜನೇ, ನಿನ್ನ ಪುತ್ರನನ್ನೂ, ಪದ್ಮಾವತಿಯನ್ನೂ, ನಿನ್ನ ತಮ್ಮನಾದ ತೋಂಡಮಾನನನ್ನೂ, ಸಕಲ ರಾಜ್ಯೈಶ್ವರ್ಯವನ್ನೂ ಬಿಟ್ಟು ಎಲ್ಲಿಗೆ ಹೋಗುತ್ತೀ? ಮಾತಾ-ಪಿತೃವಿಹೀನನಾದ ನನ್ನನ್ನು ನೀನು ಜನಕನಂತೆ ಸಂರಕ್ಷಿಸುತ್ತಿದ್ದೆಯಲ್ಲ! ಇನ್ನು ಮೇಲೆ ನನ್ನನ್ನೂ, ದುಃಖಪಡುತ್ತಿರುವ ಈ ಪದ್ಮಾವತಿಯನ್ನೂ ಯಾರು ಸಂರಕ್ಷಿಸಬೇಕು ? ಈ ಬಾಲಕನಾದ ವಸುದಾನನ ಗತಿಯೇನು ? ರಾಜನೇ, ಅನಾಥರಾದ ನಮ್ಮನ್ನು ಸರ್ವಥಾ ಬಿಟ್ಟು ಹೋಗಬೇಡ ಕಂಡೆಯಾ ! ಹಾಯ್ ! ಹಾಯ್ !! ರಾಜನೆ, ನೀನು ಮೃತನಾದ ಮೇಲೆ ಈ ನಿನ್ನ ಮನೋಹರವಾದ ದೇಹವನ್ನು ಪ್ರಜ್ವಲಿಸುತ್ತಿರುವ ಅಗ್ನಿಯಲ್ಲಿ ಹ್ಯಾಗೆ ಹಾಕಲಿ ? ಇದಕ್ಕಾಗಿಯೇ ನನಗೆ ಪದ್ಮಾವತಿಯನ್ನು ಕೊಟ್ಟು ಮರಣನ್ನು ಹೊಂದುವೆಯಾ ? ಇಲ್ಲಿಂದ ನಾವು ಹೋಗುವ ಕಾಲಕ್ಕೆ ನೀನು ಬೇಡಬೇಡವೆಂದರೂ ಕೇಳದೆ ನಿನ್ನ ಮಾತನ್ನು ಮೀರಿ ನಾವು ಹೊರಟುಹೋದೆವು. ನಿನ್ನ ಮುಖವನ್ನು ನೋಡಿ ನನ್ನ ಕಣ್ಣುಗಳು ತೃಪ್ತಿಯನ್ನು ಹೊಂದಲಿಲ್ಲ. ಶ್ವಶುರನೇ, ಮಹಾಬುದ್ಧಿಶಾಲಿಯಾದ ಈ ತೋಂಡಮಾನರಾಜನು ನಿನ್ನ ದುಃಖದಿಂದ ಭೂಮಿಯಲ್ಲಿ ಹ್ಯಾಗೆ ಬಿದ್ದಿರುವನು ನೋಡು, ಬೇಗನೆ ಅವನನ್ನು ಸಮಾಧಾನಪಡಿಸು. ಈಗಲೇ ನೀನು ಹೋದರೆ ಮುಂದೆ ನಮ್ಮ ಗತಿಯೇನು ? ಎಂದು ನಾನಾಪ್ರಕಾರವಾಗಿ ಲೌಕಿಕ ರೀತಿಯಂತೆ

ಜನರಿಗೆ ವಿಡಂಬನವನ್ನು ತೋರಿಸುವದಕ್ಕಾಗಿ ದುಃಖಿಸುತ್ತಿರಲು, ಆತನ ದುಃಖದಿಂದ, ವೈರಾಗ್ಯಶಾಲಿಗಳಾದ ಅಗಸ್ತ್ಯ ಋಷಿಗಳಿಗೂ ಪರಮದುಃಖವು ಪ್ರಾಪ್ತವಾಗಿ ಅವರೂ ಶೋಕಮಾಡಹತ್ತಿದರು. ಅಗಸ್ತ್ಯ ಋಷಿಗಳು—"ರಾಜನೇ ಏಳು, ಯಾಕೆ ಮಲಗಿರುವೆ ? ಪದ್ಮಾವತಿಯಿಂದ ಸಹಿತನಾಗಿ ನಿನ್ನ ಜಾಮಾತನು ಬಂದಿರುವನು. ಆದ್ದರಿಂದ ಅವನನ್ನು ಎದುರ್ಗೊಂಡು ಕರೆತರುವದಕ್ಕೆ ಹೊರಡುವದಿಲ್ಲವೆ ? ಶ್ರೀನಿವಾಸನಿಗೆ ಭೋಜನವನ್ನು ಮಾಡಿಸಿ ಪಾರಿತೋಷಕವನ್ನು ಕೊಡುವದಿಲ್ಲವೆ ? ನಿನ್ನ ಪುತ್ರಿಯು ಗಜಗಳನ್ನೂ, ಅಶ್ವಗಳನ್ನೂ, ವಸ್ತ್ರಗಳನ್ನೂ ಬೇಡುತ್ತಾಳಲ್ಲ, ಶ್ರೀನಿವಾಸನ ಪ್ರೀತಿಗೋಸ್ಕರ ಆ ವಸ್ತುಗಳನ್ನು ಕೊಡು" ಎಂದು ಬೋಧಿಸುತ್ತಿದ್ದರು. ಹೀಗೆ ಎಲ್ಲರು ದುಃಖಪಡುತ್ತಿರಲು, ಆಕಾಶರಾಜನಿಗೆ ಸ್ವಲ್ಪ ಎಚ್ಚರಿಕೆ ಹುಟ್ಟಿ ಆತನು ಶ್ರೀನಿವಾಸನನ್ನು ಕಂಡು — ದೇವಾಧಿದೇವನಾದ ಶ್ರೀನಿವಾಸನೇ, ತೋಂಡಮಾನನನ್ನೂ ಪುತ್ರನಾದ ವಸುದಾನನನ್ನೂ ಸಂರಕ್ಷಿಸು, ಎಂದು ಹೇಳಿ ಆ ಉಭಯತರನ್ನು ಶ್ರೀನಿವಾಸನ ಕೈಯಲ್ಲಿ ಕೊಟ್ಟು, ತನ್ನ ಪತ್ನಿಗೆ— "ಭಾರ್ಯೆಯೇ, ನನ್ನನ್ನು ಅನುಸರಿಸಿ ನೀನೂ ಸ್ವರ್ಗಕ್ಕೆ ಬಾ" ಎಂದು ಹೇಳಿ, ಪ್ರಾಣಗಳನ್ನು ಬಿಟ್ಟು ದಿವ್ಯವಾದ ವಿಮಾನದಲ್ಲಿ ಕುಳಿತು ಸತ್ಯಲೋಕಕ್ಕೆ ಗಮಿಸಿದನು.

ಆ ಮೇಲೆ ಆಕಾಶರಾಜನ ಶವವನ್ನು ವಶಿಷ್ಠ, ಗೌತಮ, ಅತ್ರಿ, ಭರದ್ವಾಜರೆಂಬ ನಾಲ್ಕುಮಂದಿ ಋಷಿಗಳು ವಹಿಸಿಕೊಂಡು ಹೋಗಿ, ಚಿತಿಯಮೇಲಿಟ್ಟು ವಿಧಿಯುಕ್ತವಾದ ಮಂತ್ರಗಳಿಂದ ಅಗ್ನಿ ಸಂಸ್ಕಾರವನ್ನು ಮಾಡಿ ಸಮಸ್ತ ಪ್ರೇತಕಾರ್ಯಗಳನ್ನು ಮಾಡಿಸಿದರು. ಅದೇ ಚಿತೆಯಲ್ಲಿಯೇ ಆಕಾಶರಾಜನ ಪತ್ನಿಯಾದ ಧರಣೀದೇವಿಯು ಸಹಗಮನವನ್ನು ಮಾಡಿದಳು.

ಅನಂತರದಲ್ಲಿ ಹದಿನಾರನೇ ದಿವಸವು ಪ್ರಾಪ್ತವಾಗಲು, ಪುತ್ರನಾದ ವಸುದಾನನು ತಂದೆಯ ಮಾಸಿಕಗಳನ್ನು ಮಾಡಿ, ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ವಾಮದೇವ, ಪುಲಸ್ತ್ಯ, ವಾಲ್ಮೀಕಿ, ಜಮದಗ್ನಿ, ಭೃಗು, ಪರಾಶರ, ಯಾಜ್ಞವಲ್ಕ್ಯ, ಜಾಬಾಲಿ, ಶುನಃಶೇಫ, ಕೋಹಲ ಮೊದಲಾದ ಋಷಿಗಳಿಗೆ ಶ್ರೇಷ್ಠವಾದ ಅನ್ನದಿಂದ ಭೋಜನವನ್ನು ಮಾಡಿಸಿದನು. ಹೀಗೆ ಸಮಸ್ತ ಕರ್ಮಗಳು ಮುಗಿದ ಬಳಿಕ ಶ್ರೀನಿವಾಸನು ಪದ್ಮಾವತಿಯಿಂದ ಸಹಿತನಾಗಿ ಪುನಃ ಸ್ವಸ್ಥಳಕ್ಕೆ ಬಂದನು.

ಅತ್ತ, ಶ್ರೀನಿವಾಸನು ಹೋದಮೇಲೆ, ತೋಂಡಮಾನರಾಜನಿಗೂ, ವಸುದಾನನಿಗೂ ರಾಜ್ಯದ ಸಲುವಾಗಿ ಕಲಹವು ಪ್ರಾರಂಭವಾಯಿತು.— ಜ್ಯೇಷ್ಠಭ್ರಾತೃವು ಮೃತನಾದ ಮೇಲೆ ಕನಿಷ್ಠ ಭ್ರಾತೃವಾದ ನನಗೇ ರಾಜ್ಯಾಧಿಕಾರವು ಸಿಗಬೇಕೆಂದು ತೋಂಡಮಾನನು ಪ್ರತಿಪಾದಿಸಲಿಕ್ಕೆ ಹತ್ತಿದನು. ಪರಾಕ್ರಮವನ್ನು ಮಾಡಿ ತನ್ನ ತಂದೆಯು ಸಂಪಾದಿಸಿದ ರಾಜ್ಯವು ನನ್ನದೇ ಇರುತ್ತದೆಂದು ವಸುದಾನನು ಪ್ರತಿಪಾದಿಸಹತ್ತಿದನು. ಈ ಪ್ರಕಾರ ತೋಂಡಮಾನನಿಗೂ ವಸುದಾನನಿಗೂ ಕಲಹವು ಹುಟ್ಟಲು, ಕಡೆಯಲ್ಲಿ ಅವರು ತಮ್ಮತಮ್ಮೊಳಗೆ— "ಯುದ್ಧದಲ್ಲಿ ಯಾರು ಜಯವಂತರಾಗುವರೋ ಅವರೇ ಸಮಸ್ತ ರಾಜ್ಯಕ್ಕೆ ಅಧಿಕಾರಸ್ಥರು" ಎಂದು ಗೊತ್ತು ಮಾಡಿಕೊಂಡರು. ಜಯಾಪೇಕ್ಷಿಗಳಾದ ಆ ಉಭಯತರೂ ಸೈನ್ಯವನ್ನು ಕೂಡಿಸಿದರು. ತೋಂಡಮಾನನು ನಾನಾವಿಧವಾದ ದೇಶಗಳಿಂದ ಕಿರಾತರನ್ನೂ, ಯುದ್ಧದಲ್ಲಿ ದುರ್ಮದರಾದ ಕ್ಷತ್ರಿಯರನ್ನೂ ಕರೆಸಿದನು. ಈ ಪ್ರಕಾರ ತೋಂಡಮಾನನು ಎರಡಕ್ಷೋಹಿಣೀ ಸೈನ್ಯವನ್ನು ಕೂಡಿಸಿದನು. ಇತ್ತ ವಸುದಾನನಾದರೂ ಎರಡಕ್ಷೋಹಿಣೀ ದಳವನ್ನು ಕೂಡಿಸಿದನು. ತೋಂಡಮಾನನೂ, ವಸುದಾನನೂ ನಾರಾಯಣಪುರದ ದಕ್ಷಿಣದಿಕ್ಕಿನಲ್ಲಿ ರಣಭೂಮಿಯನ್ನು ಸಿದ್ಧಮಾಡಿ, ಶ್ರೀನಿವಾಸನ ಸಹಾಯವನ್ನು ಬೇಡುವದಕ್ಕಾಗಿ ಇಬ್ಬರೂ ಹೋದರು.

ಆಗ ಶ್ರೀನಿವಾಸನು ಬಂದಿರುವ ತೋಂಡಮಾನನನ್ನೂ, ವಸುದಾನನನ್ನೂ ಕಂಡು, ಅತ್ಯಾದರದಿಂದ ಅವರಿಬ್ಬರನ್ನೂ ಆಲಿಂಗಿಸಿ, ಯೋಗ್ಯವಾದ ಆಸನಗಳನ್ನು ಕೊಟ್ಟು ಕೂಡ್ರಿಸಿದನು. ಆನಂತರದಲ್ಲಿ ವಸುದಾನನಿಗೆ–ಗುರುಪ್ರಿಯನಾದ ವಿಷ್ವಕ್ಸೇನನೇ, ನೀನು ಬಂದದ್ದು ನನ್ನ ದರ್ಶನಾರ್ಥವಾಗಿಯೋ ? ನಿನ್ನ ಭಗಿನಿಯಾದ ಪದ್ಮಾವತಿಯನ್ನು ನೋಡುವದರ ಸಲುವಾಗಿಯೋ ? ಎಲೈ ಆರ್ಯನಾದ ತೋಂಡಮಾನನೇ, ನೀನು ಈಗ ಅಕಸ್ಮಾತ್ತಾಗಿ ಯಾಕೆ ಬಂದೆ ? ಅದರ ಕಾರಣವನ್ನು ಹೇಳೆನಲು, ಆಗ ವಸುದಾನನು–ಶ್ರೀನಿವಾಸನೇ, ಈ ಕನಿಷ್ಠ ಜನಕನಾದ ತೋಂಡಮಾನನಿಗೂ, ನನಗೂ ರಾಜ್ಯದ ಸಲುವಾಗಿ ಯುದ್ಧಪ್ರಸಕ್ತಿಯುಂಟಾಗಿರುತ್ತದೆ; ಆದ್ದರಿಂದ ನೀನು ನನಗೆ ಸಹಾಯವನ್ನು ಮಾಡು. ನಾನು ಬಲಹೀನನೂ, ಬಾಲಕನೂ, ಸಹಾಯರಹಿತನೂ ಇರುವೆನು; ಆದ್ದರಿಂದ ಸಹಾಯವನ್ನು ಬೇಡಲಿಕ್ಕೆ ಯೋಗ್ಯನಾದ ನನಗೆ ನೀನು ಅನುಕೂಲನಾಗು, ಎಂದು ಹೇಳಿಕೊಂಡನು.

ಅನಂತರದಲ್ಲಿ ತೋಂಡಮಾನನು—ಶ್ರೀನಿವಾಸನೇ, ನೀನು ಜಗದೀಶನು. ಇದರಲ್ಲಿ ಯೋಗ್ಯವಾದ ಕಾರ್ಯವು ಯಾವದೋ ಅದನ್ನು ಮಾಡು, ನಾನು ವಿಶೇಷ ವಿನ್ನೇನು ಹೇಳಲಿ? ಎಂದು ನುಡಿದನು. ಅವರಿಬ್ಬರ ಮಾತುಗಳನ್ನು ಕೇಳಿ, ಶ್ರೀನಿವಾಸನು—"ರಾಜಶ್ರೇಷ್ಠನಾದ ತೋಂಡಮಾನನೇ, ನಾನೊಬ್ಬನೇ ಇದ್ದು ಉಭಯತರೂ ನನ್ನ ಸಹಾಯುವನ್ನು ಅಪೇಕ್ಷಿಸುವಿರಲ್ಲ! ಇದಕ್ಕೆ ಹ್ಯಾಗೆ ಮಾಡತಕ್ಕದ್ದು!" ಎಂದು ನುಡಿದು, ಕೂಡಲೆ ಅಂತಃಪುರಕ್ಕೆ ಹೋಗಿ ವಿಶಾಲಾಕ್ಷಿಯಾದ ಪದ್ಮಾವತಿಗೆ—"ಮಂಗಳಾಂಗಿಯೇ, ಈಗ ನನಗೆ ಅತ್ಯಂತ ಕಷ್ಟತರವಾದ ಪ್ರಸಂಗವು ಬಂದೊದಗಿರುವದು; ನಿನ್ನ ತಮ್ಮನೂ, ನಿಮ್ಮ ಕನಿಷ್ಠ ಜನಕನಾದ ತೊಂಡಮಾನನೂ ರಾಜ್ಯದ ಸಲುವಾಗಿ ಕಲಹವನ್ನು ಮಾಡಿ, ಉಭಯತರೂ ನನ್ನ ಸಹಾಯವನ್ನು ಬೇಡಲಿಕ್ಕೆ ಬಂದಿರುವರು; ಆದರೆ ಆ ಉಭಯತರಲ್ಲಿ ನಾನು ಯಾರಿಗೆ ಸಹಾಯ ಮಾಡಬೇಕೆಂಬದು ತಿಳಿಯಲೊಲ್ಲದು; ಆದ್ದರಿಂದ ಪದ್ಮಾವತಿಯೇ, ಈಗ ನನಗೆ ಯೋಗ್ಯವಾದ ಆಲೋಚನೆಯನ್ನು ನೀನೇ ಹೇಳು" ಎಂದನು. ಆಗ ಪದ್ಮಾವತಿಯು—ಪತಿಯೇ, ಧರ್ಮಾಧರ್ಮಗಳು ಸರ್ವಕಾಲದಲ್ಲಿಯೂ ಅವರವರನ್ನೇ ಅವಲಂಬಿಸಿರುವವು. ಇದಲ್ಲದೆ ಬ್ರಹ್ಮಾದಿದೇವತೆಗಳು ಸಹ ಧರ್ಮವೇ ಶ್ರೇಷ್ಠವೆಂದು ಹೇಳುವರು, ನೀನಾದರೂ ಧರ್ಮಕ್ಕೆ ಆಧಾರಭೂತನಾದವನು. ಅಂದಮೇಲೆ ನೀನು ಇದರಲ್ಲಿ ಯಾವದು ಧರ್ಮಕಾರ್ಯವೋ, ಅದನ್ನೇ ಮಾಡತಕ್ಕದ್ದು. ವಸುದಾನನು ಬಾಲಕನು, ಮಾತಾ-ಪಿತೃಗಳಿಲ್ಲದವನು, ಧನರಹಿತನು, ಶಕ್ತಿಹೀನನು; ಆದ್ದರಿಂದ ದೇವಾಧಿದೇವನೇ, ನೀನು ವಸುದಾನನ ಸಂರಕ್ಷಣವನ್ನು ಮಾಡುವದು ಯೋಗ್ಯವೆಂದು ನನಗೆ ತಿಳಿಯುವದು; ತೋಂಡಮಾನನು ಪರಾಕ್ರಮಿಯು, ಧನವಂತನು, ವಸುದಾನನಿಗೆ ದೊರೆಯುವ ನನ್ನ ತಂದೆಯ ರಾಜ್ಯವನ್ನು ತಾನು ತೆಗೆದುಕೊಳ್ಳಲಿಚ್ಛಿಸುವವನು. ತೋಂಡಮಾನನು ಸರ್ವಧರ್ಮವನ್ನು ಬಲ್ಲವನಿದ್ದರೂ ಈ ಸಮಯದಲ್ಲಿ ಸಣ್ಣವನಾದ ವಸುದಾನನ ಅನ್ಯಾಯ ಮಾಡಬೇಕೆಂದು ಯೋಚಿಸಿರುವನು; ಆದ್ದರಿಂದ ಇದರಲ್ಲಿ ನಿನಗೆ ಯೋಗ್ಯವಾದದ್ದನ್ನು ಮಾಡು" ಎಂದಳು.

ಪದ್ಮಾವತಿಯ ವಚನವನ್ನು ಕೇಳಿ, ಶ್ರೀನಿವಾಸನು ತನ್ನ ಮನಸ್ಸಿನಲ್ಲಿ—ಬಾಲಕನಾದ ವಸುದಾನನಿಗೇ ಸಹಾಯ ಮಾಡುವದು ಯೋಗ್ಯವೆಂದು ನಿಶ್ಚಯಿಸಿ, ಹೊರಗೆ ಬಂದು ತೋಂಡಮಾನನಿಗೆ—ತೋಂಡಮಾನನೇ, ನೀವಿಬ್ಬರೂ ನನಗೆ

ಸರಿಯಾಗಿರುವಿರಿ; ಆದ್ದರಿಂದ ನಿಮ್ಮಿಬ್ಬರಿಗೂ ನಾನು ಸಹಾಯ ಮಾಡುವದು ಯೋಗ್ಯವು; ಈ ನನ್ನ ಆಯುಧಗಳಾದ ಶಂಖಚಕ್ರಗಳನ್ನು ನೀನು ತೆಗೆದು ಕೊಳ್ಳು; ವಸುದಾನನ ಕಡೆಗೆ ನಾನೇ ಸ್ವತಃ ಇರುವೆನು; ಎಂದು ಆ ಉಭಯತ ರಿಗೂ ಸಮಾಧಾನವಾಗುವಂತೆ ಹೇಳಿ, ತೋಂಡಮಾನನಿಗೆ ತನ್ನ ಆಯುಧಗಳಾದ ಶಂಖಚಕ್ರಗಳನ್ನು ಕೊಟ್ಟನು. ಯುದ್ಧದಲ್ಲಿ ಕುಶಲನಾದ ಶ್ರೀನಿವಾಸನು, ಉಚ್ಚೈಶ್ರವಕ್ಕೆ ಸರಿಯಾದ ಒಂದು ಕುದುರೆಯನ್ನು ಹತ್ತಿಕೊಂಡು, ಶ್ಯಾಲಕನಾದ ವಸುದಾನನೊಡನೆ ಸಹಿತನಾಗಿ ನಾರಾಯಣಪುರಕ್ಕೆ ಹೋದನು.

ಹಿಂದಕ್ಕೆ ಕೌರವ ಪಾಂಡವರಿಗೆ ಹ್ಯಾಗೆ ಯುದ್ಧವಾಯಿತೋ, ಹಾಗೆ ತೋಂಡಮಾನನಿಗೂ ವಸುದಾನನಿಗೂ ಯುದ್ಧವಾಯಿತು; ಚೈತ್ರಶುದ್ಧ ದಶ ಮಿಯ ದಿವಸ ಉಭಯತರು ತಮ್ಮ ತಮ್ಮ ಸೈನ್ಯಗಳನ್ನು ರಣರಂಗದಲ್ಲಿ ತಂದು ನಿಲ್ಲಿಸಿ, ಅಲ್ಲಿರುವ ಮಹಾ ಘೋರವಾದ ರಣಸ್ತಂಭಕ್ಕೆ ಬಲಿಕೊಟ್ಟು ಯುದ್ಧಕ್ಕೆ ಪ್ರಾರಂಭ ಮಾಡಿದರು. ಆ ಯುದ್ಧಭೂಮಿಯು, ಶೂರರು ಮಾಡುತ್ತಿರುವ ಸಿಂಹನಾದಾದಿ ಧ್ವನಿಗಳಿಂದಲೂ, ಭೇರಿ, ಶಂಖ, ದುಂದುಭಿ ಮೊದಲಾದ ವಾದ್ಯ ಘೋಷಗಳಿಂದಲೂ, ಶಸ್ತ್ರಾಸ್ತ್ರಗಳ ಖಣಖಣಾಟಗಳಿಂದಲೂ, ಗಜಾಶ್ವಗಳ ಮಹಾ ಧ್ವನಿಗಳಿಂದಲೂ ಪೂರ್ಣವಾಯಿತು. ಆ ಸಮಯದಲ್ಲಿ ಪದ್ಮವ್ಯೂಹ;-ಗೃಧ್ರ ವ್ಯೂಹಗಳನ್ನು ಹೂಡುತ್ತಿರುವ ಜಗತ್ಪತಿಯಾದ ಶ್ರೀನಿವಾಸನು ಉಭಯ ಸೈನ್ಯ ಮಧ್ಯದಲ್ಲಿ ಶೋಭಿಸುತ್ತಿದ್ದನು. ಆಗ ಯುದ್ಧದಲ್ಲಿ ರಾಜಪುತ್ರನಾದ ವಿಷ್ವಕ್ಸೇನನು ತೋಂಡಮಾನನನ್ನು ಹತ್ತು ಬಾಣಗಳಿಂದ ವಕ್ಷಸ್ಥಳಕ್ಕೆ ಹೊಡೆಯಲು, ತೋಂಡ ಮಾನನಾದರೂ ಕೋಪಿಷ್ಠನಾಗಿ ಇಪ್ಪತ್ತು ಬಾಣಗಳಿಂದ ಆವನನ್ನು ಹೊಡೆದು ನೋಯಿಸಿದನು. ಮತ್ತು ಸರ್ವಜನರು ಆಶ್ಚರ್ಯಪಡುವಂತೆ ಅರ್ಧಚಂದ್ರಾ ಕೃತಿಯಾದ ಐದು ಸಹಸ್ರ ಬಾಣಗಳಿಂದ ಶ್ರೀನಿವಾಸನ ವಕ್ಷಸ್ಥಳಕ್ಕೆ ಎಸೆದನು. ಆ ಶೂರನು ಮತ್ತೆ ಹತ್ತು ಬಾಣಗಳಿಂದ ವಸುದಾನನನ್ನು ಹೊಡೆದನು. ನಾಲ್ಕು ಬಾಣಗಳಿಂದ ಆತನ ನಾಲ್ಕು ಕುದುರೆಗಳನ್ನೂ, ಒಂದು ಬಾಣದಿಂದ ಸಾರಥಿ ಯನ್ನೂ, ಮತ್ತೊಂದು ಬಾಣದಿಂದ ಆತನ ಛತ್ರವನ್ನೂ, ಮತ್ತೆ ಐದು ಬಾಣಗ ಳಿಂದ ಆವನ ರಥವನ್ನೂ ಭಗ್ನಮಾಡಿದನು. ಆಗ ವಸುದಾನನು ತನ್ನ ಅವಸ್ಥೆ ಯನ್ನು ನೋಡಿ, ಯುದ್ಧಭೂಮಿಯಿಂದ ಹೊರಟು ಹೋದನು. ಆ ಮೇಲೆ ತೋಂಡಮಾನನು ಕುದುರೆಯನ್ನು ಹತ್ತಿಕೊಂಡು ಸಂಚರಿಸುತ್ತಿರುವ ಶ್ರೀನಿವಾ

ಸನ ವಕ್ಷಸ್ಥಳಕ್ಕೆ ಚಕ್ರದಿಂದೆಸೆದನು. ಅದರಿಂದ ಶ್ರೀನಿವಾಸನು ಮೂರ್ಛಿತ ನಾಗಿ ಭೂಮಿಯಲ್ಲಿ ಬಿದ್ದನು. ತೋಂಡಮಾನನ ಅದೇ ಬಾಣದ ಪೆಟ್ಟಿನಿಂದ ಕುದುರೆಯು ಸಹ ಭೂಮಿಯಲ್ಲಿ ಬಿದ್ದು ಪ್ರಾಣವನ್ನು ಬಿಟ್ಟಿತು. ಈ ಪ್ರಕಾರ ಶ್ರೀನಿವಾಸನು ವಿಡಂಬನವನ್ನು ಮಾಡುವವನಾಗಿ ಮನುಷ್ಯರಂತೆ ಮೂರ್ಛೆ ಹೊಂದಿ ಭೂಮಿಯಲ್ಲಿ ಬಿದ್ದನು. ಆ ಸಮಯದಲ್ಲಿ ಪ್ರಾಕಾರವನ್ನೇರಿ ರಣರಂಗ ವನ್ನು ನೋಡುತ್ತಿದ್ದ ಪದ್ಮಾವತಿಯು, ತನ್ನ ಪತಿಯು ಮೂರ್ಛಿತನಾಗಿ ಬಿದ್ದಿ ದ್ದನ್ನು ಕಂಡು, ಅಗಸ್ತ್ಯಋಷಿಗೆ—ಅಗಸ್ತ್ಯಋಷಿಯೇ, ರಣರಂಗದಲ್ಲಿ ನನ್ನ ಪತಿಯು ಮೂರ್ಛಿತನಾಗಿ ಬಿದ್ದಿರುವನು; ಆದ್ದರಿಂದ ನನ್ನ ಮನಸ್ಸು ಭ್ರಾಂತ ವಾಗಿರುತ್ತದೆ; ಇನ್ನು ಮುಂದೆ ಹ್ಯಾಗೆ ಮಾಡಬೇಕು ? ಎಂದು ಕೇಳಲು, ಆಗ ಕುಂಭಸಂಭವನಾದ ಅಗಸ್ತ್ಯನು—ಪದ್ಮಾವತಿಯೇ, ದೇಶಕಾಲಗಳನ್ನು ಅತಿಕ್ರ ಮಿಸಿ ಯಾವ ಮನುಷ್ಯನು ಕರ್ಮವನ್ನು ಮಾಡುವನೋ, ಅವನು ಸುಖವನ್ನು ಹೊಂದುವದಿಲ್ಲ. ಇದಲ್ಲದೆ ಈ ಲೋಕದಲ್ಲಿ ತನ್ನ ಕಾರ್ಯದಲ್ಲಿಯೇ ಮನುಷ್ಯನು ಆಸಕ್ತನಾಗಿರುವನಲ್ಲದೆ, ಪರಕಾರ್ಯಕ್ಕೆ ಯಾವನೂ ಹಣಕಿ ಸಹ ನೋಡುವ ದಿಲ್ಲ. ಇಕೋ ನೋಡು ! ರಣರಂಗದಲ್ಲಿ ಬಿದ್ದಿರುವ ನಿನ್ನ ಪತಿಯನ್ನು ಒಬ್ಬರೂ ನೋಡಲೊಲ್ಲರು ! ರಣೋತ್ಸಾಹದಲ್ಲಿ ನಿಮಗ್ನರಾದ ಶೂರರು ತಮ್ಮ ತಮ್ಮ ಕೌತುಕದಲ್ಲಿಯೇ ಇರುವರು. ನಿನ್ನ ಪತಿಯ ಅವಸ್ಥೆಯನ್ನು ನೋಡಿ ಒಬ್ಬನಾ ದರೂ ಚಿಂತಿಸಲೊಲ್ಲನು; ಆದ್ದರಿಂದ ನಿನ್ನ ಪತಿಯ ಹಿತಚಿಂತಕಳು ನೀನೇ ಆಗಿರು ವವರಿಂದ, ಬೇಗನೆ ರಣರಂಗಕ್ಕೆ ಹೋಗಿ ಅವನನ್ನು ರಥದಲ್ಲಿ ಕೂಡ್ರಿಸಿಕೊಂಡು ಬಾ. ಆಕಾಶರಾಜನ ಪುತ್ರಿಯೇ, ಸ್ತ್ರೀಯರಿಗೆ ಪತಿಭಕ್ತಿಯೇ ಶ್ರೇಷ್ಠವಾದ ಧರ್ಮವು; ಆದ್ದರಿಂದ ಪತಿಯ ಹಿತವನ್ನು ಮಾಡಲಿಕ್ಕೆ ಯತ್ನಿಸು; ಇದಲ್ಲದೆ ಇನ್ನು ಮುಂದ ಯುದ್ಧವನ್ನು ಬಿಡಿಸಿ, ಆ ಉಭಯತರಿಗೂ ಸಂಧಿಯನ್ನು ಮಾಡಿ ಸುವದು ನನಗೆ ಯೋಗ್ಯವಾಗಿ ತೋರುತ್ತದೆ; ಕಲಹದಿಂದ ಬಹಳ ಅನರ್ಥಗ ಳಾಗುವವು. ತೋಂಡಮಾನನು, ವಸುದಾನನು ಇವರಿಬ್ಬರೂ ರಾಜ್ಯಕ್ಕೆ ಬಾಧ್ಯ ರಾಗಿರುವರು; ಎಂದು ಹೇಳಿದನು.

ಆ ಮಾತಿಗೆ ಒಪ್ಪಿ ಪದ್ಮಾವತಿಯು ಅಗಸ್ತ್ಯಮುನಿಯ ಕೂಡ ಆಂದೋಲ ದಲ್ಲಿ ಕುಳಿತುಕೊಂಡು ರಣರಂಗಕ್ಕೆ ಬಂದು, ಮೂರ್ಛಿತನಾಗಿ ಬಿದ್ದಿರುವ

ಶ್ರೀನಿವಾಸನನ್ನು ಎಚ್ಚರಿಸಿ, ಶೀತಳೋದಕದಿಂದ ಮಾರ್ಜನಮಾಡಿ, ಬೀಸಣಿಕೆ ಯಿಂದ ಗಾಳಿಹಾಕಿ ಶೈತ್ಯೋಪಚಾರಗಳನ್ನು ಮಾಡುತ್ತ-ಪತಿಯೇ, ಮೂರ್ಛೆ ಯನ್ನು ಬಿಟ್ಟು ರಣಭೂಮಿಯಿಂದ ಏಳು ಎನಲು, ಶ್ರೀನಿವಾಸನು ಒಂದು ಮುಹೂರ್ತದವರೆಗೆ ಲೋಕಕ್ಕೆ ವಿಡಂಬನವನ್ನು ತೋರಿಸುವದಕ್ಕಾಗಿ ಸುಮ್ಮನೆ ಇದ್ದು, ಅನಂತರ ಎಚ್ಚತ್ತವನಂತೆ ತೋರಿಸಿ ಎದ್ದು, ದಶದಿಕ್ಕುಗಳನ್ನು ನೋಡುತ್ತ ತನ್ನ ಮುಂದೆ ನಿಂತಿರುವ ಪದ್ಮಾವತಿಯನ್ನು ನೋಡಿ, ಹುಬ್ಬುಗಳನ್ನು ಗಂಟು ಹಾಕಿ, ಮಹಾಕೋಪದಿಂದ-ಪದ್ಮಾವತಿಯೇ, ಈ ಭಯಂಕರವಾದ ರಣರಂಗ ದಲ್ಲಿ ಸ್ತ್ರೀಯರ ಕೆಲಸವೇನದೆ ? ಮುನಿಶ್ರೇಷ್ಠನಾದ ಅಗಸ್ತ್ಯನೇ, ಬೇಗನೆ ಈಕೆ ಯನ್ನು ಕರೆದುಕೊಂಡು ಹೋಗು. ಎಂದು ಹೇಳಿದನು. ಆಗ ಆ ಋಷಿಯು- ಶ್ರೀನಿವಾಸನೇ, ಸಿಟ್ಟಾಗಬೇಡ; ಈ ಪದ್ಮಾವತಿಯು, ನೀನು ರಣರಂಗದಲ್ಲಿ ಮೂರ್ಛೆಹೊಂದಿದ್ದನ್ನೂ, ತನ್ನ ತಮ್ಮನಿಗೆ ಪರಾಜಯವಾದದ್ದನ್ನೂ ನೋಡಿ, ಶೋಕಪಡುತ್ತ ನನ್ನನ್ನು ಕರೆದುಕೊಂಡು ಇಲ್ಲಿಗೆ ಬಂದಿರುವಳು; ತೋಂಡ ಮಾನನಿಗೂ, ವಸುದಾನನಿಗೂ ನಡೆದ ಕಲಹವನ್ನು ಬಿಡಿಸಿ, ಆ ಉಭಯತರಿಗೂ ಸಂಧಿಯನ್ನು ಮಾಡಬೇಕೆಂತಲೂ ಬಂದಿರುವಳು, ಆದ್ದರಿಂದ ಆ ಉಭಯತರನ್ನು ಕರೆಸಿ, ಅವರಿಬ್ಬರನ್ನು ಸಮಾಧಾನಪಡಿಸು ಎಂದು ಹೇಳಲು ಶ್ರೀನಿವಾಸನು ಅಗಸ್ತ್ಯಋಷಿಯ ವಚನವನ್ನು ಕೇಳಿ ಸ್ವಲ್ಪ ಶಾಂತನಾಗಿ ಆ ಋಷಿಗೆ-ಬುದ್ಧಿ ಶಾಲಿಯಾದ ಅಗಸ್ತ್ಯನೇ, ಸ್ತ್ರೀಯರು ಸಂಗ್ರಾಮದಲ್ಲಿ ಬರುವದು ಯೋಗ್ಯವಲ್ಲ; ಇದಂತಿರಲಿ! ಯುದ್ಧವನ್ನು ಬಿಡಿಸಿ, ಸಮಾಧಾನ ಮಾಡಬೇಕೆಂದು ಹೇಳುವೆ ಯಲ್ಲ, ಇದೆಂದಿಗೂ ಆಗದಮಾತು; ಯಾಕಂದರೆ-ಈಗ ನನಗೆ ಬಂದ ಕ್ರೋಧ ದಿಂದ ತೋಂಡಮಾನನನ್ನೂ ಆತನ ಪುತ್ರನಾದ ಶ್ರೀನಿವಾಸನನ್ನೂ ಸಂಹಾರಮಾಡಿ ವಸುದಾನನಿಗೆ ರಾಜ್ಯವನ್ನು ಕೊಡುವ ನಿಶ್ಚಯವನ್ನು ಮಾಡಿರುವೆನು, ಎಂದು ಹೇಳಿದನು. ಆಗ ಪದ್ಮಾವತಿಯು ಭಯದಿಂದ ಶ್ರೀನಿವಾಸನಿಗೆ ಸಾಷ್ಟಾಂಗ ನಮ ಸ್ಕಾರವನ್ನು ಮಾಡಿ, ಕೈಗಳನ್ನು ಜೋಡಿಸಿಕೊಂಡು-ಭಕ್ತರಿಗೆ ಅಭಯಂಕರನಾದ ಶ್ರೀನಿವಾಸನೇ, ನಿನ್ನ ಕೋಪವನ್ನು ಬಿಟ್ಟು, ಶಾಂತನಾಗಿ ಕಮಲಕ್ಕೆ ಸರಿಯಾದ ನಿನ್ನ ನೇತ್ರಗಳಿಂದ ನೋಡು. ಲೋಕಕ್ಕೇ ನಾಶಕರವಾದ ಈ ಯುದ್ಧದಿಂದ ಪ್ರಯೋಜನವೇನು ? ತೋಂಡಮಾನನು, ವಸುದಾನನು ಈ ಉಭಯತರೂ, ನಮ್ಮ ತಂದೆಯ ರಾಜ್ಯಕ್ಕೆ ಬಾಧ್ಯಸ್ಥರು; ಆದ್ದರಿಂದ ಅವರಮೇಲೆ ದಯವನ್ನು

ಮಾಡಿ, ಆ ಉಭಯತರಿಗೂ ರಾಜ್ಯಕೋಶಗಳನ್ನು ಸರಿಯಾಗಿ ವಿಭಾಗ ಮಾಡಿ ಕೊಡು, ಅದರಿಂದ ಸರ್ವರಿಗೂ ಕ್ಷೇಮವಾಗುವದು; ಮತ್ತು ತೋಂಡಮಾನ ರಾಜನಿಗಾದರೂ ಕ್ಷೇಮವಾಗಲಿ, ಎಂದು ಹೇಳಿಕೊಂಡಳು. ಅದಕ್ಕೆ ಶ್ರೀನಿವಾಸನು-ಪ್ರಿಯೇ, ನೀನು ಹೇಳುವದು ಯುಕ್ತವಾದದ್ದಲ್ಲ, ನಿನಗೆ ಕ್ಷತ್ರಿಯ ಧರ್ಮವು ತಿಳಿಯದು. ಆದ್ದರಿಂದ ನೀನು ಇಲ್ಲಿಂದ ಹೊರಟುಹೋಗು. ಇವತ್ತಿನ ರಣರಂಗದಲ್ಲಿ ಪುತ್ರಸಹಿತನಾದ ತೋಂಡಮಾನನ ಶಿರಸ್ಸನ್ನು ಧರಣಿಗೆ ಇಳಿಸುತ್ತೇನೆ; ಮತ್ತು ನನ್ನ ಶ್ಯಾಲಕನಾದ ವಸುದಾನನಿಗೆ ನನ್ನ ಪ್ರಾಣವನ್ನಾದರೂ ಕೊಡುತ್ತೇನೆ. ಈ ವಿಷಯದಲ್ಲಿ ನೀನು ಸಂಶಯವನ್ನು ಮಾಡಬೇಡ, ಎಂದು ಖಂಡಿತವಾಗಿ ಹೇಳಿದನು.

ಆಗ ಪದ್ಮಾವತಿಯು ತನ್ನ ಪತಿಯ ಕೋಪಕ್ಕೆ ಗದಗದನೆ ನಡುಗಿ, ಅಗಸ್ತ್ಯರಿಗೆ–"ಸ್ವಾಮಿ ಅಗಸ್ತ್ಯ ಋಷಿಗಳೇ, ನೀವೇ ಹ್ಯಾಗಾದರೂ ಮಾಡಿ ನನ್ನ ಪತಿಯ ಕೋಪವನ್ನು ಶಾಂತಪಡಿಸಿ ಅವರನ್ನು ರಣರಂಗದಿಂದ ತಿರುಗಿಸಬೇಕು" ಎಂದು ಬೇಡಿಕೊಂಡಳು. ಆಗ ಅಗಸ್ತ್ಯ ಋಷಿಗಳು ಶ್ರೀನಿವಾಸನಿಗೆ–"ಶ್ರೀನಿವಾಸನೇ, ನಿನ್ನ ಕೋಪವನ್ನು ಶಾಂತಮಾಡು; ಉಭಯತರು ನಿನಗೆ ಸರಿಯಾದ ಭಕ್ತರಿರುವರು; ಇದಲ್ಲದೆ ಪದ್ಮಾವತಿಯಾದರೂ ತನ್ನ ಕನಿಷ್ಠ ಜನಕನಾದ ತೋಂಡಮಾನನಿಗೆ ಅಹಿತವನ್ನು ಬಯಸುವದಿಲ್ಲ; ಆದ್ದರಿಂದ ಆ ಉಭಯತರನ್ನು ಕರೆಸಿ, ಸಮಾಧಾನವನ್ನು ಮಾಡಿ, ಅವರವರಿಗೆ ರಾಜ್ಯಕೋಶಗಳನ್ನು ಸರಿಯಾಗಿ ಕೊಡು" ಎಂದು ಹೇಳಿದರು. ಶ್ರೀನಿವಾಸನು ಆ ಮಾತಿಗೆ ಒಪ್ಪಿ, ತೋಂಡಮಾನನನ್ನೂ ವಸುದಾನನನ್ನೂ ಕರೆಕಳುಹಿ, ತೋಂಡಮಾನನಿಗೆ– "ರಾಜನೇ, ನಿನ್ನ ಮನಸ್ಸಿನೊಳಗಿರುವ ಅಭಿಪ್ರಾಯವನ್ನು ಹೇಳು" ಎನಲು ತೋಂಡಮಾನನು–"ಶ್ರೀನಿವಾಸನೇ; ನೀನು ನಮಗೆ ಗತಿಪ್ರದಾಯಕನು, ನೀನು ಹೇಳಿದಂತೆ ಕೇಳುವದೇ ನಮ್ಮ ಧರ್ಮವು" ಎಂದು ನುಡಿದನು. ಆಗ ವಸುದಾನನಿಗೆ–ಶ್ಯಾಲಕನೇ, ಈಗ ನಿನ್ನ ಭಗನಿಯಾದ ಪದ್ಮಾವತಿಯು. ಲೋಕಕ್ಕೆ ನಾಶಕರವಾದ ಯುದ್ಧವನ್ನು ಸಾಕುಮಾಡಿ, ನಿನ್ನ ಕನಿಷ್ಠ ಜನಕನಾದ ತೋಂಡಮಾನನ ಸಂಗಡ ಸಂಧಿಯನ್ನು ಮಾಡಬೇಕೆಂದು ಇಚ್ಛಿಸುತ್ತಾಳೆ, ಆದಕಾರಣ ನಿನ್ನ ಮನಸಿನಲ್ಲಿರುವ ಅಭಿಪ್ರಾಯವನ್ನು ತಿಳಿಸು" ಎನಲು, ವಸುದಾನನು— ‘ಶ್ರೀನಿವಾಸನೇ, ನಾವು ಸರ್ವಕಾಲದಲ್ಲಿಯೂ ನಿನ್ನ ಶಾಸನದಂತೆಯೇ ನಡೆದು

ಕೊಳ್ಳುತ್ತೇವೆ; ಆದ್ದರಿಂದ ನಿನ್ನ ಇಚ್ಛೆಯು ಹ್ಯಾಗಿರುವದೋ ಅದರಂತೆ ಮಾಡು” ಎಂದು ಹೇಳಲು, ಶ್ರೀನಿವಾಸನು ಆ ಉಭಯತರ ಅಭಿಪ್ರಾಯಗಳನ್ನು ತಿಳಿದು ಕೊಂಡು, ಅವರಿಬ್ಬರಿಗೂ ಸಂಧಿಯನ್ನು ಮಾಡಿಸಿದನು. ರಥ, ಗಜ, ಅಶ್ವ ಸಹಿತವಾದ ರಾಜ್ಯವನ್ನೂ, ಕೋಶವನ್ನೂ, ದುರ್ಗಗಳನ್ನೂ, ನಗರಗಳನ್ನೂ ಸರಿಯಾಗಿ ಎರಡು ಭಾಗಗಳನ್ನು ಮಾಡಿಕೊಟ್ಟನು. ಹಾಗು ತೋಂಡಮಾನ–ವಸುದಾನರಿಗೆ “ನಿಮ್ಮ ಸಲುವಾಗಿ ವ್ಯರ್ಥವಾಗಿ ಮರಣವನ್ನಿಚ್ಛಿಸಿದ ನನಗೆ ನಿಮ್ಮ ರಾಜ್ಯದ ಹದಿನಾರನೇ ಭಾಗವನ್ನು ಪದ್ಮಾವತಿಯ ಸಲುವಾಗಿಯೂ, ನನ್ನ ಸಲುವಾಗಿಯೂ ಕೊಡತಕ್ಕದ್ದು” ಎಂದು ಹೇಳಿದನು. ಅವರು ಸಂತುಷ್ಟರಾಗಿ ಶ್ರೀನಿವಾಸನಿಗೆ ೩೨ ಗ್ರಾಮಗಳನ್ನು ಪಾರಿತೋಷಕವಾಗಿ ಕೊಟ್ಟರು. ಆ ಮೇಲೆ ಶ್ರೀನಿವಾಸನು ತೋಂಡದೇಶದಲ್ಲಿ ತೋಂಡಮಾನನನ್ನು ಸಿಂಹಾಸನದಲ್ಲಿ ಸ್ಥಾಪಿಸಿದನು. ನಾರಾಯಣಪುರದ ಸಿಂಹಾಸನದಮೇಲೆ ವಸುದಾನನನ್ನು ಸ್ಥಾಪಿಸಿದನು ಅನಂತರ ತೋಂಡಮಾನನ ಗೃಹದಲ್ಲಿಯೂ, ವಸುದಾನನ ಗೃಹದಲ್ಲಿಯೂ ಭೋಜನಗಳನ್ನು ಮಾಡಿ, ತನ್ನ ಗೃಹದಲ್ಲಿ ಅವರಿಬ್ಬರಿಗೂ ಭೋಜನ ಮಾಡಿಸಿ, ಶುದ್ಧಾಂತಃಕರಣವುಳ್ಳವನಾಗಿ, ಅವರಿಬ್ಬರ ಅಪ್ಪಣೆಯನ್ನು ಪಡಕೊಂಡು ಪದ್ಮಾವತಿಯಿಂದ ಸಹಿತನಾಗಿ ಹೊರಟು ಅಗಸ್ತ್ಯಾಶ್ರಮಕ್ಕೆ ಬಂದು, ಸಂತೋಷದಿಂದ ಇದ್ದನು. ಜನಕರಾಜನೆ, ಈ ಪುಣ್ಯಕರವಾದ ಆಖ್ಯಾನವನ್ನು ಯಾರು ಹೇಳುವರೋ, ಅಥವಾ ಯಾರು ಕೇಳುವರೋ, ಅವರಿಗೆ ಶ್ರೀನಿವಾಸನು ಕಲ್ಯಾಣವನ್ನು ಮಾಡುವನು.

॥ ಇತಿ ಶ್ರೀಭವಿಷ್ಯೋತ್ತರ ಪುರಾಣದಲ್ಲಿ ಶ್ರೀವೇಂಕಟೇಶ ಮಾಹಾತ್ಮ್ಯದಲ್ಲಿ “ತೋಂಡಮಾನ ಯುದ್ಧಪ್ರಶಂಸನ”ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು. ॥

---

## ೧೪ನೆಯ ಅಧ್ಯಾಯ

ಜನಕರಾಜನು ಕೇಳುತ್ತಾನೆ,—ಶತಾನಂದ ಋಷಿಗಳೇ, ಅನಂತರದಲ್ಲಿ ಶ್ರೀನಿವಾಸನೂ, ತೋಂಡಮಾನರಾಜನೂ ಏನು ಮಾಡಿದರು ? ಅದರ ವೃತ್ತಾಂತವನ್ನು ಹೇಳಬೇಕೆಂದು ಕೇಳಲು, ಆಗ ಶತಾನಂದರು ಹೇಳ ತೊಡಗಿದರು,—

ಕೇಳೈ ಜನಕರಾಜನೇ, ಒಂದಾನೊಂದು ದಿವಸ ತೊಂಡಮಾನನು ಒಬ್ಬ ನೇ ಶ್ರೀನಿವಾಸನ ದರ್ಶನಕ್ಕಾಗಿ ಬಂದು ಅವನ ಪಾದಗಳಿಗೆ ನಮಸ್ಕಾರವನ್ನು ಮಾಡಿದನು. ಆಗ ಶ್ರೀನಿವಾಸನು ತೋಂಡಮಾನನನ್ನು ಅಪ್ಪಿಕೊಂಡು "ರಾಜನೇ, ಈಗ ಅಕಸ್ಮಾತ್ತಾಗಿ ಬಂದಕಾರಣವೇನು" ಎಂದು ಕೇಳಿದನು. ಅದಕ್ಕೆ ತೋಂಡಮಾನನು... "ಶ್ರೀನಿವಾಸನೇ, ನಿನ್ನ ದರ್ಶನದ ಹೊರತು ನನಗೆ ಬೇರೆ ಕೆಲಸವಿಲ್ಲ. ದೇವಾಧಿದೇವನೇ, ನೀನು ಸುರಾಧ್ಯಕ್ಷನೆಂತಲೂ, ವೇದವೇದ್ಯನೆಂತಲೂ, ಹೇಳುವರು; ಅದನ್ನು ಕೇಳಿ ನಿನ್ನ ದರ್ಶನಕ್ಕಾಗಿ ಬಂದಿರುವೆನು. ಹೇ ಸ್ವಾಮಿಯೇ ಅಚ್ಯುತನೇ, ಪುರಾಣಪುರುಷನೇ, ಶ್ರೀನಿವಾಸನೇ, ನೀನು ಅಪ್ರಾಕೃತ ಶರೀರವುಳ್ಳವನಾದರೂ ಲೀಲೆಯಿಂದ ಮನುಷ್ಯಶರೀರವನ್ನು ಧಾರಣಮಾಡಿ ಸೃಷ್ಟಿಯನ್ನು ಮಾಡುವದರಲ್ಲಿಯೂ, ಪಾಲನ ಮಾಡುವದರಲ್ಲಿಯೂ, ಸಂಹಾರ ಮಾಡುವದರಲ್ಲಿಯೂ ಪ್ರಕೃತಿಗೆ ಕಾರಣಭೂತನಾಗಿರುವೆಯೆಂದು ಹೇಳುವರು; ನೀನು ಜಗತ್ತನ್ನು ಏಕಾರ್ಣವ ಮಾಡುವೆ, ಅದು ಉದಕಭಾವವನ್ನು ಹೊಂದಿರಲಾಗಿ, ಸಮಸ್ತ ಜೀವಕೋಟಿಯನ್ನು ನೀನು ನಿನ್ನ ಜಠರದಲ್ಲಿಟ್ಟುಕೊಂಡು, ಲಕ್ಷ್ಮಿಯಿಂದ ಕೂಡಿ ಕ್ರೀಡೆಯನ್ನು ಮಾಡುತ್ತಿರುವೆ; ಮತ್ತು ಅಂಗ ವಿಭ್ರಮವುಳ್ಳ ಸಹಸ್ರ ಶಿರಸ್ಸುಳ್ಳವನಾಗಿಯೂ, ಸಹಸ್ರ ನೇತ್ರಗಳುಳ್ಳವನಾಗಿಯೂ ಇರುವ ನಿನ್ನ ಮುಖದಿಂದ ಬ್ರಾಹ್ಮಣರು ಉತ್ಪನ್ನರಾದರು. ನಿನ್ನ ಬಾಹುಗಳಿಂದ ಕ್ಷತ್ರಿಯರೂ ಊರು (ತೊಡೆ)ಗಳಿಂದ ವೈಶ್ಯರೂ, ಪಾದಗಳಿಂದ ಶೂದ್ರರೂ ಉತ್ಪನ್ನರಾದರು; ಸಮಸ್ತ ಲೋಕಗಳಿಗೂ, ದೇವತೆಗಳಿಗೂ, ಯೋಗಿಗಳಿಗೂ ನೀನೇ ಪ್ರಭುವು; ಅಂತಃಸೃಷ್ಟಿಕರನೂ, ಬಹಿಃಸೃಷ್ಟಿಕರನೂ ನೀನೇ ವೇಂಕಟಾಚಲಕ್ಕೆ ಸ್ವಾಮಿಯಾದ ಶ್ರೀನಿವಾಸನೇ ನಿನಗೆ ನಮಸ್ಕಾರವು, ಬ್ರಹ್ಮನನ್ನು ಉದರದಲ್ಲಿಟ್ಟುಕೊಂಡ ದೇವನೇ ರಮಾಪತಿಯೇ, ಪುಣ್ಯಮೂರ್ತಿಯೇ, ಶಾಂತನೇ, ಅದ್ಭುತಕರ್ಮನೇ, ಅಪ್ರಾಕೃತಶರೀರನೇ, ಅನಂತಮೂರ್ತಿಯೇ. ಅನಂತಶೀರ್ಷನೇ, ಅನಂತಬಾಹುವೇ, ಅನಂತನಾಮನೇ, ಹೇ ಪರಬ್ರಹ್ಮನೇ, ಶೇಷಗಿರೀಶನೇ, ಪನ್ನಗಾಚಲವಾಸಿಯೇ, ಶ್ರೀನಿವಾಸನೇ ನಿನಗೆ ನಮಸ್ಕಾರವು." ಎಂದು ಶ್ರೀನಿವಾಸನನ್ನು ಸ್ತೋತ್ರಮಾಡಿದನು. ಆಗ ಶ್ರೀನಿವಾಸನು ತೋಂಡದೇಶಾಧಿಪನಾದ ತೋಂಡರಾಜನು ಮಾಡಿದ ಸ್ತೋತ್ರದಿಂದ ನಾನು ಸಂತುಷ್ಟನಾದೆನು. ನೀನು ಮಾಡಿದ ಸ್ತೋತ್ರದಿಂದ ನನ್ನನ್ನು ಯಾರು ಭಜಿಸುವರೋ, ಅವರಿಗೆ ಸಾಯುಜ್ಯಪದವಿಯು

'ಸಂಗ್ರಹಕಾರ್ಯ ತೃಪ್ತಿಕರವಾಗಿದೆ.' —ಪುಸ್ತಕಪ್ರಪಂಚ

No. L- Dis. A 5—813/47—48, 30—8—47 ರೆವಿನ್ಯೂ ಕಮಿಷನ್ನರ ಅಪ್ಪಣೆಯ ಮೇರೆಗೆ ಈ ಗ್ರಂಥ ಸಂಸ್ಥಾನದ ಎಲ್ಲ ಗ್ರಾಮ ಪಂಚಾಯಿತಿಗಳ ಪುಸ್ತಕಭಂಡಾರಗಳಿಗೂ ಮಂಜೂರಾಗಿದೆ.

T.B.C. 43/47-48-25 Nov 47 ಅಪ್ಪಣೆಯ ಮೇರೆಗೆ ಈ ಸಂಗ್ರಹ ಹೈ, ಮಿಡಲ್, ನಾರ್ಮಲ್ ಸ್ಕೂಲುಗಳ ಪುಸ್ತಕ ಭಂಡಾರಗಳಿಗೆ ಮಂಜೂರಾಗಿದೆ.

೫. **ಸುವರ್ಣ ಸಂಪುಟ**—(ಸಣ್ಣಕಥೆಗಳ ಸಂಗ್ರಹ) ಲೇಖಕರು : ಎಚ್. ದೇವೀರಪ್ಪ ಎಂ.ಎ. ಪ್ರಕಾಶಕರು : ಸಾಹಿತ್ಯ ಮಂದಿರ, ಮೈಸೂರು. ಬೆಲೆ ೧-೮-೦

**ಕಥಾವಲ್ಲರಿ**–ಲೇಖಕರು: ತ.ಸು. ಶಾಮರಾಯ ಬಿ.ಎ. (ಆನರ್ಸ್) ಪುಟಗಳು viii + ೧೪೪ ಬೆಲೆ ೧-೮-೦.

'ಈ ಪುಸ್ತಕದಲ್ಲಿರುವ ಕಥಾಸಂಗ್ರಹಗಳು ಉನ್ನತಮಟ್ಟದವುಗಳಾಗಿವೆ.' —ತಾಯಿನಾಡು

'ಶೈಲಿ ಸುಲಭವಾದ ಹೊಸ ಕನ್ನಡ ನಿರೂಪಣೆ ಸರಸವಾಗಿದೆ. ವಿಷಯ ಮಹಾಕಾವ್ಯಗಳ ತಿರುಳಾಗಿದೆ. ಆದುದರಿಂದ ಗ್ರಂಥವು ಸ್ವಾಗತಾರ್ಹವಾಗಿದೆ' —ಶರಣಸಾಹಿತ್ಯ

೭ **ಹಳ್ಳಿಯ ಬದುಕು**–ಲೇಖಕರು: ಎಚ್. ದೇವೀರಪ್ಪ ಎಂ.ಎ. ಪುಟ ೧೩೪ ಬೆಲೆ ೧-೮-೦ ಮಾರಾಟಗಾರರು: ಎಚ್. ವೆಂಕಟರಾಮಯ್ಯ ಆಂಡ್ ಸನ್ಸ್, ವಿದ್ಯಾನಿಧಿ ಬುಕ್ ಡಿಪೋ, ಮೈಸೂರು.

೮ **ಸಭಾಪರ್ವ ಸಂಗ್ರಹ**—ಸಂಪಾದಕರು: ಎಚ್.ಎಂ. ಶಂಕರನಾರಾಯಣರಾವ್ ಎಂ.ಎ., ಟಿ.ಎಸ್. ಶಾಮರಾವ್ ಬಿ.ಎ. (ಆನರ್ಸ್) ಡಿ.ವಿ. ಶೇಷಗಿರಿರಾವ್ ಬಿ ಎ. ಬೆಲೆ ೨ ೦-೦

೯ **ಲಕೀಲಕ್ಷ್ಮಣ್** ನಾಟಕಕಾರರು: ಕ್ಷೀರಸಾಗರ ಬೆಲೆ೦-೧೮-೦

೧೦ **ಭಾರತದ ಜನತೆ**—ಲೇಖಕರು: ಜಿ.ಎನ್. ಕೃಷ್ಣಮೂರ್ತಿ, ಎಂ.ಎ. ಬೆಲೆ ೦-೮-೦

ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ, ಮೈಸೂರು

## ಕುಮಾರವ್ಯಾಸ ಮಹಾಕವಿಯ

# ಮಹಾಭಾರತ ಸಂಗ್ರಹ

## (೧) ಆದಿಪರ್ವ ಸಂಗ್ರಹ (೨) ಸಭಾಪರ್ವ ಸಂಗ್ರಹ

## (೩) ಉದ್ಯೋಗಪರ್ವ ಸಂಗ್ರಹ

ಸಿದ್ಧವಾಗಿವೆ

ಕಾವ್ಯದ ಮುಖ್ಯ ಕಥಾಸರಣಿ ಕೆಡದಂತೆ, ಒಟ್ಟು ಕಥೆಯ ಸ್ವಾಸ್ಥ್ಯಕ್ಕೆ, ಪಾತ್ರನಿರೂಪಣಕ್ಕೆ ಭಂಗಬಾರದಂತೆ, ಅವಶ್ಯವಾದ ವರ್ಣನೆಯ, ವಿವರಣೆ ಸಾರ ಬಿಟ್ಟುಹೋಗದಂತೆ, ಮುಖ್ಯವಾಗಿ ಕವಿಯ ವ್ಯಕ್ತಿತ್ವಕ್ಕೆ, ಆತನ ವಿಶೇಷ ಪ್ರತಿಭೆಗೆ, ಲೋಪಬಾರದಂತೆ ಈ ಸಂಗ್ರಹಗಳನ್ನು ಸಿದ್ಧಪಡಿಸಿದೆ. ಪ್ರತಿಯೊಂದು ಸಂಗ್ರಹದಲ್ಲಿಯೂ ಕವಿ ಕಾವ್ಯವಿಚಾರ, ಪರ್ವದ ಕಥೆ, ಕಾವ್ಯದ ವಿಮರ್ಶೆ—ಇವುಗಳನ್ನೊಳಗೊಂಡ ದೀರ್ಘ ಪೀಠಿಕೆಯೂ ವಿಸ್ತಾರವಾದ ಶಬ್ದಕೋಶವೂ ಉಂಟು. ಫುಲ್ ಸ್ಕೇಪು ಅಷ್ಟಪತ್ರಾಕಾರದಲ್ಲಿ, ಕಿರಿದಾಗಿ ಬಿಳಿಯ ಹೊಳಪು ಕಾಗದದ ಮೇಲೆ ಅಂದವಾಗಿ ಮುದ್ರಿತವಾಗಿರುವುದರಿಂದ, ಭಾರತ ವಾಚನಕಾರರಿಗೂ ಸಾಮಾನ್ಯ ವಾಚಕರಿಗೂ ಇವು ಅತ್ಯಂತ ಉಪಯುಕ್ತವಾಗಿವೆ ಕುಮಾರವ್ಯಾಸ ಭಾರತದ ಉತ್ತಮ ಮುದ್ರಣ ಪ್ರತಿಗಳು ದೊರಕದ ಕೊರತೆಯನ್ನು ಈ ಸಂಗ್ರಹಗಳು ಬಹುಮಟ್ಟಿಗೆ ನಿವಾರಿಸುತ್ತವೆ.

ಇವು ಅಚ್ಚಿನಲ್ಲಿವೆ ;

**ಅರಣ್ಯಪರ್ವ : ವಿರಾಟಪರ್ವ**

**ಎಚ್. ವೆಂಕಟರಾಮಯ್ಯ ಅಂಡ್ ಸನ್ಸ್**

ನೂರಡಿ ರಸ್ತೆ, ಮೈಸೂರು

ಇರುವ ಮಹೋನ್ನತ ಮಂದಿರವನ್ನು ಕಟ್ಟಿಸಿದನು. ಮತ್ತು ಆ ಗಿರಿಯನ್ನು ಏರುವದಕ್ಕಾಗಿ ಸೋಪಾನಗಳಿಂದ ಯುಕ್ತವಾದ ವಿಸ್ತೀರ್ಣವಾದ ಮಾರ್ಗವನ್ನು ಮಾಡಿಸಿ, ನಡನಡುವೆ ಮಂಟಪಗಳನ್ನೂ, ಕೂಪಗಳನ್ನೂ ಮಾಡಿಸಿದನು.

ಈ ಪ್ರಕಾರ ಎಲ್ಲವನ್ನು ಸಿದ್ಧಮಾಡಿಸಿ ಬಳಿಕ ತೋಂಡಮಾನನು ಶ್ರೀನಿವಾಸನ ಸಮೀಪಕ್ಕೆ ಬಂದು,—"ಸ್ವಾಮೀ ಜಗನ್ನಾಥನೇ, ನೀನು ಹೇಳಿದ ಪ್ರಕಾರ ಪ್ರಾಸಾದವನ್ನು ಸಿದ್ಧಮಾಡಿಸಿರುವೆನು; ಇನ್ನು ಮೇಲೆ ಅಲ್ಲಿಗೆ ಬರಬೇಕು" ಎಂದು ಬೇಡಿಕೊಳ್ಳಲು, ಶ್ರೀನಿವಾಸನು ಸಂತೋಷಪಟ್ಟು—ರಾಜನೇ, ನಿನ್ನ ಭಕ್ತಿಯಿಂದ ನಾನು ತುಷ್ಟನಾದೆನು. ಅವಶ್ಯವಾಗಿ ಅಲ್ಲಿಗೆ ಬರುವೆನು, ಎಂದು ಹೇಳಿ, ಇಂದ್ರನೇ ಮೊದಲಾದ ಸಕಲ ದೇವತೆಗಳನ್ನೂ, ವೈಖಾನಸ ಮೊದಲಾದ ಋಷಿಗಳನ್ನೂ, ಬ್ರಾಹ್ಮಣರನ್ನೂ ಕರೆಸಿ, ಅವರಿಂದ ಸಹಿತನಾಗಿ, ದಶದಿಕ್ಕುಗಳನ್ನು ತುಂಬುವ ವಾದ್ಯಧ್ವನಿಗಳಿಂದಲೂ, ಬ್ರಾಹ್ಮಣರ ವೇದಘೋಷಗಳಿಂದಲೂ, ಸ್ತುತಿಪಾಠಕರ ಧ್ವನಿಗಳಿಂದಲೂ ಯುಕ್ತನಾಗಿ ಪದ್ಮಾವತಿಯೊಡನೆ ಶ್ರೀನಿವಾಸನು ತೋಂಡಮಾನನು ಕಟ್ಟಿಸಿದ ಮಂದಿರವನ್ನು ಪ್ರವೇಶಿಸಿ, ಬಹು ಸಂತೋಷವನ್ನು ಹೊಂದಿದನು.

ಆ ಮಂದಿರವು ಆನಂದವನ್ನು ಹುಟ್ಟಿಸುವದಾದ್ದರಿಂದ ಅದಕ್ಕೆ "ಆನಂದ ನಿಲಯ"ವೆಂಬ ಹೆಸರು ಪ್ರಾಪ್ತವಾಯಿತು. ಆಗ ಶ್ರೀನಿವಾಸನು ಪದ್ಮಾಲಯದಲ್ಲಿ ಮಹಾಲಕ್ಷ್ಮಿಯನ್ನು ಸ್ಥಾಪಿಸಿ, ವಿಶಾಲಾಕ್ಷಿಯಾದ ಪದ್ಮಾವತಿಯನ್ನು ತನ್ನ ವಕ್ಷಸ್ಥಳದಲ್ಲಿಟ್ಟುಕೊಂಡು, ಶಂಖ-ಚಕ್ರಗಳಿಂದ ಭೂಷಿತನಾಗಿ ತನ್ನ ಕಟಿಯಲ್ಲಿ ಒಂದು ಕೈಯನ್ನಿಟ್ಟು ಮತ್ತೊಂದು ಕೈಯಿಂದ "ಇದೇ ಉತ್ತಮವಾದ ಕ್ಷೇತ್ರವು, ಇದೇ ವೈಕುಂಠಪದವು"ಎಂಬದಾಗಿ ತೋರಿಸುತ್ತ, ದೇವತೆಗಳಿಂದ ಆರಾಧಿತವಾದ ಪಾದಪದ್ಮಗಳುಳ್ಳವನಾಗಿಯೂ, ಸಜ್ಜನರಿಗೆ ಗತಿಪ್ರದನಾಗಿಯೂ, ತನ್ನನ್ನು ನಂಬಿದವರ ಸಂಸಾರಸಂಬಂಧವಾದ ಕಷ್ಟಗಳನ್ನು ಪರಿಹರಿಸುವವನಾಗಿಯೂ ರಮಾಪತಿಯಾದ ವೇಂಕಟೇಶನು ಸಂಪತ್ತಿನಿಂದ ಶೋಭಿಸುವನು. ಕೇಳೈ ಜನಕರಾಜನೇ, ಪರಮಪವಿತ್ರವಾಗಿಯೂ, ಪುಣ್ಯಕರವಾಗಿಯೂ, ಮಂಗಳದಾಯಕವಾಗಿಯೂ ಇರುವ ಶ್ರೀನಿವಾಸನ ಚರಿತ್ರೆಯು ಹೀಗೆ ಲೋಕೋತ್ತರವಾಗಿರುವದು.

॥ ಇತಿ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿ ಶ್ರೀ ವೇಂಕಟೇಶಮಾಹಾತ್ಮ್ಯ ದಲ್ಲಿ "ತೋಂಡಮಾನ ನೃಪ-ನಿರ್ಮಿತ-ನವೀನ-ಮಂದಿರ-ಪ್ರವೇಶಾದಿ-ಕಥನ" ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

---

# ೧೫ನೆಯ ಅಧ್ಯಾಯ

---

ಕೇಳೈ ಜನಕರಾಜನೇ, ಚತುರ್ಮುಖನಾದ ಬ್ರಹ್ಮನು ಸರ್ವಪ್ರಾಣಿಗಳಿಗೆ ಹಿತವನ್ನು ಮಾಡಬೇಕೆಂಬ ಇಚ್ಛೆಯಿಂದ ಎರಡು ನಂದಾದೀಪಗಳನ್ನು ಅಲ್ಲಿ ಇಟ್ಟು, ಶ್ರೀನಿವಾಸನಿಗೆ-"ಸ್ವಾಮಿ ಜಗತ್ಪತಿಯೇ, ಈ ಎರಡು ನಂದಾದೀಪಗಳು ಕಲಿಯುಗವು ಮುಗಿಯುವ ಪರಿಯಂತರವಾಗಿ ಇರಬೇಕು" ಎಂದು ಬೇಡಿಕೊಂಡನು. ಆಗ ಶ್ರೀನಿವಾಸನು,-ಬ್ರಹ್ಮನೇ, ಈ ನನ್ನ ಮಂದಿರವು ಎಂದು ಪತನವಾಗುವದೋ ? ಮತ್ತು ಎಂದು ಈ ದೀಪಗಳು ನಷ್ಟವಾಗುವವೋ ? ಅವತ್ತಿಗೆ ನನ್ನ ಅವತಾರವು ಸಂಪೂರ್ಣವಾಯಿತೆಂದು ತಿಳಿ, ಎಂದು ಬ್ರಹ್ಮನಿಗೆ ವರವನ್ನು ಕೊಟ್ಟು — ಲೋಕಪಿತಾಮಹನೇ, ಧ್ವಜಾರೋಹಣ ಪ್ರಾರಂಭಮಾಡಿಕೊಂಡು ವಾಹನಸಹಿತವಾಗಿ ರಥ ಪರ್ಯಂತ ನನ್ನ ಉತ್ಸವವನ್ನು ಮಾಡು; ಇವಲ್ಲದೆ ವೇದದಲ್ಲಿ ಪಾರಂಗತರಾದ ಬ್ರಾಹ್ಮಣರಿಂದ ನನಗೆ ತ್ರಿಕಾಲದಲ್ಲಿಯೂ ನೈವೇದ್ಯವು ಮಾಡಲ್ಪಡಲಿ; ಎಂದು ಹೇಳಲು, ಆಗ ಬ್ರಹ್ಮನು ಶ್ರೀನಿವಾಸನ ವಚನಗಳನ್ನು ಕೇಳಿ, ತೋಂಡಮಾನನನ್ನು ಕೂಡಲೆ ಕರೆಕಳುಹಿ ಅವನಿಗೆ—"ತೋಂಡಮಾನನೇ, ಶೀಘ್ರವಾಗಿ ಶ್ರೀಹರಿಗೆ ವಾಹನಗಳನ್ನು ಮಾಡಿಸು, ಚಿತ್ರವಿಚಿತ್ರವಾದ ರಥವನ್ನು ಸಿದ್ಧಪಡಿಸು; ಮತ್ತು ಛತ್ರಗಳನ್ನೂ, ಚಾಮರಗಳನ್ನೂ, ವ್ಯಜನಗಳನ್ನೂ ಮಾಡಿಸು" ಎಂದು ಹೇಳಿ, ವಿಶ್ವಕರ್ಮನನ್ನು ಅವನ ವಶಕ್ಕೆ ಕೊಟ್ಟನು. ಆಗ ತೋಂಡಮಾನನು ಬ್ರಹ್ಮನ ಆಜ್ಞೆಯ ಪ್ರಕಾರ ವಾಹನಗಳನ್ನೂ, ರಥ,—ಛತ್ರ—ಚಾಮರ—ವ್ಯಜನಗಳನ್ನೂ ವಿಶ್ವಕರ್ಮನಿಂದ ಕ್ಷಣಮಾತ್ರದಲ್ಲಿ ಸಿದ್ಧಮಾಡಿಸಿದನು.

ಅನಂತರದಲ್ಲಿ ಶ್ರೀನಿವಾಸನು ಬ್ರಹ್ಮನಿಗೆ-"ಬ್ರಹ್ಮನೇ, ವಾಹನಗಳೂ ರಥಗಳೂ ಸಿದ್ಧವಾದವು; ಇನ್ನು ಮೇಲೆ ಉತ್ಸವವನ್ನು ಮಾಡಿಸತಕ್ಕದ್ದು, ಅದಕ್ಕಾಗಿ

ಅನೇಕ ದೇಶಗಳಿಂದ ರಾಜರನ್ನು ಕರೆಯಿಸು," ಎಂದು ಹೇಳಿದ್ದನ್ನು ಕೇಳಿ ತೋಂಡ ಮಾನನು, ಶ್ರೀನಿವಾಸನ ಉತ್ಸವಕ್ಕಾಗಿ ವೇಂಕಟಾಚಲಕ್ಕೆ ಬರಬೇಕೆಂದು ತನ್ನ ದೂತರ ಸಂಗಡ ಅನೇಕ ದೇಶಗಳಿಗೆ ಹೇಳಿ ಕಳಿಸಿದನು. ಅವನ ಶಾಸನದಂತೆ ಅಂಗ ವಂಗ, ಕಳಿಂಗ, ಪೌಗಂಡ, ಕಾಶಿಕ, ಕಾಂಭೋಜ, ಕೇರಳ, ವಿರಾಟ, ಕುರುಜಾಂಗಲ, ಬರ್ಬರ, ಪಾಂಡ್ಯ, ಚೈದ್ಯ, ಮತ್ಸ್ಯ, ಸಿಂಧು ಮೊದಲಾದ ದೇಶಗಳ ರಾಜರು ತಮ್ಮ ಕುಟುಂಬಸಹಿತವಾಗಿ ವೇಂಕಟಾಚಲಕ್ಕೆ ಬಂದರು. ಕೆಲವರು ಯಾನಾರೂಢರಾಗಿ, ಕೆಲವರು ಗಜಾರೂಢರಾಗಿ, ಹಲವರು ಅಶ್ವಾರೂಢರಾಗಿ, ಕೆಲವರು ಪಾದಚಾರಿಗಳಾಗಿ, ಬಂದರು; ಹಾಗು ಬ್ರಹ್ಮ, ಕ್ಷತ್ರಿಯ ವೈಶ್ಯ, ಶೂದ್ರ ಮೊದಲಾದ ಸಕಲ ಜಾತಿಯವರೂ ಬರುತ್ತಿದ್ದರು. ಶ್ರೀನಿವಾಸನಲ್ಲಿ ಭಕ್ತಿಯುಳ್ಳ ಆ ಜನರು ಉತ್ಸವಕ್ಕಾಗಿ ಬರುತ್ತಿರುವಾಗ ಕೆಲವರು ಕ್ಷೀರಪ್ರಾಶನವನ್ನು ಮಾಡುತ್ತಲೂ, ಕೆಲವರು ನಿರಾಹಾರಿಗಳಾಗಿಯೂ, ಹಲವರು ಧಾರಣೆ ಪಾರಣೆಯ ವ್ರತಸ್ಥರಾಗಿಯೂ ಇದ್ದರು. ಹೀಗೆ ಬಂದಂಥ ಶ್ರೀನಿವಾಸನ ಪರಮಭಕ್ತರು ಧನಗಳನ್ನೂ, ವಸ್ತ್ರಗಳನ್ನೂ, ಭೂಷಣಗಳನ್ನೂ ಅವನಿಗೆ ಅರ್ಪಿಸಿದರು. ಆಗ ಸೂರ್ಯನು ಕನ್ಯಾರಾಶಿಯಲ್ಲಿ ಇರುವ ಕಾಲದ ದ್ವಿತೀಯೆಯ ದಿವಸದಲ್ಲಿ ಕ್ಷೇತ್ರಕ್ಕೆ ಬಂದಂಥ ಸಮಸ್ತ ರಾಜರಿಂದಲೂ, ಮುನಿಗಳಿಂದಲೂ ಕೂಡಿಕೊಂಡು ವೈಖಾನಸ ಮುನಿಗಳು ಶ್ರೀನಿವಾಸನ ಧ್ವಜಾರೋಹಣ ಕಾರ್ಯವನ್ನೂ, ಅಂಕುರಾರ್ಪಣ ಕಾರ್ಯವನ್ನೂ ಮಾಡಿದರು. ಅನಂತರ ಬ್ರಹ್ಮನು ನರಯಾನವನ್ನು ಸಿದ್ಧಪಡಿಸಿ, ಶ್ರೀನಿವಾಸನಿಗೆ–ಸ್ವಾಮಿಯೇ, ನರಯಾನವನ್ನು ಆರೋಹಣ ಮಾಡಿ ನಿನ್ನ ಮಂದಿರದ ಪ್ರದಕ್ಷಿಣೆಯನ್ನು ಮಾಡಬೇಕು, ಎಂದು ಹೇಳಲು, ಶ್ರೀನಿವಾಸನು— ಹಾಗೇ ಆಗಲಿ; ಆದರೆ ಬ್ರಹ್ಮನೇ, ನೀನು ಬಾಲ್ಯಾವಸ್ಥೆಯಲ್ಲಿ ವೇದಾಭ್ಯಾಸವನ್ನು ಮಾಡಿದ್ದು ಮರೆತಿರಬಹುದು; ಆದ್ದರಿಂದ ನನಗೆ ಪರೀಕ್ಷೆಯನ್ನು ಕೊಡಬೇಕು ಎನಲು, ಅದನ್ನು ಕೇಳಿ ಬ್ರಹ್ಮನು ಸ್ವಲ್ಪ ಚಿಂತಾಯುಕ್ತನಾಗಿ, ಎಲ್ಲಿ ಮರೆಯುವದೋ ಏನೋ ? ಎಂದು ಪರೀಕ್ಷೆಯನ್ನು ಕೊಡುತ್ತಿದ್ದನು. ಆ ಕಾಲದಲ್ಲಿ ಬ್ರಹ್ಮನಿಗೆ ಸ್ವಲ್ಪ ಮರೆಯಿತು; ಆದರೂ ಶ್ರೀನಿವಾಸನಿಂದ ಹೇಳಿಸಿಕೊಂಡು ಚನ್ನಾಗಿ ಪರೀಕ್ಷೆಯನ್ನು ಕೊಟ್ಟನು. ಆನಂತರದಲ್ಲಿ ಶ್ರೀನಿವಾಸನು ತನ್ನ ನಾಲ್ಕು ಮೂರ್ತಿಗಳನ್ನು ನಾಲ್ಕು ವೇದಗಳಿಂದ ಉತ್ಪನ್ನವಾದ ಮಂತ್ರಗಳಿಂದ ನಿರ್ಮಾಣಮಾಡಿದನು.

ಬ್ರಹ್ಮನು ಆ ಮೂರ್ತಿಗಳಿಗೆ-ಉತ್ಸವ ಶ್ರೀನಿವಾಸಮೂರ್ತಿ, ಉಗ್ರಶ್ರೀನಿವಾಸ ಮೂರ್ತಿ, ಸರ್ವಾಧಿಕ ಶ್ರೀನಿವಾಸಮೂರ್ತಿ, ಲೇಖಕ ಶ್ರೀನಿವಾಸಮೂರ್ತಿ ಗಳೆಂದು ಹೆಸರನ್ನಿಟ್ಟನು. ಆ ಆ ಮೂರ್ತಿಗಳಲ್ಲಿ ಶ್ರೀನಿವಾಸನು ತಾನೇ ಅಭಿಮಾನದೇವತೆಯಾಗಿ, ಆ ಆ ಕಾರ್ಯಗಳನ್ನು ನಡಿಸುವನು. ಉತ್ಸವದಲ್ಲಿ ಸರ್ವಕಾರ್ಯವೂ ಬ್ರಹ್ಮನಿಂದಲೇ ಮಾಡಲ್ಪಟ್ಟಿತು ಬ್ರಹ್ಮೋತ್ಸವದಲ್ಲಿ ಬ್ರಹ್ಮನು ಶ್ರೀನಿವಾಸನಿಗೆ ಗುಡೋದನ, ತಿಲೋದನ, ಪರಮಾನ್ನ, ಮುದ್ಗಾನ್ನ, ಮಾಷಾನ್ನ, ದಧ್ಯೋದನ, ಗುಡಯುಕ್ತವಾದ ಅಪೂಪ, ತಿಲಾಪೂಪ, ಮಾಷಾ ಪೂಪ, ಮೋದಕ ಮೊದಲಾದ ಷಡ್ವಿಧಾನ್ನಗಳನ್ನು ಮಾಡಿಸಿ ಸಮರ್ಪಣ ಮಾಡಿದನು. ಬ್ರಹ್ಮನು ಶ್ರೀನಿವಾಸನ ಉತ್ಸವವನ್ನು ಮೊದಲಿನಿಂದ ಮಾಡಿದ್ದು ಹ್ಯಾಗಂದರೆ,— ಧ್ವಜಾರೋಹಣದ ಪೂರ್ವದಿವಸದ ಸಾಯಂಕಾಲದಲ್ಲಿ ಬ್ರಹ್ಮ-ಶೇಷ-ಗರುಡರೇ ಮೊದಲಾದ ಸರ್ವದೇವತೆಗಳೂ, ಋಷಿಗಳೂ ಕೂಡಿಕೊಂಡು ಹೋಗಿ, ವಲ್ಮೀಕದಲ್ಲಿರುವ ಮಣ್ಣನ್ನು ವಿಧಿಪೂರ್ವಕವಾದ ಮಂತ್ರಗಳಿಂದ ಅಗಿದು, ಆ ಮೃತ್ತಿಕೆಯನ್ನು ಆನೆಯ ಮೇಲೆ ಹೇರಿಕೊಂಡು, ವಾದ್ಯಧ್ವನಿಗಳಿಂದ ಯುಕ್ತರಾಗಿ, ಪ್ರದಕ್ಷಿಣೆಯನ್ನು ಮಾಡಿ ಬೀದಿಯಲ್ಲಿ ತಂದು, ಆ ಮೃತ್ತಿಕೆಯಲ್ಲಿ ಅಂಕುರಾರ್ಪಣವನ್ನು ಮಾಡಿದರು. ಮರುದಿವಸ ಪ್ರಾತಃಕಾಲದಲ್ಲಿ ಧ್ವಜಾ ರೋಹಣ ಮಹೋತ್ಸವವನ್ನು ಮಾಡಿ, ಶ್ರೀನಿವಾಸನಿಗೆ ನರಯಾನಗಳನ್ನು ಮಾಡಿಸಿದರು; ಮತ್ತು ಅವತ್ತಿನ ರಾತ್ರಿಯಲ್ಲಿ ಶೇಷಶಯನನಾದ ಶ್ರೀನಿವಾಸನಿಗೆ ಶೇಷವಾಹನ ಮಹೋತ್ಸವವನ್ನು ಮಾಡಿದರು. ತೃತೀಯೆಯ ದಿವಸದಲ್ಲಿ ಹಗಲು ಸಿಂಹವಾಹನವು; ರಾತ್ರಿಯಲ್ಲಿ ಮೌಕ್ತಿಕ ಮಂಟಪವು. ಚತುರ್ಥೀ ದಿವಸ ಮೊದಲಿನ ಯಾನವನ್ನು ಮಾಡಿ ರಾತ್ರಿಯಲ್ಲಿ ಸರ್ವಭೂಪಾಲವಾಹನವನ್ನು ಮಾಡಿದರು. ಪಂಚಮೀ ದಿವಸದಲ್ಲಿ ಮೊದಲಿನ ಯಾನವು ಆಂದೋಲಿಕವು, ಮೋಹಿನೀ ವೇಷವನ್ನು ಧರಿಸಿದ ಶ್ರೀನಿವಾಸನಿಗೆ ಛಂದೋಮೂರ್ತಿಯಾದ ಗರುಡನು ಎರಡನೇ ವಾಹನನಾದನು. ಷಷ್ಠಿಯ ದಿವಸ ಮೊದಲಿನ ವಾಹನವು ಹನುಮಂತನಾದನು; ಮತ್ತು ವಸಂತೋತ್ಸವ ಪ್ರಿಯನಾದ, ಸ್ತ್ರೀಸಹಿತನಾಗಿರುವ ಶ್ರೀನಿವಾಸನಿಗೆ ಮಂಗಲಗಿರಿಯು ಎರಡನೇ ವಾಹನವಾಯಿತು. ರಾತ್ರಿಯಲ್ಲಿ ಐರಾವತವು ಮೂರನೇ ವಾಹನವಾಯಿತು; ಸಪ್ತಮೀ ದಿವಸದಲ್ಲಿ ಮೊದಲು ಸೂರ್ಯವಾಹನವಾಯಿತು; ಮತ್ತು ಉದ್ಯಾನಸೇವೆ ಹಾರದಲ್ಲಿ ಪ್ರಿಯನಾದ

ಶ್ರೀನಿವಾಸನಿಗೆ ಮಂಗಲಗಿರಿಯು ಎರಡನೇ ವಾಹನವಾಯಿತು; ರಾತ್ರಿಯಲ್ಲಿ ಸ್ತ್ರೀಯಲ್ಲಿ ಆಸಕ್ತನಾದ ಶ್ರೀನಿವಾಸನಿಗೆ ಚಂದ್ರವಾಹನವು ಮೂರನೇ ಯಾನವಾಯಿತು. ಅಷ್ಟಮಿಾ ದಿವಸ ನಾನಾವಿಧವಾದ ಅಲಂಕಾರಗಳಿಂದ ಶೋಭಿಸುವ ರಥವು ಮೊದಲನೇ ಯಾನವಾಯಿತು; ರಾತ್ರಿಯಲ್ಲಿ ಉಚ್ಚೈಶ್ರವವೆಂಬ ಅಶ್ವವು ಎರಡನೇ ವಾಹನವಾಯಿತು. ನವಮಿಾ ದಿವಸ ಆಂದೋಲಿಕವು ಮೊದಲನೇ ವಾಹನವು; ಮಂಗಳವಾರದ ಪಿಂಗಲವರ್ಣದ ಅರಿಷಣದೋಕಳಿಯಿಂದ ಅಭಿಷಿಕ್ತನಾದ ಶ್ರೀನಿವಾಸನಿಗೆ ಮಂಗಲಗಿರಿಯು ಎರಡನೇ ವಾಹನವಾಯಿತು. ಮಾಂಗಲಿಕೋತ್ಸವದಲ್ಲಿ ಮಂಗಳಕರವಾದ ಅರಿಷಣದೋಕಳಿಯಿಂದ ಅಭಿಷಿಕ್ತನಾಗಿ ಅವಭೃತಸ್ನಾನವನ್ನು ಮಾಡುವದಕ್ಕೆ ಹೋಗುವಾಗ ಶ್ರೀನಿವಾಸನು ಮಂಗಲಗಿರಿಯನ್ನು ಆರೋಹಣಮಾಡಿಕೊಂಡು ಸಮಸ್ತ ಜನರಿಂದ ಸಹಿತನಾಗಿ ಮಂದಿರದ ಪ್ರದಕ್ಷಿಣೆಯನ್ನು ಮಾಡುತ್ತ, ವೇದೋಕ್ತ ಮಂತ್ರಗಳನ್ನು ಪಠಿಸುತ್ತಿರುವ ಬ್ರಾಹ್ಮಣ ಸಮೂಹದೊಡನೆ, ಸ್ವಾಮಿಪುಷ್ಕರಣೀ ತೀರ್ಥದಲ್ಲಿ ತನ್ನ ಅವತಾರ ದಿನದ ಶ್ರವಣಾನಕ್ಷತ್ರದಲ್ಲಿ ಅವಭೃತಸ್ನಾನವನ್ನು ಮಾಡಿ ಬಂದನು. ಮತ್ತು ಅವತ್ತಿನ ರಾತ್ರಿಯಲ್ಲಿ ಮಂಗಲಗಿರಿಯು ಮೂರನೇ ವಾಹನವಾಯಿತು. ಆ ಮೇಲೆ ಧ್ವಜಾರೋಹಣವೆಂಬ ಉತ್ಸವವು ಸಾಂಗವಾಗಿ, ಮರುದಿವಸದಲ್ಲಿ "ಪುಷ್ಪಯಾಗ ಮಹೋತ್ಸವ"ವಾಯಿತು.

ಈ ಪ್ರಕಾರ ಉತ್ಸವವಾಗಿ ದೇವತೆಗಳೂ ನಾನಾದೇಶದಿಂದ ಬಂದ ರಾಜರೂ ಬೇರೆ ಜನರೂ ತಮ್ಮ ತಮ್ಮ ಸ್ಥಳಕ್ಕೆ ಹೊರಟು ಹೋದರು. ಬ್ರಹ್ಮನೂ, ತೋಂಡಮಾನ ರಾಜನೂ ಶ್ರೀನಿವಾಸನ ಅಪ್ಪಣೆಯನ್ನು ತೆಗೆದುಕೊಂಡು ತಮ್ಮ ತಮ್ಮ ಸ್ಥಾನಗಳಿಗೆ ಹೋದರು.

ತೋಂಡಮಾನನು ತನ್ನ ಪಟ್ಟಣಕ್ಕೆ ಮರಳಿ ಬಂದ ನಂತರ ಶ್ರೀನಿವಾಸನಲ್ಲಿ ಪರಮಭಕ್ತಿಯುಳ್ಳವನಾಗಿ, ತನ್ನ ಗೃಹದಲ್ಲಿ ಒಂದು ಶ್ರೀನಿವಾಸನ ಪ್ರತಿಮೆಯನ್ನು ಸ್ಥಾಪಿಸಿ, ಭಕ್ತಿಯುಳ್ಳವನಾಗಿ ನಿತ್ಯದಲ್ಲಿಯೂ ಪೂಜಿಸುತ್ತ ಸತ್ಯದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತ, ಗೋಬ್ರಾಹ್ಮಣರಿಗೆ ಹಿತವಂತನಾಗಿಯೂ, ಅತಿಥಿಗಳನ್ನು ಸತ್ಕರಿಸುವವನಾಗಿಯೂ, ಸದ್ಧರ್ಮವನ್ನು ಆಚರಿಸುವವನಾಗಿಯೂ, ಶಾಂತನಾಗಿಯೂ, ಜಿತೇಂದ್ರಿಯನಾಗಿಯೂ ಇರುತ್ತ, ಒಂದು

ಬಿಲಮಾರ್ಗವನ್ನು ಮಾಡಿಸಿ, ಆ ಮಾರ್ಗದಿಂದ ಬಂದು ನಿರಂತರವಲ್ಲಿಯೂ ಶ್ರೀನಿವಾಸನನ್ನು ಆರಾಧಿಸುತ್ತಿರುವನು.

ಹೀಗಿರುವಲ್ಲಿ ಒಂದಾನೊಂದು ದಿವಸ ಕಾರ್ತಿಕಮಾಸದಲ್ಲಿ ವಶಿಷ್ಠ ಗೋತ್ರೋತ್ಪನ್ನನಾದ ಕೂರ್ಮನೆಂಬ ಬ್ರಾಹ್ಮಣನು. ಮೃತನಾಗಿರುವ ತನ್ನ ತಂದೆಯ ಅಸ್ಥಿಗಳನ್ನು ತೆಗೆದುಕೊಂಡು ಗಂಗಾನದಿಯಲ್ಲಿ ಬಿಡಬೇಕೆಂದು ಹೊರಟು. ತನ್ನ ಗರ್ಭಿಣಿಯಾಗಿರುವ ಭಾರ್ಯೆಯನ್ನೂ, ಪುತ್ರನನ್ನೂ ಸಂಗಡ ಕರೆದುಕೊಂಡು ತೋಂಡಮಾನನ ರಾಜಧಾನಿಗೆ ಬಂದು ಮುಟ್ಟಿದನು; ಆಗ ತೋಂಡಮಾನರಾಜನು ಮಹಾಧಾರ್ಮಿಕನೂ, ಗೋಬ್ರಾಹ್ಮಣರ ಪರಿಪಾಲನೆಯನ್ನು ಮಾಡುವವನೂ ಎಂಬ ಅವನ ಕೀರ್ತಿಯನ್ನು ಕೇಳಿ, ತನ್ನ ಮನಸ್ಸಿನಲ್ಲಿ ನಾನು ಈ ರಾಜನ ಹತ್ತರ ನನ್ನ ಹೆಂಡತಿಯನ್ನೂ ಪುತ್ರನನ್ನೂ ಇಟ್ಟು ಹೋದರೆ, ಇವನು ಇವರನ್ನು ಸಂರಕ್ಷಿಸುವನು; ಇವರನ್ನು ಕಾಶಿಗೆ ಕರೆದುಕೊಂಡು ಹೋಗುವದಾಗುವದಿಲ್ಲವು, ಎಂದು ಯೋಚಿಸಿ, ತನ್ನ ಪತ್ನೀಪುತ್ರರನ್ನು ಪಟ್ಟಣದ ಹೊರಗೆ ಒಂದು ಸ್ಥಳದಲ್ಲಿರಿಸಿ, ತಾನು ರಾಜನ ದರ್ಶನಕ್ಕಾಗಿ ಅರಮನೆಗೆ ಬಂದನು. ಆಗ ಆ ಬ್ರಾಹ್ಮಣನು, ವಿದ್ವಾಂಸರಾದ ಬ್ರಾಹ್ಮಣರ ಸಮೂಹದೊಡನೆ ಸಿಂಹಾಸನದ ಮೇಲೆ ಕುಳಿತಿರುವ ತೋಂಡಮಾನರಾಜನನ್ನು ಕಂಡು, ಅವನನ್ನು ಆಶೀರ್ವಾದಪೂರ್ವಕವಾಗಿ ಸ್ತೋತ್ರಮಾಡಿ, "ಮಹಾರಾಜನೇ,— ನೀನು ಪರಮಧಾರ್ಮಿಕನೂ, ದಯಾಶಾಲಿಯೂ, ಗೋಬ್ರಾಹ್ಮಣ ಪ್ರತಿಪಾಲಕನೂ ಎಂದು ಬಹುಜನರ ಮುಖದಿಂದ ನಿನ್ನ ಕೀರ್ತಿಯನ್ನು ಕೇಳಿ, ನಿನ್ನ ಸಮೀಪಕ್ಕೆ ಪ್ರಾಪ್ತನಾಗಿರುವೆನು;" ಎಂದು ಹೇಳಲು, ತೋಂಡಮಾನನು ಆ ಬ್ರಾಹ್ಮಣನನ್ನು ಸತ್ಕರಿಸಿ,— ಬ್ರಾಹ್ಮಣನೇ, ನೀನು ಬಂದ ಕಾರಣವೇನು? ಹೇಳು, ಎಂದು ಕೇಳಲು, ಕೂರ್ಮಬ್ರಾಹ್ಮಣನು— ರಾಜನೇ, ನನ್ನ ತಂದೆಯು ಪರಲೋಕವನ್ನು ಹೊಂದಿದ್ದರಿಂದ, ಪುತ್ರಧರ್ಮಾನುಸಾರವಾಗಿ ನಾನು ಅವನ ಅಸ್ಥಿಗಳನ್ನು, ಭಾಗೀರಥೀನದಿಯಲ್ಲಿ ಹಾಕುವದಕ್ಕಾಗಿ ಹೊರಟಿರುವೆನು; ಆದರೆ ದೈವಯೋಗದಿಂದ ಗರ್ಭಿಣಿಯಾದ ನನ್ನ ಪತ್ನಿಯನ್ನೂ, ಐದು ವರ್ಷದವನಾದ ಪುತ್ರನನ್ನೂ, ದೂರದ ಮಾರ್ಗವಿದ್ದ ಕಾರಣ ಕರೆದುಕೊಂಡು ಹೋಗುವದಕ್ಕೆ ನನಗೆ ಶಕ್ಯವಾಗುವದಿಲ್ಲ; ಆದಕಾರಣ ನಾನು ಕಾಶೀಕ್ಷೇತ್ರದಿಂದ ತಿರುಗಿ ಬರುವವರೆಗೂ ನೀನು ಅವರನ್ನು ಸಂರಕ್ಷಣೆ ಮಾಡತಕ್ಕದ್ದು. ಸ್ತ್ರೀಯರು

ಪತಿಯ ಗೃಹದಲ್ಲಿಯೇ ವಾಸಮಾಡುವದು ಯೋಗ್ಯವು; ಮಾತಾ-ಪಿತೃಗಳ ಸಮೀಪದಲ್ಲಿಯಾಗಲಿ, ಅಕ್ಕ-ತಂಗಿಯರ ಮನೆಯಲ್ಲಾಗಲಿ, ಮಾತುಳ ಗೃಹದಲ್ಲಿಯಾಗಲಿ, ರಾಜಮಂದಿರದಲ್ಲಿಯಾಗಲಿ ಇರುವದಕ್ಕೆ ಸಂಶಯವಿಲ್ಲ. ಸ್ತ್ರೀಯರಿಗೆ ಈ ಆರು ಮಂದಿ ಪಿತೃಸಮಾನರೆಂದು ತಿಳಿಯತಕ್ಕದ್ದು. ಆದ್ದರಿಂದ ನನ್ನ ಬಾಲಕನನ್ನೂ, ಗರ್ಭಿಣಿಯಾದ ಸ್ತ್ರೀಯನ್ನೂ ರಾಜನಾದ ನೀನು ಸಂರಕ್ಷಿಸಬೇಕು, ಎಂದು ಕೇಳಲು ತೋಂಡಮಾನನು,— "ಬ್ರಾಹ್ಮಣನೇ, ನಿನ್ನ ಇಚ್ಛೆಯಂತೆ ಆಗಲಿ" ಎಂದು ಹೇಳಿ, ಕಾಶೀಯಾತ್ರೆಗೆ ಹೋಗುವದಕ್ಕಾಗಿ ಅವನಿಗೆ ವಿಪುಲ ದ್ರವ್ಯವನ್ನು ಕೊಟ್ಟನು. ಆಗ ಆ ಬ್ರಾಹ್ಮಣನು ಸಂತೋಷಪಟ್ಟು, ತನ್ನ ಸ್ತ್ರೀ ಪುತ್ರರನ್ನು ರಾಜನ ಸಮೀಪದಲ್ಲಿಟ್ಟು, ಅವರ ಮೇಲಿನ ಮೋಹದಿಂದ ಬಿಟ್ಟು ಹೋಗಲಾರದೆ ದುಃಖದಿಂದ ಕಣ್ಣುಗಳಲ್ಲಿ ನೀರು ತಂದು, ಗದ್ಗದಕಂಠವುಳ್ಳವನಾದನು. ಆಗ ತನ್ನ ಪತಿಯ ವಿಯೋಗವಾಗುವದೆಂದು ಆ ಪತಿವ್ರತೆಯಾದ ಬ್ರಾಹ್ಮಣ ಸ್ತ್ರೀಯು ದುಃಖದಿಂದ ಬಾಷ್ಪಲೋಚನಗಳುಳ್ಳವಳಾದಳು. ಆಗ ಬ್ರಾಹ್ಮಣನು— "ಪ್ರಿಯಳೇ, ನಾನು ಭಾಗೀರಥೀನದಿಗೆ ಹೋಗಿಬರುತ್ತೇನೆ; ನೀನು ಶೋಕಮಾಡುವದನ್ನು ನೋಡಿ, ಬಾಲಕನು ಗಾಬರಿಯಾಗಿರುವನು; ಆದ್ದರಿಂದ ರೋದನಮಾಡಬೇಡ, ಈ ಬಾಲಕನನ್ನು ಸಮಾಧಾನಮಾಡು. ನಾನು ಬರುವ ವರೆಗೂ ಈ ರಾಜಗೃಹದಲ್ಲಿ ಸ್ವಸ್ಥಚಿತ್ತದಿಂದಿರು; ತೋಂಡದೇಶಾಧಿಪನು ನಿನ್ನನ್ನು ಪುತ್ರಿಯಂತೆ ನೋಡುವನು. ಪುತ್ರನನ್ನು ಜೋಕೆಮಾಡಿಕೊಂಡಿರು; ನಿನ್ನ ಪ್ರಸೂತಿಕಾಲದಲ್ಲಿಯೂ ರಾಜನು ನಿನ್ನನ್ನು ರಕ್ಷಿಸುವನು, ಶೋಕಮಾಡಬೇಡ, ನಾನು ಹೋಗಿಬರುವೆನು" ಎಂದು ಹೇಳಿ, ತನ್ನ ಸ್ತ್ರೀ-ಪುತ್ರರನ್ನು ಆಲಿಂಗನಮಾಡಿಕೊಂಡು ಹೊರಡಲುದ್ಯುಕ್ತನಾದನು. ವಿಪ್ರಪತ್ನಿಯು ತನ್ನ ಪತಿಯ ಮುಖವನ್ನು ಕಣ್ಣುತುಂಬ ನೋಡಿ,— "ನಾಥನೇ, ಗಂಗಾಸ್ನಾನವನ್ನು ಮಾಡಿ ಶೀಘ್ರವಾಗಿ ಬರುವವನಾಗು, ಶ್ರೀಹರಿಯು ಸರ್ವಕಾಲದಲ್ಲಿಯೂ ನಿನ್ನನ್ನು ರಕ್ಷಿಸುತ್ತಿರಲಿ; ನೀನು ಬರುವವರೆಗೂ ನಮಗೆ ಸುಖವಾಗುವದಿಲ್ಲ; ನಿನ್ನ ಮಾರ್ಗವನ್ನೇ ನಿರೀಕ್ಷಿಸುತ್ತೇವೆ," ಎಂದು ನುಡಿದು ಆ ಬ್ರಾಹ್ಮಣಸ್ತ್ರೀಯು ತನ್ನ ಪತಿಗೆ ಹೋಗಲನುಕೂಲವಾದಳು. ಕೂರ್ಮನು ಪುನಃ ಪುನಃ ತನ್ನ ಪತ್ನೀಪುತ್ರರನ್ನು ನೋಡುತ್ತ, ದುಃಖದಿಂದ ಹೊರಟುಹೋದನು. ಈ ಜಗತ್ತಿನಲ್ಲಿ ಮಾಯಾಪಾಶವು ಅಗಾಧವಾಗಿರುವದು !

ಅತ್ತ ಕೂರ್ಮನು ಹೊರಟು ಹೋಗಲು, ವಿಪ್ರಪತ್ನಿಯು ತನ್ನ ಪತಿಯು ಕಾಣದ ಹಾಗಾಗುವವರೆಗೂ ನೋಡುತ್ತ, ತನ್ನ ಕಣ್ಣೀರನ್ನು ಒರೆಸಿಕೊಂಡು ಪುತ್ರನನ್ನು ಸಮಾಧಾನಪಡಿಸಿ, ರಾಜಗೃಹಕ್ಕೆ ಹೋಗಿ, ರಾಜಪತ್ನಿಯ ಸಮೀಪ ದಲ್ಲಿ ತನ್ನ ಪತಿಯ ಚಿಂತೆಯಲ್ಲಿಯೇ ಇರುತ್ತಿದ್ದಳು. ಆಗ ತೋಂಡಮಾನನು ಸುಂದರಿಯಾದ ಆ ಬ್ರಾಹ್ಮಣ ಸ್ತ್ರೀಯನ್ನು ನೋಡಿ ತನ್ನ ಮನಸ್ಸಿನಲ್ಲಿ-ರೂಪ ವತಿಯಾದ ಈ ಸ್ತ್ರೀಯನ್ನು ನೋಡಿದರೆ, ಪುರುಷರು ಮೋಹಿಸಬಹುದು; ಯಾಕಂ ದರೆ ಪುರುಷರ ಬುದ್ಧಿಯು ಒಂದೇ ಪ್ರಕಾರವಿರುವದಿಲ್ಲ; ತ್ರಿವಿಧವಾಗಿರುವದು; ಆದ್ದರಿಂದ ಈ ಸ್ತ್ರೀಯನ್ನು ಯಾರೂ ಕಾಣದೆ ಇರುವ ಬೇರೆ ಒಂದು ಸ್ಥಳ ದಲ್ಲಿಟ್ಟು, ಅತಿಪ್ರಯತ್ನದಿಂದ ಈಕೆಯನ್ನು ರಕ್ಷಿಸುವದು ಯೋಗ್ಯವಾಗಿರುವದು; ಆ ಬ್ರಾಹ್ಮಣನಾದರೂ ನನ್ನ ಮೇಲಿನ ಅತಿವಿಶ್ವಾಸದಿಂದ ನನ್ನಲ್ಲಿ ಈಕೆಯನ್ನು ಇಟ್ಟು ಹೋಗಿರುವನು, ಎಂದು ಯೋಚನೆ ಮಾಡಿ, ಒಂದು ಗುಪ್ತವಾದ ಸ್ಥಳ ದಲ್ಲಿ ಮನೆಯನ್ನು ಕಟ್ಟಿಸಿ ಆ ಮನೆಯಲ್ಲಿ ಬ್ರಾಹ್ಮಣಪತ್ನಿಯನ್ನೂ, ಪುತ್ರನನ್ನೂ ಇಟ್ಟು, ಆರುತಿಂಗಳುಗಳವರೆಗೆ ಸಾಕಾಗುವಷ್ಟು ಎಲ್ಲ ಸಾಮಗ್ರಿಗಳನ್ನೂ, ಅಗ್ನಿ, ಉದಕ ಮೊದಲಾದವುಗಳನ್ನೂ ಇಟ್ಟು, ಆ ಮನೆಗೆ ಮುದ್ರೆಯನ್ನು ಮಾಡಿ, ಆಕೆಯ ಕಾವಲಿಗಾಗಿ ಅರ್ಧಕ್ರೋಶದಮೇಲೆ ಒಬ್ಬ ದೂತನನ್ನು ಇಟ್ಟು, ಸಮಾ ಧಾನವನ್ನು ಹೊಂದಿ, ಕಾರ್ಯಾಧೀನನಾಗಿ ರಾಜ್ಯಕಾರಭಾರವನ್ನು ಮಾಡುತ್ತ ಅದರಲ್ಲಿಯೇ ಆಸಕ್ತನಾಗಿ ಆ ಬ್ರಾಹ್ಮಣ ಸ್ತ್ರೀಯನ್ನು ಮರೆತುಬಿಟ್ಟನು.

ಇತ್ತ ಕೂರ್ಮಬ್ರಾಹ್ಮಣನು ಗಂಗಾಸ್ನಾನವನ್ನು ಮಾಡಿ, ಗಯಾಕ್ಷೇತ್ರಕ್ಕೆ ಹೋಗಿ, ತನ್ನ ಪಿತೃಗಳ ಉದ್ದೇಶವಾಗಿ ಗಯಾಶ್ರಾದ್ಧವನ್ನು ಮಾಡಿ, ಭಾಗೀ ರಥಿಯ ಕಾವಡಿಯನ್ನು ತನ್ನ ಹೆಗಲಮೇಲೆ ಹೊತ್ತುಕೊಂಡು, ಎರಡು ವರುಷ ಗಳ ಮೇಲೆ ಪುನಃ ತೋಂಡಮಾನರಾಜನ ಪಟ್ಟಣಕ್ಕೆ ಬಂದನು ಆಗ ರಾಜ ನನ್ನು ಕಂಡು, ಆ ಬ್ರಾಹ್ಮಣನು ಆಶೀರ್ವಾದ ಪೂರ್ವಕವಾಗಿ ಅವನನ್ನು ಸ್ತೋತ್ರಮಾಡಿ-ರಾಜಶ್ರೇಷ್ಠನೇ, ನಿನ್ನ ಅನುಗ್ರಹದಿಂದ ಗಂಗಾಸ್ನಾನವನ್ನು ಮಾಡಿ, ನಿನಗಾಗಿ ಈ ಪವಿತ್ರಕರವಾದ ಭಾಗೀರಥಿಯ ಉದಕವನ್ನು ತಂದಿರು ವೆನು; ಗಂಗಾಸ್ನಾನವನ್ನು ಮಾಡು, ಎಂದನು. ಹೀಗೆ ಮಾಡುತ್ತಿರುವ ಆ ಕೂರ್ಮ ಬ್ರಾಹ್ಮಣನನ್ನು ಕಂಡು, ಆತನ ಪತ್ನೀಪುತ್ರರನ್ನು ಸ್ಮರಿಸಿ ದಂಡದಿಂದ ತಾಡಿತವಾದ ಸರ್ಪದಂತೆಯೂ, ಚಕ್ರವ್ಯೂಹದಲ್ಲಿ ಮಡಿದ ಅಭಿಮನ್ಯುವಿನ

ವಾರ್ತೆಯನ್ನು ಕೇಳಿದ ಅರ್ಜುನನಂತೆಯೂ, ರಾಮಬಾಣದಿಂದ ತಾಡಿತನಾದ ರಾವಣನಂತೆಯೂ ತೋಂಡಮಾನನ ಅವಸ್ಥೆಯಾಯಿತು; ಅವನ ಹೃದಯವು ಗದಗದನೆ ನಡುಗಿತು. ಆದರೂ ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡು, ಸಮಾಧಾನವನ್ನು ಹೊಂದಿ ಸುಮ್ಮನಾದನು. ಆಗ ಬ್ರಾಹ್ಮಣನು ತಾನು ಬಂದ ಕೂಡಲೆ ಈ ರಾಜನು ಆದರಿಸದೆ, ನಾನು ನುಡಿದ ಮಾತಿಗೆ ಉತ್ತರವನ್ನು ಕೊಡದೆ ಭಯಚಕಿತನಾಗಿ ಸುಮ್ಮನೇ ಕುಳಿತನಲ್ಲ, ಎಂದು ಮನಸ್ಸಿನಲ್ಲಿ ವಿಕಲ್ಪವನ್ನು ತಾಳಿ ದುಃಖದಿಂದ ತೋಂಡಮಾನನನ್ನು ಕುರಿತು-ರಾಜನೇ, ನನ್ನ ಸ್ತ್ರೀಯು ನಾನು ಹೋಗುವ ಕಾಲದಲ್ಲಿ ಗರ್ಭಿಣಿಯಿದ್ದಳು; ಆಕೆಯು ಪುತ್ರನನ್ನು ಹಡೆದಳೋ ? ಪುತ್ರಿಯನ್ನು ಹಡೆದಳೋ ? ಹೇಳು. ಪೃಥ್ವೀಪತಿಯೇ, ನಾನು ಬಂದಕೂಡಲೆ ನನ್ನ ಮನಸ್ಸಿಗೆ ಸಮಾಧಾನಕರವಾದ ವಾರ್ತೆಯನ್ನೇ ಹೇಳಲಿಲ್ಲ; ಸರ್ವದಾ ಕ್ರೀಡಾಸಕ್ತನಾಗಿಯೂ, ಅಜ್ಞಾನಿಯಾಗಿಯೂ ಇರುವ ನನ್ನ ಬಾಲಕನು ತಟಾಕ ದಲ್ಲಿಯಾಗಲಿ, ಕೂಪದಲ್ಲಿಯಾಗಲಿ ಬಿದ್ದು ಮೃತನಾದನೋ ಹ್ಯಾಗೆ ? ಯಾಕೋ ನನ್ನ ಮನಸ್ಸಿಗೆ ದುಃಖವುಂಟಾಗಿರುವದು; ಮತ್ತು ಪತಿಭಕ್ತಿಯುಳ್ಳ ನನ್ನ ಸ್ತ್ರೀಯು ನಾನು ಒಂದಕ್ಷಣವೇ ನನ್ನ ದರ್ಶನಕ್ಕಾಗಿ ಬರುತ್ತಿದ್ದಳು; ಆದರೆ ಇನ್ನೂವರೆಗೂ ಆಕೆಯು ನನಗೆ ದೃಷ್ಟಿಗೋಚರವಾಗಲಿಲ್ಲ; ಆದ್ದರಿಂದ ನನ್ನ ಮನಸ್ಸು ಭ್ರಾಂತವಾಗಿದೆ. ಮಹಾರಾಜನೇ, ನಾನು ಪರದೇಶದಲ್ಲಿದ್ದಾಗ, ನನ್ನ ಸತೀ-ಪುತ್ರರನ್ನೇ ಸರ್ವಕಾಲದಲ್ಲಿಯೂ ನೆನಿಸುತ್ತಿದ್ದೆನು; ಆದ್ದರಿಂದ ಅವರ ಕುಶಲ ವೃತ್ತಾಂತವನ್ನು ಬೇಗನೆ ಹೇಳು, ಎಂದನು. ಆಗ ತೋಂಡಮಾನನು ಧೈರ್ಯದಿಂದ-ಬ್ರಾಹ್ಮಣನೇ, ಮನಸ್ಸಿನಲ್ಲಿ ವಿಕಲ್ಪವನ್ನು ಹೊಂದಿ ಭಯಪಡ ಬೇಡ; ನಿನ್ನ ಸ್ತ್ರೀಯು ಪುತ್ರಿಯನ್ನು ಪಡೆದು ತನ್ನ ಇಬ್ಬರು ಮಕ್ಕಳಿಂದ ಸಹಿತಳಾಗಿ ಸುಖದಿಂದಿರುವಳು; ನಿನ್ನಿನ ದಿವಸ ಶುಕ್ರವಾರ ವಿದ್ದದರಿಂದ ಶ್ರೀನಿ ವಾಸನ ಅಭಿಷೇಕ ಮಹೋತ್ಸವವನ್ನು ನೋಡುವದಕ್ಕಾಗಿ ನನ್ನ ಕನ್ನಿಕೆಯರು ವೇಂಕಟೇಶಾಲಯಕ್ಕೆ ಹೋಗಿರುವರು, ಅವರ ಸಂಗಡ ನಿನ್ನ ಪತ್ನಿಯು ತನ್ನ ಮಕ್ಕಳಿಂದ ಸಹಿತಳಾಗಿ ಹೋಗಿರುವಳು; ಇವತ್ತಿನ ಸಂಜೆಗೆ ಅಥವಾ ನಾಳಿನ ದಿವಸದಲ್ಲಿ ಬರುವಳು, ನೀನು ಸಂಶಯ ಪಡಬೇಡವೆಂದು ಆ ಬ್ರಾಹ್ಮಣನಿಗೆ ಸುಳ್ಳೇ ಸಮಾಧಾನವನ್ನು ಹೇಳಿದನು. ಹಾಗು ಅವನಿಗೆ ಅಡಿಗೆಯನ್ನು ಮಾಡಿ ಕೊಳ್ಳುವದಕ್ಕಾಗಿ ಸರ್ವಸಾಹಿತ್ಯವನ್ನು ಕೊಟ್ಟು ಕಳುಹಿದನು.

ಇತ್ತಲಾ ಬ್ರಾಹ್ಮಣನು ಪಾಕವನ್ನು ಸಿದ್ಧಮಾಡಿಕೊಳ್ಳುವದಕ್ಕೆ ಹೋಗಲು ತೋಂಡಮಾನನು ಏಕಾಂತದಲ್ಲಿ ತನ್ನ ಪುತ್ರನನ್ನು ಕರೆದು ಹೇಳಿದ್ದೇನಂದರೆ,– "ಪುತ್ರನೇ, ನಾನು ಪೂರ್ವದಲ್ಲಿ ಗುಪ್ತವಾದ ಸ್ಥಳದಲ್ಲಿ ಬ್ರಾಹ್ಮಣಸ್ತ್ರೀಯನ್ನು ಇಟ್ಟಿರುವ ಮನೆಗೆ ಹೋಗಿ, ಬೀಗ ಮುದ್ರೆಯನ್ನು ಮುರಿದು ಒಳಗೆ ಹೋಗಿ, ಆ ವಿಪ್ರಪತ್ನಿಯನ್ನೂ, ಆಕೆಯ ಮಕ್ಕಳನ್ನೂ ಕರೆದುಕೊಂಡು ಬಾ; ಆಲಸ್ಯ ಮಾಡದೆ ಶೀಘ್ರವಾಗಿ ಹೋಗು; ಅನ್ನಲು; ಆ ರಾಜಪುತ್ರನು ತಂದೆಯ ಆಜ್ಞೆಯಂತೆ ಹೋಗಿ. ಆ ಗೃಹದಲ್ಲಿ ಹೊಕ್ಕು ನೋಡಲು, ಬರೀ ಅಸ್ಥಿಗಳೇ ಬಿದ್ದಿದ್ದವು; ಅವುಗಳನ್ನು ನೋಡಿ ಗಾಬರಿಯಾಗಿ ದುಃಖದಿಂದ ಗದ್ಗದಕಂಠವುಳ್ಳವನಾಗಿ,– ಅಕಟಾ! ನಿಶ್ಚಯವಾಗಿ ನಮ್ಮ ವಂಶವು ನಾಶವಾಗುವ ಕಾಲವು ಪ್ರಾಪ್ತವಾಯಿತು; ಯಾಕಂದರೆ, ಆ ಬ್ರಾಹ್ಮಣನು ತನ್ನ ಸ್ತ್ರೀಪುತ್ರರ ಈ ಅವಸ್ಥೆಯನ್ನು ನೋಡಿದರೆ ಕೋಪಿಷ್ಠನಾಗಿ ನಮಗೆ ಶಾಪವನ್ನು ಕೊಟ್ಟು, ನಮ್ಮ ವಂಶವನ್ನೇ ನಾಶಮಾಡುವನಲ್ಲ! ಹ್ಯಾಗೆ ಮಾಡೋಣ? ಎಂದು ದುಃಖಪಡುತ್ತ ಬೇಗನೆ ಬಂದು ತನ್ನ ತಂದೆಗೆ ಈ ವರ್ತಮಾನವನ್ನು ತಿಳಿಸಿ–"ತಾತನೇ, ಆ ಬ್ರಾಹ್ಮಣ ಸ್ತ್ರೀಗೆ ಅನ್ನಾದಿಗಳನ್ನು ಕೊಡದೆ ಮರೆತು, ನಮ್ಮಿಂದ ಅವಿಚಾರಕರ್ಮವು ಮಾಡಲ್ಪಟ್ಟಿತು; ಇದಕ್ಕೆ ಮುಂದೆ ಹ್ಯಾಗೆ ಮಾಡಬೇಕು! ಮಹಾಘೋರತರವಾದ ಪ್ರಸಂಗವು ಪ್ರಾಪ್ತವಾಯಿತು," ಎಂದು ಹೇಳಲು, ತೋಂಡಮಾನನು ಪಶ್ಚಾತ್ತಾಪ ಪಟ್ಟು ತನ್ನನ್ನು ತಾನೇ ನಿಂದಿಸಿಕೊಳ್ಳುತ್ತ–"ಪುತ್ರನೇ. ನಾನು ಮಹಾಪಾಪಕರ್ಮವನ್ನು ಮಾಡಿದೆನು. ಮುಂದೆ ಹ್ಯಾಗೆ ಮಾಡಲಿ? ದೇವಾಧಿದೇವನೇ, ನಮಗೆ ಎಂಥ ಅನರ್ಥವನ್ನು ತಂದೆಯಲ್ಲ? ಭಕ್ತರಕ್ಷಕನೇ, ನೀನೇ ನಮ್ಮನ್ನು ಕಾಯಬೇಕಲ್ಲದೆ ನಮಗೆ ಮತ್ತೊಂದು ಗತಿಯಿಲ್ಲ. ಒಳ್ಳೇದು! ಆದದ್ದಾಯಿತು. ಪುತ್ರನೇ, ನಾವು ಈಗ ಶ್ರೀನಿವಾಸನಿಗೆ ಶರಣು ಹೋಗುವಾ ನಡೆ, ದಯಾನಿಧಿಯಾದ ಅವನೇ ನಮ್ಮನ್ನು ರಕ್ಷಿಸುವನು." ಎಂದು ಆ ಕ್ಷಣವೇ ತೋಂಡಮಾನನು ತನ್ನ ಮಗನಿಂದ ಸಹಿತನಾಗಿ ಬಿಲದ್ವಾರದಿಂದ ಶೇಷಾಚಲಕ್ಕೆ ಬಂದು, ಶ್ರೀನಿವಾಸನ ಪಾದಗಳನ್ನು ಘಟ್ಟಿಯಾಗಿ ಹಿಡಿದುಕೊಂಡು ರೋದನ ಮಾಡಹತ್ತಿದನು. ಆಗ ಶ್ರೀನಿವಾಸನು–"ರಾಜಶ್ರೇಷ್ಠನೇ, ಅಕಾಲದಲ್ಲಿ ನೀನು ಏನು ಕಾರಣ ಬಂದೆ? ನಿನ್ನಂಥ ಧುರಂಧರನಿಗೆ ದುಃಖವು ಯಾಕೆ ಪ್ರಾಪ್ತವಾಗಿರುವದು? ಹೇಳು" ಎನಲು, ಆಗ ತೋಂಡಮಾನನು ಉತ್ತರವನ್ನು ಕೊಡದೆ

ಹಾಗೇ ದುಃಖಪಡುತ್ತಿರಲು ಸರ್ವಾಂತರ್ಯಾಮಿಯಾದ ಶ್ರೀನಿವಾಸನು ಆ ರಾಜನ ಹೃದ್ಗತವನ್ನು ತಿಳಿದು—"ರಾಜನೇ,. ನಿನ್ನ ಮನೋಭಿಪ್ರಾಯವು ವಿದಿತ ವಾಯಿತು, ಪಾಪಿಷ್ಠನೇ, ಇಂಥ ಘೋರಕರ್ಮವನ್ನು ಮಾಡಿ, ನನ್ನ ಹತ್ತಿರ ಬಂದೆಯಾ ? ನಾನೇನು ಮಾಡಲಿ ? ಸತ್ತು ಹೋಗಲೋ ? ಇಲ್ಲವೆ ನಿನ್ನ ಬದಲು ನಾನೇ ಮಹಾ ನರಕವನ್ನು ಅನುಭೋಗಿಸಲೋ ? ಹಾಯ್ ! ಹಾಯ್ ! ಪರಮಕಷ್ಟವು ಪ್ರಾಪ್ತವಾಯಿತು !! ರಾಜನೇ, ನಾನೇ ಪಾಪಿಷ್ಠನು, ನಾನೇ ದುರಾಚಾರಿಯು; ಯಾಕಂದರೆ, ದುರಾತ್ಮಭಕ್ತನಾದ ನಿನಗೆ ರಾಜ್ಯೈಶ್ವರ್ಯಗಳನ್ನು ಕೊಡತಕ್ಕದ್ದಿದ್ದಿಲ್ಲ; ಈಗ ಆ ಐಶ್ವರ್ಯಮದದಿಂದ ನೀನು ಇಂಥ ಅನುಚಿತ ಕಾರ್ಯವನ್ನು ಮಾಡಿದೆ; ಆದ್ದರಿಂದಲೇ ನನ್ನ ಭಕ್ತರು ಮದೋನ್ಮತ್ತರಾಗದೆ ಸರ್ವಕಾಲದಲ್ಲಿಯೂ ಧರ್ಮದಿಂದ ನಡೆಯುವದಕ್ಕಾಗಿಯೇ ನಾನು ಅವರಿಗೆ ದರಿದ್ರತ್ವವನ್ನೇ ಕೊಡುತ್ತಿರುತ್ತೇನೆ. ಮಹಾ ಪಾಪಿಯೇ, ನೀನು ಎಂಥ ಕ್ರೂರ ಕರ್ಮವನ್ನು ಮಾಡಿದೆಯಲ್ಲ ! ನಾನು ಏನು ಮಾಡಲಿ, ಎಲ್ಲಿಗೆ ಹೋಗಲಿ ? ( ಸ್ವಲ್ಪ ಶಾಂತನಾಗಿ ) ಒಳ್ಳೇದು ! ನೀನಾದರೂ ನನ್ನ ಮೇಲಿನ ಭಕ್ತಿಯಲ್ಲಿ ಸ್ವಲ್ಪವಾದರೂ ಕೊರತೆಯನ್ನು ಮಾಡಿದವನಲ್ಲ; ಆದ್ದರಿಂದ ಹ್ಯಾಗಾದರೂ ಮಾಡಿ ನಿನ್ನ ಸ್ನೇಹದ ದೆಸೆಯಿಂದ ಆ ಮೃತರಾದವರನ್ನು ಬದುಕಿಸುವೆನು. ಈ ಕಲಿಯುಗದಲ್ಲಿ ಮಹಾ ಪಾಪಿಷ್ಠನಾದ ತೋಂಡಮಾನರಾಜನು ಶ್ರೀನಿವಾಸನಿಂದ ಉದ್ಧಾರನಾದನೆಂಬ ಕೀರ್ತಿಯು ಪ್ರಸಿದ್ಧವಾಗಲಿ. ರಾಜನೇ, ನಿನ್ನ ಪುತ್ರನನ್ನು ಕಳುಹಿ, ಆ ಮೃತರಾದವರ ಅಸ್ಥಿಗಳನ್ನು ಬೇಗನೆ ತರಿಸು, ಎಂದು ಹೇಳಲು, ತೋಂಡಮಾನನು ಆ ಮಾತಿಗೆ ಸಂತೋಷಪಟ್ಟು, ಅಸ್ಥಿಗಳನ್ನು ತರುವದಕ್ಕಾಗಿ ಕೂಡಲೆ ತನ್ನ ಪುತ್ರನನ್ನು ಕಳಿಸಿಕೊಟ್ಟನು.

ಆ ತೋಂಡಮಾನನ ಪುತ್ರನು ತನ್ನ ತಂದೆಯು ಅಪ್ಪಣೆಯ ಮೇರೆಗೆ ಬೇಗನೆ ಆ ಬ್ರಾಹ್ಮಣ ಸ್ತ್ರೀಯ ಮನೆಗೆ ಹೋಗಿ ಅಸ್ಥಿಗಳನ್ನೆಲ್ಲ ಒಟ್ಟುಗೂಡಿಸಿ, ಒಂದು ವಸ್ತ್ರದಲ್ಲಿ ಕಟ್ಟಿ ನರಯಾನದಲ್ಲಿಟ್ಟುಕೊಂಡು ವೇಂಕಟಾಚಲಕ್ಕೆ ಬಂದು, ತನ್ನ ತಂದೆ ಯಾದ ತೋಂಡಮಾನನಿಗೆ—"ತಾತನೇ, ಅಸ್ಥಿಗಳನ್ನು ತಂದಿದ್ದೇನೆ" ಎಂದು ಹೇಳಿ ದನು. ಆಗ ತೋಂಡಮಾನನು ಶ್ರೀನಿವಾಸನಿಗೆ—"ಸ್ವಾಮಿಯೇ, ಅಸ್ಥಿಗಳನ್ನು ತರಿಸಿದೆನು; ಇನ್ನುಮೇಲೆ ಅವರು ಬದುಕುವ ಹಾಗೆ ಅನುಗ್ರಹ ಮಾಡಬೇಕು" ಎಂದು ಹೇಳಿಕೊಂಡನು. ಆಗ ಶ್ರೀನಿವಾಸನು ಆ ಅಸ್ಥಿಗಳನ್ನು ತೆಗೆದುಕೊಂಡು

ತನ್ನ ಉತ್ತರೀಯ ವಸ್ತ್ರದಲ್ಲಿ ಕಟ್ಟಿಕೊಂಡು ಸ್ವಾಮಿ ಪುಷ್ಕರಣಿಯ ಪೂರ್ವ ದಿಕ್ಕಿನಲ್ಲಿರುವ ಪಾಂಡುತೀರ್ಥಕ್ಕೆ ಬಂದು, ಅದರ ತೀರದಲ್ಲಿದ್ದ ಒಂದು ಗುಹೆಯಲ್ಲಿ ತೋಂಡಮಾನನನ್ನೂ ಅವನ ಮಗನನ್ನೂ ಇಟ್ಟು, ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ತೀರದಲ್ಲಿಟ್ಟಿರುವ ಅಸ್ಥಿಗಳಮೇಲೆ ತನ್ನ ಬೊಗಸೆಯೊಳಗೆ ಉದಕವನ್ನು ತೆಗೆದುಕೊಂಡು ಪ್ರೋಕ್ಷಿಸಿ, ಅವುಗಳನ್ನು ತನ್ನ ಕೈಯಿಂದ ಸ್ಪರ್ಶ ಮಾಡಲು, ಆ ಅಸ್ಥಿಗಳಲ್ಲಿ ಜೀವದೆಸೆಯು ಪ್ರಾಪ್ತವಾಗಿ, ಶ್ರೀನಿವಾಸನ ಹಸ್ತ ಸ್ಪರ್ಶಮಾತ್ರದಿಂದಲೇ ಬ್ರಾಹ್ಮಣ ಸ್ತ್ರೀಯೂ, ಪುತ್ರನೂ, ಪುತ್ರಿಯೂ ಬದುಕಿದರು. ಆ ಸಮಯದಲ್ಲಿ ಇಂದ್ರಾದಿ ದೇವತೆಗಳು ಈ ಆಶ್ಚರ್ಯವನ್ನು ಕಂಡು ಆ ತೀರ್ಥದಮೇಲೆ ಪುಷ್ಪವೃಷ್ಟಿಯನ್ನು ಮಾಡಿ–"ಈ ತೀರ್ಥಪ್ರಭಾವದಿಂದ ಮೃತರಾದವರು ಬದುಕಿದ್ದರಿಂದ ಇದಕ್ಕೆ ಅಸ್ಥಿತೀರ್ಥ"ವೆಂದು ಹೆಸರನ್ನಿಟ್ಟರು. ಮತ್ತು ಮಹಾನರಕದಲ್ಲಿ ವಾಸಮಾಡಿದವರ ಅಸ್ಥಿಗಳನ್ನು ಈ ತೀರ್ಥದಲ್ಲಿ ಹಾಕಿದರೆ, ತತ್ಕಾಲದಲ್ಲಿ ಅವರು ಸ್ವರ್ಗವನ್ನು ಪಡೆಯುವರು; ಎಂದು ಮಾತಾಡುತ್ತಿದ್ದರು.

ಜನಕರಾಜನೇ, ಶ್ರೀನಿವಾಸನು ತನ್ನ ಗರ್ಭದಲ್ಲಿ ವಾಸಮಾಡಿದ ಆ ಬ್ರಾಹ್ಮಣ ಪತ್ನಿಯನ್ನೂ ಆಕೆಯ ಎರಡು ಮಕ್ಕಳನ್ನೂ ತೋಂಡಮಾನರಾಜನ ವಶಕ್ಕೆ ಕೊಟ್ಟು, ಅವನಿಗೆ—"ರಾಜನೇ, ನೀನು ನನಗೆ ಬಹಳೇ ಉಪಕಾರವನ್ನು ಮಾಡಿದ್ದರಿಂದ ಆ ಉಪಕಾರವನ್ನು ಸ್ಮರಿಸಿ, ಅದರ ನೂರುಪಾಲಷ್ಟು ಪ್ರತ್ಯುಪಕಾರವನ್ನು ಮಾಡಿದೆನು; ನೀನು ಆಕಾಶರಾಜನ ಅನುಜನಾದ್ದರಿಂದ ಆ ಆಪ್ತತ್ವದ ಭಿಡೆಯಿಂದ ಈ ಪ್ರತ್ಯುಪಕಾರವು ನನ್ನಿಂದ ಮಾಡಲ್ಪಟ್ಟಿತೆಂದು ತಿಳಿ; ರಾಜನೇ, ಇನ್ನು ಮೇಲೆ ನಾನು ಮೌನವನ್ನು ಧರಿಸುವೆನು. ಯಾರೊಡನೆಯೂ ಮಾತಾಡುವದಿಲ್ಲ; ನನ್ನ ಭಾಷಣವು ಅನ್ಯರ ಮುಖದಿಂದ ಆಗುವದು. ರಾಜನೇ, ನಿನ್ನ ಪಟ್ಟಣಕ್ಕೆ ಹೊರಟು ಹೋಗಿ ಸಮಸ್ತ ಜನರ ಸಾಕ್ಷಿಪೂರ್ವಕವಾಗಿ ಆ ಕೂರ್ಮ ಬ್ರಾಹ್ಮಣನಿಗೆ ಆತನ ಹೆಂಡತಿಯನ್ನೂ ಮಕ್ಕಳನ್ನೂ ಒಪ್ಪಿಸಿಕೊಟ್ಟು, ನಿಷ್ಕಂಟಕವಾದ ರಾಜ್ಯವನ್ನಾಳುತ್ತ ಸುಖದಿಂದಿರು" ಎಂದು ಹೇಳಿ, ಶ್ರೀನಿವಾಸನು ತಾನು ಆವೊತ್ತಿನಿಂದ ಮೌನವನ್ನು ಧರಿಸಿದನು.

ಇತ್ತ ತೋಂಡಮಾನನು ಶ್ರೀನಿವಾಸನಿಂದ ಅಪ್ಪಣೆಯನ್ನು ಹೊಂದಿ, ಬ್ರಾಹ್ಮಣ ಸ್ತ್ರೀ–ಪುತ್ರರಿಂದ ಸಹಿತನಾಗಿ ತನ್ನ ಪಟ್ಟಣಕ್ಕೆ ಬಂದು, ಕೂರ್ಮನನ್ನು ಕರೆಸಿ,—"ಬ್ರಾಹ್ಮಣನೇ, ನಿನ್ನ ಪತ್ನಿಯು ಪುತ್ರ–ಪುತ್ರಿಯರಿಂದ ಸಹಿತ

ಳಾಗಿ ದೈವಯೋಗದಿಂದ ಪ್ರಾಪ್ತಳಾದಳು. ಇವರನ್ನು ಕರೆದುಕೋ" ಎಂದು ಹೇಳಿ, ಅವರ ಸರ್ವ ವೃತ್ತಾಂತವನ್ನೂ ಬ್ರಾಹ್ಮಣನಿಗೆ ಹೇಳಿದನು. ಆಗ ಕೂರ್ಮನು ಇವರು ಮೃತರಾಗಿ ಪುನಃ ಬದುಕಿದ ಸಂಗತಿಯನ್ನು ಕೇಳಿ, ಪರ ಮಾಶ್ಚರ್ಯದಿಂದ ತನ್ನ ಪತ್ನಿಗೆ "ಪ್ರಿಯಳೇ, ನೀನು ಇಷ್ಟು ದಿವಸಗಳತನಕ ಎಲ್ಲಿ ವಾಸಿಸಿದ್ದಿ? ಆ ಎಲ್ಲ ಸಂಗತಿಯನ್ನು ಹೇಳು" ಎನಲು, ಬ್ರಾಹ್ಮಣಪತಿ ಯಾದ ಮಹಾಲಕ್ಷ್ಮಿಯು—"ಪತಿಯೇ, ಅಗಾಧವಾದ ದೇವಮಾಯೆಯನ್ನು ಎಷ್ಟೆಂತ ಹೇಳಲಿ? ಆ ಪರಮಾತ್ಮನ ಉದರದಲ್ಲಿ ನಾನು ವಾಸಮಾಡಿದ್ದೆನು. ಅಲ್ಲಿ ಅನೇಕ ಲೋಕಗಳನ್ನೂ, ಪರ್ವತಗಳನ್ನೂ, ಬ್ರಹ್ಮನೇ ಮೊದಲಾದ ದೇವತೆ ಗಳನ್ನೂ, ಸಾತ್ವಿಕ, ರಾಜಸ, ತಾಮಸಪ್ರಕೃತಿಯವರನ್ನೂ ನೋಡಿದೆನು" ಎಂದು ಹೇಳಿದಳು. ಅನಂತರ ರಾಘವನೆಂಬ ಆ ಬ್ರಾಹ್ಮಣಪುತ್ರನು—"ಪಿತನೆ; ನಾನ್ನು ಆಶ್ಚರ್ಯವನ್ನು ನೋಡಿದಷ್ಟು ಮತ್ತಾರೂ ನೋಡಿರಲಿಕ್ಕಿಲ್ಲ; ಯಾಕಂದರೆ ನಾನು ದೇವರ ಉದರದಲ್ಲಿದ್ದಾಗ ಮೂರು ಕಣ್ಣುಳ್ಳವರನ್ನು ಕಂಡೆನು" ಎಂದನು. ಆಗ ಹೆಣ್ಣು ಕೂಸು—"ತಾತನೇ, ನಾನು ಏಳು ಸಮುದ್ರಗಳನ್ನೂ, ಗುಹೆಗಳನ್ನೂ, ಗಿರಿಗಳನ್ನೂ, ವನಗಳನ್ನೂ, ದೇವತೆಗಳನ್ನೂ, ರಾಕ್ಷಸರನ್ನೂ ದೇವರ ಹೊಟ್ಟೆ ಯಲ್ಲಿ ನೋಡಿದೆನು" ಎಂದು ಹೇಳಿತು. ಆಗ ಬ್ರಾಹ್ಮಣನು ಈ ಎಲ್ಲ ಆಶ್ಚರ್ಯ ವನ್ನು ಕೇಳಿ, ಲಜ್ಜಿತನಾಗಿ, ತನ್ನನ್ನು ತಾನೇ ನಿಂದಿಸಿಕೊಳ್ಳಹತ್ತಿದನು; ತನ್ನ ಪತ್ನಿಗೂ ಮಕ್ಕಳಿಗೂ—"ನೀವು ಪುಣ್ಯವಂತರು, ಯಾಕಂದರೆ, ಎಲ್ಲ ಲೋಕಗ ಳಿಗೆ ಆಶ್ರಯ ಭೂತನಾಗಿಯೂ, ಸ್ಥಾವರ-ಜಂಗಮ ವಸ್ತುಗಳ ವಾಸಕ್ಕೆ ಕಾರಣ ನಾಗಿಯೂ ಇರುವ ಶ್ರೀಮನ್ನಾರಾಯಣನ ಉದರದಲ್ಲಿ ನೀವು ಇದ್ದುಕೊಂಡು ಅಲ್ಲಿ ಎಲ್ಲ ಲೋಕಗಳನ್ನೂ, ಮನುಷ್ಯರಿಗೆ ಲಭ್ಯವಾಗದ ಇರುವ ತ್ರಿನೇತ್ರನು ಮೊದಲಾದ ದೇವತೆಗಳನ್ನೂ ನೋಡಿದಿರಿ; ಅಂಪ ಮೇಲೆ ನೀವೇ ಧನ್ಯರು. ನಾನು ವೇದಾಧ್ಯಯನಮಾಡಿ, ಘೋರವಾದ ತಪಸ್ಸನ್ನು ಮಾಡುತ್ತಲಿದ್ದರೂ, ಶ್ರೀಹ ರಿಯ ಲೀಲೆಯನ್ನು ಏನೂ ಕಾಣಲಿಲ್ಲ; ಆದ್ದರಿಂದ ನನ್ನ ವೇದಾಧ್ಯಯನಕ್ಕೂ ನನ್ನ ತಪಸ್ಸಿಗೂ ಧಿಕ್ಕಾರವಿರಲಿ, ನೀವೇ ಪವಿತ್ರರು" ಎಂದು ಕೂರ್ಮನು ತನ್ನ ಸತೀ-ಸುತರನ್ನು ಹೊಗಳಿದನು. ಹಾಗು ತೋಂಡಮಾನನಿಗೆ—ರಾಜನೇ, ನೀನು ಮೃತರಾದ ನನ್ನ ಪತ್ನೀಪುತ್ರರನ್ನು ಬದುಕಿಸಿ ಕೊಟ್ಟೆ; ಈ ಜಗತ್ತಿನಲ್ಲಿ ನೀನೇ ಧನ್ಯನು, ಜಗದ್ರಕ್ಷಕನಾದ ಶ್ರೀನಿವಾಸನ ಭಕ್ತರಲ್ಲಿ ನೀನೇ ಹೆಚ್ಚಿನವನು;

ಎಂದು ಹೊಗಳುತ್ತಿರಲು, ರಾಜನು ಆನಂದಪಟ್ಟು–ಬ್ರಾಹ್ಮಣನೇ, ನಿನ್ನ ಸತೀ ಸುತರೇ ಭಾಗ್ಯವಂತರೆಂದು ತಿಳಿ, ನಾನೇನು ಅಷ್ಟು ಯೋಗ್ಯತೆಯುವನಲ್ಲವೆಂದು ನುಡಿದನು. ಆಗ ಬ್ರಾಹ್ಮಣನು ತನ್ನ ವಾಸಸ್ಥಳಕ್ಕೆ ಹೋಗಲುದ್ಯುಕ್ತನಾಗಲು, ಧರ್ಮಿಷ್ಠನಾದ ತೋಂಡಮಾನನು ಆ ಬ್ರಾಹ್ಮಣನಿಗೆ ಸನ್ಮಾನವನ್ನು ಮಾಡಿ ಕಳಿಸಿಕೊಟ್ಟನು.

ಇತ್ತ ತೋಂಡಮಾನನು ತನ್ನ ಮನಸ್ಸಿನಲ್ಲಿ–ರಾಜ್ಯಕಾರ್ಯದಲ್ಲಿ ಬಿದ್ದು ಬ್ರಾಹ್ಮಣ ಪತ್ನೀಪುತ್ರರನ್ನು ಮರೆತದ್ದನ್ನೂ, ಪುನಃ ಶ್ರೀನಿವಾಸನು ತನ್ನಮೇಲೆ ಅನುಗ್ರಹಮಾಡಿದ್ದನ್ನೂ, ಆ ಪಾಂಡುತೀರ್ಥದ ಮಾಹಾತ್ಮ್ಯವನ್ನೂ ಚಿಂತಿಸಿ, ಶ್ರೀಹರಿಯ ಲೀಲೆಯನ್ನು ಹೊಗಳುತ್ತ ಮತ್ತೆ ಆಲೋಚಿಸಿ, “ನಾನು ಮಾಡಿದ ಪಾಪಕರ್ಮಕ್ಕೆ ಶ್ರೀನಿವಾಸನು ನನ್ನಮೇಲೆ ಕುಪಿತನಾದನಲ್ಲ! ಇದಕ್ಕೆ ಮುಂದೆ ಹ್ಯಾಗೆಮಾಡಲಿ ! ಅವನು ನನಗೆ ಪ್ರಸನ್ನನಾಗುವಂತೆ ನಾನು ಏನು ಮಾಡಲಿ!” ಎಂದು ಆಲೋಚಿಸುತ್ತ ಗುರುವಾದ ಆಂಗಿರಸನಿಗೆ–“ಗುರುಗಳೇ, ಶ್ರೀನಿವಾಸನು ನನ್ನಮೇಲೆ ತುಷ್ಟನಾಗುವ ವಿಷಯದಲ್ಲಿ ಯಾವ ಉಪಾಯವನ್ನು ಮಾಡತಕ್ಕದ್ದು” ಎಂದು ಕೇಳಲು, ಅದಕ್ಕೆ ಗುರುಗಳು–ತೋಂಡಮಾನರಾಜನೇ ಶ್ರೀನಿವಾಸನ ಅನುಗ್ರಹವಾಗುವದಕ್ಕೆ ನಿತ್ಯದಲ್ಲಿಯೂ ನೀನು ಸಹಸ್ರನಾಮಗಳಿಂದ ಸಹಸ್ರ ತುಳಸೀದಳಗಳನ್ನು ಅವನಿಗೆ ಅರ್ಪಿಸಿ ಭಕ್ತಿಭಾವದಿಂದ ಆತನ ಪೂಜೆಯನ್ನು ಮಾಡು. ಆ ತುಳಸಿಯು ಶ್ರೀನಿವಾಸನ ಪ್ರೀತಿಗೆ ಕಾರಣವಾಗಿರುವಳು; ಅದರಿಂದ ಅವನು ನಿನಗೆ ಪ್ರೀತನಾಗುವನು” ಎಂದು ಹೇಳಿದನು. ಅದನ್ನು ಕೇಳಿ ತೋಂಡಮಾನನು ಸಂತೋಷಪಟ್ಟು, ಗುರುಗಳು ಹೇಳಿದಂತೆ ನಿತ್ಯದಲ್ಲಿಯೂ ಸುವರ್ಣರತ್ನಗಳಿಂದ ನಿರ್ಮಿತವಾದ ಸಹಸ್ರ ತುಳಸೀ ದಳಗಳನ್ನು ಶ್ರೀವೆಂಕಟೇಶ ಸಹಸ್ರನಾಮಗಳಿಂದ ಶ್ರೀನಿವಾಸನಿಗೆ ಸಮರ್ಪಿಸುತ್ತಿದ್ದನು.

ಈ ಪ್ರಕಾರ ಭಕ್ತಿಯಿಂದ ರಾಜನು ಮೂರು ತಿಂಗಳುಗಳವರೆಗೆ ಶ್ರೀನಿವಾಸನ ಪೂಜೆಯನ್ನು ಮಾಡುತ್ತಿದ್ದರೂ ಶ್ರೀನಿವಾಸನು ಮೌನವನ್ನು ಬಿಡಲಿಲ್ಲ; ಆದ್ದರಿಂದ ತೋಂಡಮಾನನು ಬಹು ದುಃಖಿತನಾಗಿ ಶ್ರೀನಿವಾಸನಿಗೆ–ಸ್ವಾಮಿ ಸರ್ವಜ್ಞನೇ, ದೊಡ್ಡವರು, ತಮ್ಮ ಭಕ್ತರು ಮಾಡಿದ ಅಪರಾಧಗಳನ್ನು ಲಕ್ಷ್ಯಕ್ಕೆ ತರುವದಿಲ್ಲ; ಕ್ಷರಾಕ್ಷರ ಪುರುಷರಲ್ಲಿ ಶ್ರೇಷ್ಠನಾದ ಶ್ರೀನಿವಾಸನೇ, ಭಕ್ತನಾದ ನಾನು ಮಾಡಿದ ಅಪರಾಧಗಳನ್ನು ಕ್ಷಮಿಸಿ ನನ್ನ ಮೇಲೆ ಅನುಗ್ರಹವನ್ನು

ಮಾಡಬೇಕು, ಎಂದು ಬೇಡಿಕೊಂಡನು. ಆಗ ಶ್ರೀನಿವಾಸನು ತೋಂಡಮಾನನಿಗೆ ಅಪ್ರತ್ಯಕ್ಷನಾಗಿ ನಿಂತು-ತೊಂಡಮಾನನೇ, ಸ್ತ್ರೀಪುತ್ರಘಾತಕ ರೂಪವಾದ ಘೋರ ಕರ್ಮವನ್ನು ಮಾಡಿ ಈಗ ದುಃಖಪಟ್ಟರೆ ಹ್ಯಾಗೆ ಮುಕ್ತನಾಗುವೆ ? ನಿನ್ನ ಅಗ್ರಜನಾದ ಆಕಾಶರಾಜನ ಉಪಕಾರದಿಂದ ನಿನ್ನನ್ನು ರಕ್ಷಿಸಿದೆನೆಂದು ತಿಳಿ; ನೀನು ಮಾಡುವ ಭಕ್ತಿಯಿಂದಲ್ಲ. ನಿನ್ನಂಥ ಭಕ್ತರು ಭೂಮಿಯಲ್ಲಿ ನನಗೆ ಬಹುಜನರಿರುವರು; ಮತ್ತು ನಿನಗಿಂತ ಅಧಿಕವಾದವರೂ ಇರುವರು, ಎಂದು ನುಡಿಯಲು, ಆ ಸಮಯದಲ್ಲಿ ತೋಂಡಮಾನನು ಅಜ್ಞಾನವನ್ನು ಹೊಂದಿ-ಶ್ರೀನಿವಾಸನೇ, ಈ ಲೋಕದಲ್ಲಿ ಉಪಕಾರವನ್ನು ಮಾಡುವ ಜನರು ತಾವು ಮಾಡಿದ ಉಪಕಾರವನ್ನು ಹೇಳಿಕೊಳ್ಳುವದಿಲ್ಲ; ಮೂಢನಾದ ಸೇವಕನು (ಭಕ್ತನು) ತಾನು ಮಾಡಿದ ಸೇವೆಯನ್ನು ಹೇಳಿಕೊಳ್ಳುವದಿಲ್ಲ; ಆದರೂ ನಾನು ಹೇಳುವದೇನಂದರೆ,- "ಸ್ವಾಮಿಯೇ ತ್ರಿಲೋಕಗಳಲ್ಲಿ ನನ್ನ ಸಮಾನ ಭಕ್ತನು ಯಾವನಿರುವನು ? ಭಕ್ತರಲ್ಲಿ ಶ್ರೇಷ್ಠನಾದವನು ನಾನೇ; ದಯಾಶೀಲರಲ್ಲಿ ಶ್ರೇಷ್ಠನಾದವನು ನೀನೇ, ಎಂದು ನಾನು ನಿಶ್ಚಯವಾಗಿ ತಿಳಿದಿರುವೆನು" ಹೀಗೆಂದ ಈ ಗರ್ವೋಕ್ತಿಯನ್ನು ಕೇಳಿ ಶ್ರೀನಿವಾಸನು ಪುನಃ ಉತ್ತರವನ್ನು ಕೊಡದೆ ಸುಮ್ಮನಾದನು.

ಇತ್ತ ತೋಂಡಮಾನನು ತಾನು ಮಾಡುವ ಪೂಜೆಯನ್ನು ಬಿಡದೆ, ನಿತ್ಯದಲ್ಲಿಯೂ ಸುವರ್ಣ ತುಳಸೀ ದಳಗಳಿಂದ ಶ್ರೀನಿವಾಸನನ್ನು ಪೂಜಿಸುತ್ತಲೇ ಇದ್ದನು. ಹೀಗಿರಲು, ಒಂದಾನೊಂದು ದಿವಸ ಆ ತೋಂಡಮಾನನು ಶ್ರೀನಿವಾಸನನ್ನು ದಿನದಂತೆ ಪೂಜಿಸುವದಕ್ಕಾಗಿ ಬಂದು ನೋಡಲು, ತಾನು ನಿನ್ನನ ದಿವಸದಲ್ಲಿ ಅವನ ಕೊರಳಲ್ಲಿ ಹಾಕಿದ ಸುವರ್ಣ ತುಳಸೀ ಮಾಲೆಯು ಇದ್ದಿಲ್ಲ. ಅದನ್ನು ಕಂಡು ಅತ್ತಿತ್ತ ನೋಡುತ್ತಿರಲು ದೂರದಲ್ಲಿ ಬಿದ್ದಿರುವ ಆ ಮಾಲೆಯನ್ನು ಕಂಡನು; ಅದರ ಬದಲು, ಶ್ರೀನಿವಾಸನ ಕೊರಳಲ್ಲಿ ಪಾದಪರ್ಯಂತವಾಗಿ ಇರುವ ಮಣ್ಣಿನ ತುಳಸೀ ಮಾಲೆಯನ್ನು ನೋಡಿದನು; ತಾನು ಏರಿಸಿದ ಸುವರ್ಣ ತುಳಸೀ ದಳಗಳ ಮೇಲೆಯೂ ಮಣ್ಣಿನ ತುಳಸೀ ದಳಗಳ ರಾಶಿಯೇ ಬಿದ್ದಿತ್ತು. ಇದನ್ನೆಲ್ಲ ನೋಡಿ ತೋಂಡಮಾನನು ತನ್ನ ಮನಸ್ಸಿನಲ್ಲಿ-ನಾನು ಭಕ್ತಿಯಿಂದ ಏರಿಸಿದ ಸುವರ್ಣ ತುಳಸೀದಳಗಳನ್ನೂ, ಮಾಲೆಯನ್ನೂ ಶ್ರೀನಿವಾಸನು ಸ್ವೀಕರಿಸದೆ ಇರುವನಲ್ಲ! ಅಕಟಾ, ಶ್ರೀಹರಿಗೆ ನಾನು ಇಷ್ಟು ಬೇಸರಾದೆನೇ ? ಇನ್ನು ಮುಂದೆ ಹ್ಯಾಗೆಮಾಡಲಿ ? ಎಂದು ಅತ್ಯಂತ ದುಃಖದಿಂದ ರೋದನ ಮಾಡುತ್ತ-

ಶ್ರೀನಿವಾಸನೇ, ನಾನು ಮಹಾಘೋರಪಾಪಿಯೇ ಹೌದು, ಆದರೂ ಅನಾಥ ನಾದ ನನ್ನ ಮೇಲೆ ಇಷ್ಟೇಕೆ ಉಪೇಕ್ಷೆಯನ್ನು ಮಾಡುತ್ತೀ? ನಾನು ಮಾಡಿದ ಅಪರಾಧಗಳನ್ನು ನೀನು ಕ್ಷಮಿಸದಿದ್ದರೆ ಮುಂದೆ ನನ್ನ ಗತಿಯೇನು ? ದಯಾಂಬುಧಿಯೇ, ನನ್ನಮೇಲೆ ದಯವನ್ನು ಮಾಡು. ದೇವಾಧಿದೇವನೇ, ನಾನು ನಿನಗೆ ಭಕ್ತಿಯಿಂದ ಏರಿಸಿದ ಸುವರ್ಣ ತುಳಸೀ ದಳಗಳನ್ನು ಬಿಟ್ಟು, ಯಾವನೋ ಒಬ್ಬ ಶ್ರೇಷ್ಠನಾದ ಭಕ್ತನಿಂದ ಸಮರ್ಪಿಸಲ್ಪಟ್ಟ ಮೃಣ್ಮಯವಾದ ತುಳಸೀ ಮಾಲೆಯನ್ನು ಸ್ವೀಕಾರ ಮಾಡುತ್ತಲಿರುವೆಯಲ್ಲ! ದೇವನೇ, ಅಂಥ ಶ್ರೇಷ್ಠಭಕ್ತನು ಯಾವ ನಿರುವನು ಹೇಳು, ಎಂದು ನುಡಿದನು. ಆಗ ಶ್ರೀನಿವಾಸನಿಗೆ ಸ್ವಲ್ಪ ಅಂತಃಕರಣ ಹುಟ್ಟಿ,-ತೋಂಡಮಾನನೇ, ಈ ಲೋಕದಲ್ಲಿ ತ್ರಿಗುಣಾತ್ಮಕರಾದ ನನ್ನ ಭಕ್ತರು ಎಷ್ಟೋ ಜನರಿರುವರು, ಅವರಲ್ಲಿ ಭೀಮನಾಮಕನಾದ ಒಬ್ಬ ದರಿದ್ರ ಕುಲಾಲನು ಇಲ್ಲಿಂದ ಉತ್ತರ ದಿಕ್ಕಿನಲ್ಲಿ ಒಂದು ಯೋಜನದಮೇಲೆ ಇರುವನು; ನನ್ನ ಮೇಲಿನ ಅವನ ಭಕ್ತಿಯನ್ನು ಎಷ್ಟೆಂತ ಹೇಳಲಿ? ತನ್ನ ಗೃಹದ ಒಂದು ಗೋಡೆಯ ಬಿಲದಲ್ಲಿ ದಾರುಮಯವಾದ ನನ್ನ ಮೂರ್ತಿಯನ್ನು ಪ್ರತಿಷ್ಠಿಸಿ, ನಿತ್ಯದಲ್ಲಿಯೂ ನನ್ನ ಪ್ರಿಯಭಕ್ತನಾದ ಆ ಕುಲಾಲನು ತನ್ನ ಕೆಲಸಗಳನ್ನೆಲ್ಲ ಮುಗಿಸಿಕೊಂಡು ಸ್ನಾನವನ್ನು ಮಾಡಿ ವಿಧಿಪೂರ್ವಕವಾಗಿ ಮೃಣ್ಮಯ ತುಳಸೀ ದಳಗಳಿಂದ ನನ್ನನ್ನು ಪೂಜಿಸುತ್ತಿರುವನು, ಅವನ ಅತ್ಯಂತವಾದ ಭಕ್ತಿಯಿಂದ ನಾನು ಸಂತುಷ್ಟನಾಗಿ ಆ ಮಣ್ಣಿನ ತುಳಸೀದಳಗಳನ್ನು ಪ್ರತಿನಿತ್ಯದಲ್ಲಿಯೂ ಗ್ರಹಣಮಾಡುತ್ತೇನೆ. ರಾಜನೇ, ನೀನು ಆ ಕುಲಾಲನ ಮನೆಗೆ ಹೋಗಿ ಅವನನ್ನೂ, ಅವನ ಸ್ತ್ರೀಯನ್ನೂ ಕಂಡು ಬಾ, ಅಂದರೆ ಅವನ ಭಕ್ತಿಯು ಎಷ್ಟಿರುವದೆಂಬದು ನಿನಗೆ ತಿಳಿಯುವದು; ನೀನು ಪೂರ್ವದಲ್ಲಿ-ನಾನೇ ಭಕ್ತರಲ್ಲಿ ಶ್ರೇಷ್ಠನು; ನನಗೆ ಸಮಾನರು ಯಾರೂ ಇಲ್ಲೆಂದು ಹೇಳಿದ್ದೆಯಲ್ಲ; ಆ ಕುಲಾಲನನ್ನು ನೋಡಿದರೆ ನಿನಗೆ ಬಂದಿರುವ ಅಹಂಕಾರವು ನಾಶವಾಗುವದು, ಎಂದು ಹೇಳಿದನು.

ತೋಂಡಮಾನನು ಶ್ರೀನಿವಾಸನ ಆ ವಚನಗಳನ್ನು ಕೇಳಿದ ಕೂಡಲೆ ಅವನ ಗರ್ವವು ನಷ್ಟವಾಗಿ, ತನ್ನ ಸಕಲ ರಾಜವೈಭವಗಳನ್ನು ಬಿಟ್ಟು, ಅಲ್ಲಿಂದ ಹೊರಟು ಆ ಕುಲಾಲನನ್ನು ಕಾಣಬೇಕೆಂದು ತನ್ನ ಪಾದಗಳಿಂದ ನಡೆಯುತ್ತಲೂ ಆ ಭಗವದ್ಭಕ್ತನಾದ ಕುಲಾಲನು ಇರುವ ದಿಕ್ಕಿಗೆ ನಮಸ್ಕಾರವನ್ನು ಮಾಡುತ್ತಲೂ ಶೀಘ್ರದಿಂದ ನಡೆದನು.

ಹೀಗೆ ತೋಂಡಮಾನನು ಹೋಗುತ್ತಿರಲಾಗಿ ಅವನು ಮಾರ್ಗದಲ್ಲಿ ಜನರನ್ನು ಕಂಡು—"ಎಲೈ ಜನರೇ, ಭಗವದ್ಭಕ್ತನಾದ ಭೀಮಕುಲಾಲನು ಇರುವ ಸ್ಥಳವು ಯಾವದು"ಎಂದು ಕೇಳುತ್ತಿರಲು, ಜನರು ಆಶ್ಚರ್ಯಪಟ್ಟು—ರಾಜನೇ, ಶ್ರೀಹರಿಭಕ್ತಿಪರಾಯಣನಾಗಿ ನಿತ್ಯದಲ್ಲಿಯೂ ಶ್ರೀನಿವಾಸನ ಪೂಜೆಯನ್ನು ಮಾಡುವ ಭೀಮ ಕುಂಬಾರನ ಮನೆಯು ಇದೇ" ಎಂದು ತೋರಿಸಲು ತೋಂಡಮಾನನು ಆ ಮನೆಯ ಸಮೀಪಕ್ಕೆ ಹೋಗಿ, ಅವನ ಗ್ರುಹವನ್ನು ಹೊಗಳಿ, ದ್ವಾರತೋರಣದ ಸಮೀಪಕ್ಕೆ ಬಂದು ಭ್ರಾಂತನಾಗಿ ಭೂಮಿಯಲ್ಲಿ ಬಿದ್ದನು. ಆ ಸಮಯದಲ್ಲಿ ಅಲ್ಲಿ ಕೂಡಿರುವ ಜನರು ಗಾಬರಿಯಾಗಿ ಭೀಮಕುಲಾಲನಿಗೆ—ಎಲೈ ಕುಲಾಲನೇ, ತೋಂಡಮಾನರಾಜನು ನಿನ್ನ ಅಂಗಣದಲ್ಲಿ ಬಿದ್ದಿರುವನು. ನಿನಗೆ ಸ್ವಲ್ಪವಾದರೂ ಎಚ್ಚರಿಕೆಯು ಇಲ್ಲೆಂದು ತೋರುತ್ತದೆ." ಎಂದು ನುಡಿದರು. ಅವರ ಮಾತುಗಳನ್ನು ಕೇಳಿ ಕುಲಾಲನು ಗಾಬರಿಗೊಂಡು,—ಅಯ್ಯೋ! ಪರಮಕಷ್ಟವು!! ರಾಜನು ನನ್ನ ಮನೆಯತನಕ ಬರುವಂಥ ಅಪರಾಧವನ್ನು ನಾನೇನು ಮಾಡಿದ್ದೇನೆ! ಅವನ ಆಜ್ಞೆಯನ್ನು ನಾನೆಂದಿಗೂ ಮೀರಿಲ್ಲ; ಈಗ ಆತನು ಮಾಡಿದ ಆಜ್ಞೆಯಂತೆ ಶ್ರೀನಿವಾಸನ ನೈವೇದ್ಯದ ಸಲುವಾಗಿ ೧೦೦ ಕೊಡಗಳನ್ನು ಸಿದ್ಧಮಾಡಿ ಇವತ್ತಿನ ದಿವಸವಲ್ಲಿಯೇ ಕೊಡುತ್ತೇನೆ, ಎಂದು ತನ್ನಷ್ಟಕ್ಕೆ ತಾನೇ ಮಾತಾಡುತ್ತಿದ್ದನು. ಇತ್ತ ಹೊರಗೆ ತೋಂಡಮಾನನು ಎಚ್ಚರಗೊಂಡು ಅಲ್ಲಿ ನಿಂತಿರುವ ಜನರಿಗೆ—"ಶ್ರೀಹರಿಯ ಭಕ್ತನಾದ ಭೀಮಕುಲಾಲನು ಯಾವನಿರುವನು! ಅವನನ್ನು ನನಗೆ ತೋರಿಸಿರಿ, ಅವನ ಪಾದಗಳಿಗೆ ನಮಸ್ಕರಿಸುತ್ತೇನೆ," ಎಂದು ಹೇಳಿದನು. ಆ ಸಮಯದಲ್ಲಿ ಶ್ರೀನಿವಾಸನು ಕುಲಾಲನ ಮುಂಭಾಗದಲ್ಲಿ ಪ್ರತ್ಯಕ್ಷನಾಗಿ ನಿಂತನು. ಆಗ ಭೀಮನು ಶ್ರೀಹರಿಯನ್ನು ಕಂಡು ಹರ್ಷದಿಂದ ಮೈಯುಬ್ಬಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಸ್ತೋತ್ರಮಾಡಹತ್ತಿದನು,—ಶ್ರೀನಿವಾಸನೇ, ವೈಕುಂಠಪುರವೇ ನಿನ್ನ ನಿಜಮಂದಿರವು, ಸಮುದ್ರರಾಜನ ಪುತ್ರಿಯಾದ ಲಕ್ಷ್ಮೀದೇವಿಯೇ ನಿನ್ನ ಪತ್ನಿಯು, ಲೋಕಕ್ಕೆ ಪಿತಾಮಹನಾದ ಬ್ರಹ್ಮನೇ ನಿನ್ನ ನಾಭಿಯಿಂದ ಉತ್ಪನ್ನನಾದ ನಿನ್ನ ಪುತ್ರನು; ಇಂಥ ಮಹಾತ್ಮನಾದ ನಿನ್ನನ್ನು ಕುಲಾಲ ಜನ್ಮವುಳ್ಳವನಾದ ನಾನು ಏನು ಸ್ತೋತ್ರ ಮಾಡಲಿ! ದೇವಾಧಿದೇವನೇ, ಮಂಗಳಕರಳಾದ ಭಾಗೀರಥಿಯು ನಿನ್ನ ಪಾದದಿಂದ ಉತ್ಪನ್ನಳಾಗಿರುವಳು, ಅಂಥ ಭಾಗೀರಥಿಯೇ ನಿನ್ನ ಪುತ್ರಿಯು.

ಸ್ವಾಮಿಯೇ, ಸಹಸ್ರ ಫಣೆಗಳಿಂದ ಯುಕ್ತನಾದ ಶೇಷನೇ ನಿನ್ನ ಆಸನವು, ಬಲವಂತನಾದ ಗರುಡನೇ ನಿನ್ನ ವಾಹನವು, ನಕ್ಷತ್ರ ಮಾಲೆಯೇ ನಿನ್ನ ದಂತಪಂಕ್ತಿಗಳು, ವಿದ್ಯುತ್ಪ್ರಕಾಶವೇ ನಿನ್ನ ದೇಹಕಾಂತಿಯು, ಮೇರು, ಹಿಮಾಲಯು ಮೊದಲಾದ ಪರ್ವತಗಳೇ ನಿನ್ನ ಅಸ್ಥಿಗಳು, ಸೂರ್ಯಚಂದ್ರರೇ ನಿನ್ನ ನೇತ್ರಗಳು. ವಿರಾಟರೂಪಿಯಾದ ಪರಮಾತ್ಮನೇ, ನಿನಗೆ ನಾನು ಶರಣಾಗತನಾಗಿದ್ದೇನೆ." ಹೀಗೆ ಸ್ತೋತ್ರಮಾಡುತ್ತಿದ್ದನು. ಆಗ ಲಕ್ಷ್ಮೀದೇವಿಯು ಶ್ರೀನಿವಾಸನಿಗೆ— ಸ್ವಾಮಿ, ಈ ಕುಲಾಲ ಜಾತಿಯವನಾದ ಭೀಮನಿಗೆ ನಿನ್ನಲ್ಲಿ ಇಷ್ಟು ಭಕ್ತಿಯು ಹ್ಯಾಗೆ ಉತ್ಪನ್ನವಾಗಿರುವದೋ ! ಸದ್ಗುಣ ಸಮುದ್ರನಾದ ನೀನು ಈ ಕುಲಾಲನಿಗೆ ಒಲಿದದ್ದು ನನಗೆ ಪರಮಾಶ್ಚರ್ಯಕರವಾಗಿ ತೋರುವದು." ಎಂದು ಮಾತಾಡಿದಳು. ಆಗ ಶ್ರೀನಿವಾಸನು ಗರುಡನಿಂದ ಆ ಕುಲಾಲನನ್ನು ತನ್ನ ಸಮ್ಮುಖದಲ್ಲಿ ತರಿಸಿ ನಿಲ್ಲಿಸಿದನು. ಆ ಕುಂಬಾರನು ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಕೈ ಜೋಡಿಸಿ—" ಸ್ವಾಮಿಯೇ, ಶೂದ್ರ ಜನ್ಮದವನಾದ ನನ್ನ ಗೃಹಕ್ಕೆ ಯಾಕೆ ಬಂದಿರುವೆ ? ನಾನೇನು ಭಗವದ್ಭಕ್ತನಾದ ವಿದುರನಲ್ಲ, ಶಬರಿಯಲ್ಲ, ಗಜರಾಜನಲ್ಲ, ಉದ್ಧವನಲ್ಲ, ವಿಭೀಷಣನೂ ಅಲ್ಲ. ಕ್ಷರಾಕ್ಷರ ಪುರುಷರಲ್ಲಿ ಶ್ರೇಷ್ಠನಾದ ಹರಿಯೇ, ನನ್ನ ಗೃಹಕ್ಕೆ ನೀನು ಬಂದೆಯಲ್ಲ, ನಿನಗೆ ನಾನೇನು ಕೊಡಲಿ!" ಎಂದು ನುಡಿಯುತ್ತಿರಲು, ಆತನ ಪತ್ನಿಯಾದ ತಮಾಲಿನಿಯೆಂಬವಳು ಶ್ರೀನಿವಾಸನನ್ನು ಸ್ತೋತ್ರಮಾಡಿದಳು;—ಅನಾಥರಿಗೆ ನಾಥನಾದ ಶ್ರೀನಿವಾಸನೇ, ನಾನು ಮಂತ್ರಮಾರ್ಗವನ್ನು ಅರಿಯೆನು, ಕರ್ಮಗಳನ್ನು ತಿಳಿಯೆನು, ನಮ್ಮಂಥ ಶೂದ್ರ ಜನ್ಮದವರಿಗೆ ವೇದಗಳೆಲ್ಲಿ ? ತಪಸ್ಸುಗಳೆಲ್ಲಿ ? ಆದರೂ ಅಜ್ಞಾನಿಗಳಾದ ನಮ್ಮಿಬ್ಬರ ಮೂಢಭಕ್ತಿಯಿಂದ ನೀನು ಸಂತುಷ್ಟನಾಗಿರುವೆ; ದೇವಾಧಿದೇವನೇ, ಈಗ ಹೊತ್ತು ಬಹಳವಾಗಿದೆ, ನೀವು ಬಹಳ ಹಸಿದಿರಬಹುದು, ನಾನು ಜೋಳದ ಅನ್ನವನ್ನು ಸಿದ್ಧಮಾಡಿ ಇಟ್ಟಿರುವೆನು; ಸ್ವಾಮಿಯೇ, ಅದನ್ನೇ ಅಮೃತವೆಂದು ತಿಳಿದು ಯಥೇಷ್ಟವಾಗಿ ಭೋಜನ ಮಾಡಬೇಕು, ಎಂದು ಬೇಡಿಕೊಳ್ಳಲು, ಆ ತಮಾಲಿನಿಯು ಭಕ್ತಿಭಾವದಿಂದ ಆಡುವ ಮಾತುಗಳನ್ನು ಕೇಳಿ ಶ್ರೀ ಹರಿಯು ಸಂತುಷ್ಟನಾಗಿ ಲಕ್ಷ್ಮಿಯ ಮುಖವನ್ನು ನೋಡಿ ನಗುತ್ತ, ತಮಾಲಿನಿಗೆ—ಕುಲಾಲ ಪತ್ನಿಯೇ, ನೀನು ಭಕ್ತಿಯಿಂದ ಕೊಡುವ ಅನ್ನವನ್ನು ಅವಶ್ಯವಾಗಿ ಭಕ್ಷಿಸುವೆನು, ಎಂದನು. ಈ ಪ್ರಕಾರ ಭಕ್ತರಲ್ಲಿ ಪ್ರೀತಿಯುಳ್ಳ ಶ್ರೀಹರಿಯ ಮಾತುಗಳನ್ನು ಕೇಳಿ

ಆಕೆಯು ಸಂತೋಷಪಟ್ಟು ಒಂದು ಪಾತ್ರೆಯಲ್ಲಿ ಅನ್ನವನ್ನು ಹಾಕಿ ಶ್ರೀಹರಿಯ ಮುಂದೆ ಇಡಲು, ಶ್ರೀನಿವಾಸನು ತನ್ನ ಪತ್ನಿಯಾದ ರಮಾದೇವಿಯಿಂದ ಸಹಿತ ನಾಗಿ ಆ ಉತ್ತಮವಾದ ಅನ್ನವನ್ನು ಭೋಜನಮಾಡುತ್ತಿದ್ದನು. ಆ ಆಶ್ಚರ್ಯ ವನ್ನು ಕಂಡು ಬ್ರಹ್ಮರುದ್ರೇಂದ್ರಾದಿ ದೇವತೆಗಳು ಸಂತುಷ್ಟರಾಗಿ, ದೇವಾಧಿದೇವ ನಾದ ಶ್ರೀನಿವಾಸನನ್ನು ಸ್ತೋತ್ರಮಾಡಿದರು. ಆ ಕಾಲದಲ್ಲಿ ದೇವದುಂದುಭಿ ಗಳು ಮೊಳಗಿದವು. ಆಕಾಶದಿಂದ ಪುಷ್ಪವೃಷ್ಟಿಯಾಯಿತು. ಆಗ ಶ್ರೀನಿವಾಸನು ಭೋಜನವನ್ನು ಮಾಡಿ ಸಂತುಷ್ಟನಾಗಿ ಆ ಕುಲಾಲ ದಂಪತಿಗಳಿಗೆ ವೈಕುಂಠಪದ ವನ್ನು ಕೊಟ್ಟನು. ಆ ಸಮಯದಲ್ಲಿ ವಿಮಾನವು ಪ್ರಾಪ್ತವಾಗಲು, ಶ್ರೀನಿವಾಸನು ಆ ಕುಲಾಲನನ್ನು ಕರೆದು ಅವನಿಗೆ ತನ್ನ ಕಿರೀಟವನ್ನೂ, ಶಂಖಚಕ್ರಗಳನ್ನೂ, ಕೌಸ್ತುಭರತ್ನವನ್ನೂ, ಪೀತಾಂಬರವನ್ನೂ, ಅಲಂಕಾರಗಳನ್ನೂ, ಕೊಟ್ಟನು; ಮತ್ತು ಲಕ್ಷ್ಮೀದೇವಿಯು ಆಭರಣಗಳನ್ನೆಲ್ಲ ತಮಾಲಿನಿಗೆ ಕೊಟ್ಟನು. ಆ ದಂಪತಿ ಗಳು ಅಲಂಕೃತರಾಗಿ ವೈಭವದಿಂದ ಆ ದಿವ್ಯವಾದ ವಿಮಾನವನ್ನೇರಿ, ಸರ್ವರು ನೋಡುತ್ತಿರಲು ಸಾಯುಜ್ಯ ಪದವಿಯನ್ನು ಹೊಂದಿದರು.

ಹೀಗೆ ಕುಲಾಲದಂಪತಿಗಳು ಸಾಯುಜ್ಯಪದವಿಯನ್ನು ಹೊಂದಿದ್ದನ್ನು ಕಂಡು ತೋಂಡಮಾನನು ಲಜ್ಜಿತನಾಗಿ, ಶ್ರೀನಿವಾಸನಿಗೆ ಬೇಡಿಕೊಂಡದ್ದೇನಂ ದರೆ,— "ಸ್ವಾಮೀ, ನನ್ನ ದೇಶದಲ್ಲಿರುವ ಈ ಪಾಪಕಾರಿಯಾದ ಶೂದ್ರಕುಲಾಲನಿಗೆ ಸದ್ಗತಿಯನ್ನು ಕೊಟ್ಟೆ, ಇನ್ನು ಮುಂದೆ ನನ್ನ ಗತಿಯೇನು" ಎಂದು ಬೇಡಿ ಕೊಳ್ಳಲು, ಆಗ ಕರುಣಾಕರನಾದ ಶ್ರೀನಿವಾಸನು ತೋಂಡಮಾನನಿಗೆ—ರಾಜನೇ, ಈ ಜನ್ಮದಲ್ಲಿ ನೀನು ಮಹಾಪಾಪವನ್ನು ಮಾಡಿದೆ; ಆದಕಾರಣ ನಿನಗೆ ಸದ್ಗ ತಿಯು ಸಿಗುವದಿಲ್ಲ; ಈ ಜನ್ಮವನ್ನು ತ್ಯಾಗಮಾಡಿ ಅನ್ಯದೇಹವನ್ನು ಸ್ವೀಕರಿಸಿ, ಆ ಜನ್ಮದಲ್ಲಿಯಾದರೂ ನನ್ನ ಆರಾಧನೆಯನ್ನು ಮಾಡು, ಅಂದರೆ ನಿನಗೆ ಸಾರೂಪ್ಯಪದವಿಯು ಪ್ರಾಪ್ತವಾಗುವದು; ಎಂದು ಹೇಳಿದನು. ತೋಂಡಮಾ ನನು ಈ ಮಹಾಪಾಪಜನ್ಮವು ಇರಬಾರದೆಂದು ಆ ಕ್ಷಣದಲ್ಲಿಯೇ ಸ್ವಾಮಿಪುಷ್ಕ ರಣೀ ಸರೋವರಕ್ಕೆ ಬಂದು, ಅದರಲ್ಲಿ ಸ್ನಾನವನ್ನು ಮಾಡಿ ತನ್ನ ದೇಹವನ್ನು ಬಿಟ್ಟು, ಎರಡನೇ ಜನ್ಮವನ್ನು ಹೊಂದಿದನು. ಆ ಜನ್ಮದಲ್ಲಿ ಶ್ರೀನಿವಾಸನ ಆರಾ ಧನೆಯನ್ನು ಮಾಡಿ ಆತನ ಅನುಗ್ರಹದಿಂದ ಪೂರ್ವದಲ್ಲಿ ಕಲ್ಪಿತವಾದ ಸಾರೂಪ್ಯ ಪದವಿಯನ್ನು ಹೊಂದಿದನು.

ಕೇಳೈ ಜನಕರಾಜನೇ, ಪರಮಪೂಜ್ಯನಾದ ಶ್ರೀ ವೇಂಕಟೇಶನ ಮಾಹಾತ್ಮ್ಯವನ್ನು ನಿನಗೆ ಹೇಳಿದೆನು. ಆ ಪರಮಪವಿತ್ರವಾದ ವೇಂಕಟಾಚಲದಲ್ಲಿ ಲಕ್ಷ್ಮೀಸಮೇತನಾಗಿ ಶ್ರೀನಿವಾಸನು ದೇವತೆಗಳಿಂದ ಪೂಜೆಯನ್ನು ಹೊಂದಿ, ಸಜ್ಜನರಾದವರ ಅಭೀಷ್ಟವನ್ನು ಪೂರ್ಣಮಾಡುತ್ತ, ತನ್ನ ಅದ್ಭುತಲೀಲೆಯನ್ನು ಜನರಿಗೆ ಗೋಚರಿಸುತ್ತಿರುವನು. ರಾಜನೇ, ಈ ಮಾಹಾತ್ಮ್ಯವು ಮನೋರಥಪ್ರದಾಯಕವಾಗಿಯೂ, ಪುಣ್ಯಕರವಾಗಿಯೂ ಇರುವದು. ಈ ಆಖ್ಯಾನವನ್ನು ಯಾರು ಹೇಳುವರೋ, ಯಾರು ಕೇಳುವರೋ ಅವರು ಈ ಲೋಕದಲ್ಲಿ ಸುಖೋಪಭೋಗಗಳನ್ನು ಭೋಗಿಸಿ, ಅಂತ್ಯದಲ್ಲಿ ವೈಕುಂಠಲೋಕವನ್ನು ಕುರಿತು ಹೋಗುವರು.

॥ಇತಿ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿ ಶ್ರೀ ವೇಂಕಟೇಶಮಾಹಾತ್ಮ್ಯದಲ್ಲಿ, "ಕುಲಾಲಪ್ರಶಂಸನ"ವೆಂಬ ಹದಿನೈದನೇ ಅಧ್ಯಾಯವು ಮುಗಿದುದು. ॥

॥ ಸಂಪೂರ್ಣಂ, ಶ್ರೀ ವೇಂಕಟೇಶಾರ್ಪಣಮಸ್ತು. ॥

॥ ಶ್ರೀ ಕೃತಪುರೇಶಾಯ ನಮೋನಮಃ ॥

**ಮಂಗಳಂ ಭಗವಾನ್ ವಿಷ್ಣೋ। ಮಂಗಳಂ ಗರುಡಧ್ವಜ ॥**
**ಮಂಗಳಂ ಪುಂಡರೀಕಾಕ್ಷ। ತ್ರೈಲೋಕ್ಯಂ ಮಂಗಳಂ ಕುರು ॥೧॥**

**ಸಂಪೂರ್ಣ**



# ಶ್ರೀ ವೇಂಕಟೇಶಸ್ತೋತ್ರಂ

ವೇಂಕಟೇಶೋ ವಾಸುದೇವಃಪ್ರದ್ಯುಮ್ನೋಽಮಿತವಿಕ್ರಮಃ ॥
ಸಂಕರ್ಷಣೋಽನಿರುದ್ಧಶ್ಚ ಶೇಷಾದ್ರಿಪತಿರೇವಚ ॥೧॥

ಜನಾರ್ದನಃ ಪದ್ಮನಾಭೋ ವೇಂಕಟಾಚಲವಾಸಕಃ ॥
ಸೃಷ್ಟಿಕರ್ತಾ ಜಗನ್ನಾಥೋ ಮಾಧವೋ ಭಕ್ತವತ್ಸಲಃ ॥೨॥

ಗೋವಿಂದೋ ಗೋಪತಿಃ ಕೃಷ್ಣಃ ಕೇಶವೋ ಗರುಡಧ್ವಜಃ ॥
ವರಾಹೋ ವಾಮನಶ್ಚೈವ ಶ್ರೀಧರೋಽಧೋಕ್ಷಜೋ ಹರಿಃ ॥೩॥

ನಾರಾಯಣಃ ಪಂಕಜಾಕ್ಷಃ ಸರ್ವದೇವಗಣಸ್ತುತಃ ॥
ಶ್ರೀನೃಸಿಂಹೋ ಮಹಾಸಿಂಹಃ ಸೂತ್ರಾಕಾರಃಪುರಾತನಃ ॥೪॥

ರಮಾನಾಥೋ ಮಹೀಭರ್ತಾ ಭೂಧರಃ ಪುರುಷೋತ್ತಮಃ ॥
ಚೋಲಪುತ್ರಪ್ರಿಯಃಶಾಂತೋ ಬ್ರಹ್ಮಾದೀನಾಂ ವರಪ್ರದಃ ॥೫॥

ಶ್ರೀನಿಧಿಃ ಸರ್ವಭೂತಾನಾಂ ಭಯಕೃದ್ಭಯನಾಶನಃ ॥
ಶ್ರೀರಾಮೋ ರಾಮಭದ್ರಶ್ಚ ಭವಬಂಧೈಕ ಮೋಚಕಃ ॥೬॥

ಭೂತಾವಾಸೋಽಚಲಾವಾಸಃ ಶ್ರೀನಿವಾಸಃಶ್ರೀಯಃಪತಿಃ ॥
ಅಚ್ಯುತಾನಂದ ಗೋವಿಂದೋ ವಿಷ್ಣುರ್ವೇಂಕಟನಾಯಕಃ ॥೭॥

ಸರ್ವ ದೇವೈಕಶರಣಂ ಸರ್ವದೇವೈಕ ದೈವತಂ ॥
ಸಮಸ್ತ ದೇವ ಕವಚಂ ಸರ್ವದೇವ ಶಿಖಾಮಣಿಃ ॥೮॥

ಇತೀದಂ ಕೀರ್ತನೀಯಸ್ಯವಿಷ್ಣೋರಮಿತತೇಜಸಃ ॥
ತ್ರಿಕಾಲೇಯಃ ಪಠೇನ್ನಿತ್ಯಂ ಪಾಪಂ ತಸ್ಯ ನ ವಿದ್ಯತೇ ॥೯॥

ರಾಜದ್ವಾರೇ ಪಠೇದ್ಘೋರೇ ಸಂಗ್ರಾಮೇ ರಿಪುಸಂಕಟೇ ॥
ಭೂತಸರ್ಪಪಿಶಾಚಾದಿಭಯಂ ನಾಸ್ತಿ ಕದಾಚನ ॥೧೦॥

ಅಪುತ್ರೋ ಲಭತೇಪುತ್ರಾನ್ ನಿರ್ಧನೋ ಧನವಾನ್ಭವೇತ್ ॥
ರೋಗಾರ್ತೋ ಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬಂಧನಾತ್॥೧೧॥

ಯದ್ಯದಿಷ್ಟತಮಂ ಲೋಕೇ ತತ್ತತ್ಪ್ರಾಪ್ನೋತ್ಯಸಂಶಯಃ ॥
ಐಶ್ವರ್ಯಂರಾಜಸಂಮಾನಂ ಭುಕ್ತಿಮುಕ್ತಿಫಲಪ್ರದಮ್ ॥೧೨॥

ವಿಷ್ಣೋರ್ಲೋಕೈಕಸೋಪಾನಂ ಸರ್ವದುಃಖೈಕನಾಶನಮ್ ॥
ಸರ್ವೈಶ್ವರ್ಯಪ್ರದಂ ನೃಣಾಂ ಸರ್ವಮಂಗಲಕಾರಕಮ್ ॥೧೩॥

ಮಾಯಾವೀ ಪರಮಾನಂದಂ ತ್ಯಕ್ತ್ವಾ ವೈಕುಂಠಮುತ್ತಮಮ್ ॥
ಸ್ವಾಮಿಪುಷ್ಕರಣೀತೀರೇ ರಮಯಾಸಹ ಮೋದತೇ ॥೧೪॥

ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ ॥
ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ ॥೧೫॥

ವೇಂಕಟಾದ್ರಿಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ ॥
ವೇಂಕಟೇಶಸಮೋದೇವೋ ನ ಭೂತೋ ನ ಭವಿಷ್ಯತಿ ॥
ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ಸಾಧಯಾಮ್ಯಹಮ್ ॥೧೬॥

ಇತಿ ಶ್ರೀಬ್ರಹ್ಮಾಂಡಪುರಾಣೇ ಬ್ರಹ್ಮನಾರದಸಂವಾದೇ ವೇಂಕಟೇಶ ಸ್ತೋತ್ರಂ ಸಂಪೂರ್ಣಂ ॥೧೭॥

---

ಶ್ರೀ ವೇಂಕಟೇಶೋ ವಿಜಯತೇ

# ಶ್ರೀ ವೇಂಕಟೇಶ್ವರ ಮಂಗಲ ಸ್ತೋತ್ರಂ

ಶ್ರಿಯಃಕಾಂತಾಯ ದೇವಾಯ ಕಲ್ಯಾಣನಿಧಯೇಽರ್ಥಿನಾಂ ॥
ಶ್ರೀವೇಂಕಟನಿವಾಸಾಯ ಶ್ರೀನಿವಾಸಾಯ ಮಂಗಲಂ ॥೧॥

ಲಕ್ಷ್ಮೀಸವಿಭ್ರಮಾಲೋಕ ಸದ್ಮವಿಭ್ರಮಚಕ್ಷುಷೇ ॥
ಚಕ್ಷುಷೇಸರ್ವಲೋಕಾನಾಂ ವೇಂಕಟೇಶಾಯಮಂಗಲಂ ॥೨॥

ಶ್ರೀವೇಂಕಟಾದ್ರಿಶೃಂಗಾಯ ಮಂಗಲಾಭರಣಾಂಘ್ರಯೇ ॥
ಮಂಗಲಾನಾಂ ನಿವಾಸಾಯ ಶ್ರೀನಿವಾಸಾಯ ಮಂಗಲಂ ॥೩॥

ಸರ್ವಾವಯವಸೌಂದರ್ಯ ಸಂಪದಾ ಸರ್ವಚೇತಸಾಂ ||
ಸದಾಸಂಮೋಹನಾಯಾಸ್ತು ವೇಂಕಟೇಶಾಯ ಮಂಗಲಂ ||೪||
ನಿತ್ಯಾಯ ನಿರವದ್ಯಾಯ ಸತ್ಯಾನಂತ ಚಿದಾತ್ಮನೇ ||
ಸರ್ವಾಂತರಾತ್ಮನೇ ಶ್ರೀಮದ್ವೇಂಕಟೇಶಾಯ ಮಂಗಲಂ ||೫||
ಸ್ವತಃ ಸರ್ವವಿದೇ ಸರ್ವಶಕ್ತಯೇ ಸರ್ವಶೇಷಿಣೇ ||
ಸುಲಭಾಯ ಸುಶೀಲಾಯ ವೇಂಕಟೇಶಾಯ ಮಂಗಲಂ ||೬||

ಪರಸ್ಮೈ ಬ್ರಹ್ಮಣೇ ಪೂರ್ಣಕಾಮಾಯ ಪರಮಾತ್ಮನೇ ||
ಪ್ರಪನ್ನ ಪರತತ್ವಾಯ ವೇಂಕಟೇಶಾಯ ಮಂಗಲಂ ||೭||
ಆಕಾಲತತ್ವ ವಿಶ್ರಾಂತಾವಾತ್ಮಾನ ಮನುಪಶ್ಯತಾಂ ||
ಅತೃಪ್ತಾಮೃತರೂಪಾಯ ವೇಂಕಟೇಶಾಯ ಮಂಗಲಂ ||೮||
ಪ್ರಾಯಃ ಸ್ವಚರಣೌಪುಂಸಾಂ ಧ್ಯಾಯತಾಂ ಶರಣತ್ವತಃ ||
ಕೃಪಯಾ ಪಶ್ಯತೇ ಶ್ರೀಮದ್ವೇಂಕಟೇಶಾಯ ಮಂಗಲಂ ||೯||

ದಯಾಮೃತತರಂಗಿಣ್ಯಾಸ್ತರಂಗೈರಪಿಶೀತಲೈಃ ||
ಅಪಾಂಗೈಃ ಸಿಂಚತೇ ವಿಶ್ವಂ ವೇಂಕಟೇಶಾಯ ಮಂಗಲಂ ||೧೦||
ಸ್ರಗ್ಭೂಷಾಂಬರಹೇತೀನಾಂ ಸುಷಮಾವಹಮೂರ್ತಯೇ ||
ಸರ್ವಾರ್ತಿಶಮನಾಯಾಸ್ತು ವೇಂಕಟೇಶಾಯಮಂಗಲಂ ||೧೧||
ಶ್ರೀವೈಕುಂಠವಿರಕ್ತಾಯ ಸ್ವಾಮಿಪುಷ್ಕರಣೀತಟೇ |
ರಮಯಾ ರಮಮಾಣಾಯ ವೇಂಕಟೇಶಾಯಮಂಗಲಂ ||೧೨||

ಶ್ರೀಮತ್ಸುಂದರಜಾಮಾತ್ರೇ ಮುನಿಮಾನಸವಾಸಿನೇ ||
ಸರ್ವಲೋಕನಿವಾಸಾಯ ಶ್ರೀನಿವಾಸಾಯಮಂಗಲಂ ||೧೩||
ನಮಃಶ್ರೀವೇಂಕಟೇಶಾಯ ಶುದ್ಧಜ್ಞಾನಸ್ವರೂಪಿಣೇ ||
ವಾಸುದೇವಾಯ ಶಾಂತಾಯ ಶ್ರೀನಿವಾಸಾಯಮಂಗಲಂ ||೧೪||
ಮಂಗಲಾಶಾಸನಪರೈರ್ಮದಾಚಾರ್ಯ ಪುರೋಗಮೈಃ ||
ಸರ್ವೈಶ್ಚಪೂರ್ವೈರಾಚಾರ್ಯೈಃ ಸತ್ಕೃತಾಯಾಸ್ತುಮಂಗಲಂ ||೧೫||
ಇತಿ|| ಶ್ರೀವೇಂಕಟೇಶಮಂಗಲಸ್ತೋತ್ರಂ ಸಂಪೂರ್ಣಂ ||

---

ಶ್ರೀ ವೇಂಕಟೇಶನ

# ಮಂಗಲಾರತಿಯ ಪದ್ಯಗಳು.

ಇವುಗಳಲ್ಲಿ ಕೆಲವು ವ್ಯಾಕರಣ ದೋಷಗಳೂ, ಛಂದಸ್ಸಿನ ದೋಷಗಳೂ ಇರಬಹುದು; ಆದರೆ ಭಾವಿಕರ ಕೃತಿಗಳನ್ನು ತಿದ್ದುವ ಗೊಡವಿಗೆ ಹೋಗಿರುವದಿಲ್ಲ.

ಸಂಸ್ಕೃತ ಪದಗಳು

ಜಯದೇವ ಜಯದೇವ ಅಘಟಿತಘಟನೇಶ ।
ತಾರಯಮಾಂಭವಜಲನಿಧಿಪತಿತಂ ಲಕ್ಷ್ಮೀಶ ॥ಪ॥

ಮೂರ್ಧ್ನಿ ಶಿಖಂಡಕಮುಕುಟಂ ವಿಲಸಿತಪೀತಪಟಂ ।
ಧೃತಪಶುಶಿಕ್ಷಾಲಗುಡಂ ಪ್ರಿಯಗೋಕುಲಖೇಟಂ ॥
ಗೋಪೀಜನಸಂಗನಟಂ ಕ್ರೀಡಾಕುಂಜತಟಂ ।
ಬ್ರಹ್ಮಾದಿಕ ದೇವಭಟಂ ವಂದೇಕಪಟಪಟುಂ ॥೧॥

ನವಜಲದಾಭ ಶರೀರಂ ಧೃತಪದಮಂಜೀರಂ ।
ರತ್ನಕಟಕಕೋಟೀರಂ ಯದುಕುಲಪರಿವಾರಂ ॥
ವನಮಾಲಾ ಮಣಿಹಾರಂ ಮುನಿಚಿತ್ತವಿಹಾರಂ ।
ಗೋಪಯುವತಿಕುಲಜಾರಂ ಅಭಿನವದಧಿಚೋರಂ ॥೨॥

ಮೃಗಮದ ತಿಲಕಸುಭಾಲಂ ಮಾಯಾಮೃದುಹಾಸಂ ।
ಯಮುನಾತೀರನಿವಾಸಂ ಹಿಂಸಿತನಿಜಕಂಸಂ ॥
ಆಸ್ತಿಕಜನವಿಶ್ವಾಸಂ ಆಗಮನಿಶ್ವಾಸಂ ।
ಪರಮಾನಂದಪರೇಶಂ ರುಕ್ಮಜನಿಜದಾಸಂ ॥೩॥

ನಿನೆಯದು

ಜಯ ದೇವ ಜಯ ದೇವ ಜಯ ವೇಂಕಟರಮಣಾ ।
ದಯಯಾಪಾಲಯ ಮಾಮಿಹ ಭವಸಂಕಟ ಹರಣಾ ॥ಪ॥
ಕಾಲಾತ್ಮನ್ನರಸಿಂಹೇ ಲೀಲಾಧೃತಗಾತ್ರ ।
ನೀಲಾಂಬುದ ನಿರ್ಮಲ ವನಮಾಲಾಂಬುಜನೇತ್ರ ॥

ಹಾಲಾಧರವರದಾಮರ ಜಾಲಾನುತಪಾತ್ರಾ ।
ವ್ಯಾಲಾಚಲಮಂದಿರ ವರ ಕಾಲಾಂತಕಮಿತ್ರಾ ॥ ೧ ॥

ಅಂಡಜವಾಹನ ವಾಮನ ಖಂಡಿತ ದುಕ್ಷತ್ರಾ ।
ಕುಂಡಲಯುಗ ರಂಜಿತಶುಭಗಂಡೋನ್ನತಛತ್ರಾ ॥

ಪಾಂಡವ ಪಾಲನ ದುರ್ಜನ ಕೌರವ ಕುಲಹರ್ತಾ ।
ದಂಡಕವನ ಸಂಚಾರಾ ವಂದಿತ ಮುನಿಸತ್ರಾ ॥ ೨ ॥

ದಾಶರಥೇ ಯದುನಂದನ ವಾಸವನುತಚರಣಾ ।
ಭಾಸುರ ಪೀತಾಂಬರಧರ ಶೇಷಾಂಗಸ್ತರಣಾ ॥

ದಶಕಂಧರರಿಪು ಬುಧಜನ ಪೋಷಾನುತ ಕರುಣಾ ।
ಕೌಸಾಂತಕ ಮೋಹಿನಿವರ ವೇಷಾಭಯಹರಣಾ ॥ ೩ ॥

ತ್ರಿಪುರವಧೂವ್ರತಹಾರಿನ್ನು ಪಿತಾಶ್ವಾತೋಷಾ ।
ಕಪಟಕಲಾಕೋವಿದ ಶ್ರೀವತ್ಸಾಂಕಿತಭೂಷಾ ॥

ತಾಪಸಪ್ರಿಯ ಶಂಖಾರೇ ಅನುಪಮವರವೇಷಾ ।
ಶ್ರೀಪತಿ ಮಹದೇವಾಂತಃಕರುಣಾ ಪರಭಾಷಾ ॥ ೪ ॥

# ಕನ್ನಡ ಪದಗಳು

೧ನೆಯದು.

ರಾಗ—ಭೈರವಿ ಛಾಪು.

ಜಯಮಂಗಳಂ ನಿತ್ಯಶುಭಮಂಗಳಂ ॥ ಪಲ್ಲವಿ ॥
ಶ್ರೀವತ್ಸಲಾಂಛನಗೆ ಕ್ಷೀರಾಬ್ಧಿವಾಸಗೆ ।
ಗೋವರ್ಧನೋದ್ಧಾರ ಗೋವಿಂದಗೆ ॥
ಮಾವಕಂಸನ ಕೊಂದ ಮಕರಕುಂಡಲಧರಗೆ ।
ದೇವಾಂತರಾತ್ಮ ಚಿನ್ಮಯ ರೂಪಗೆ ॥ ೧ ॥

ಅಂಬುಧೀಶಯನಗೆ ಅಖಿಳ ಲೋಕೇಶಗೆ ।
ಶಂಭುಅಜಸುರ ಮುನಿಗಣವಂದ್ಯಗೆ ॥
ಎಂಬತ್ತುನಾಲ್ಕುಲಕ್ಷ ಜೀವರಾಶಿಗಳನು ।
ಗೊಂಬೆಗಳ ಮಾಡಿ ಕುಣಿಸುವ ದೇವಗೆ ॥ ೨ ॥

ಗಿಡ್ಡಬ್ರಾಹ್ಮಣನಾಗಿ ದೊಡ್ಡ ದಾನವಬೇಡಿ ।
ಕಡ್ಡಿಕಾಸಿಗೆ ಕೈಯ ಒಡ್ಡಿದವಗೆ ।
ಅಡ್ಡಬೀಳುವ ಜನರ ಜಾಡ್ಯಗಳಪರಿಹರಿಸಿ ।
ದೊಡ್ಡವರನೇಮಾಳ್ಪ ದೊಡ್ಡ ದೊರೆಗೆ ॥ ೩ ॥

ತೊಳಿಸದಕ್ಕಿಯು ತಿಂಬ ಕಿಲಬುತಳಿಗೆಯುಉಂಬ ।
ಕೊಳಗದಲಿ ಹಣಗಳನು ಅಳೆದು ಕೊಂಬ ॥
ಬಳಿದು ಗಂಟಿಡದವರ ಬಳಲಿಸುತಲರ್ಥವನು ।
ಬಲುಮೆಯುಲಿಸೆಳಕೊಂಬ ಕಳ್ಳ ದೊರೆಗೆ ॥ ೪ ॥

ಒಡೆದ ಮಡಕಿಯು ಮಾರಿ ಒಡಲಹರಕೊಂಬುವಗೆ ।
ಪಡಿವಿಡಿದು ಎಡೆಗಳನು ಮಾರುವವಗೆ ॥
ಗಿಡಗಿಡಕೆ ಕಾಸುಕಾಣಿಕೆ ತಪ್ಪದೀಯುವಗೆ ।
ಒಡೆಯ ವೇಂಕಟರಮಣ ತಿಮ್ಮಪ್ಪಗೆ ॥ ೫ ॥

೨ನೆಯದು.

ರಾಗ—ಅರಭಿ ಆದಿತಾಳ.

ಮಂಗಳಂ ಜಯ ಮಂಗಳಂ ॥ ಪಲ್ಲ ॥

ಜಲದಲಿ ಮತ್ಸ್ಯವತಾರನಿಗೆ ।
ಗಿರಿಯ ಬೆನ್ನಲಿ ಪೊತ್ತ ಕೂರ್ಮನಿಗೆ ॥
ಧರೆಯನುದ್ಧರಿಸಿದ ವರಹವತಾರಗೆ ।
ಚಿಕ್ಕಮಗುವ ಕಾಯ್ದ ಶ್ರೀನರಸಿಂಗಗೆ ॥ ೧ ॥

ಭೂಮಿಯ ದಾನವ ಬೇಡಿದಗೆ ।
ಆ ಮಹಾ ಅಸುರನ ಗೆಲಿದವಗೆ ॥

ರಾಮಚಂದ್ರನೆಂಬ ದಶರಥ ಸುತನಿಗೆ ।
ಭಾಮೆಯರರಸು ಗೋಪಾಲಕೃಷ್ಣಗೆ ॥ ೨ ॥

ಬತ್ತಲೆ ನಿಂತಿದ್ದ ಬುದ್ಧನಿಗೆ ।
ಉತ್ತಮ ಹಯವೇರಿದ ಕಲ್ಕಿಗೆ ॥

ಹತ್ತವತಾರದಿ ಭಕ್ತರ ಸಲಹುವ ।
ಕರ್ತೃ ಶ್ರೀಪುರಂದರ ವಿಠ್ಠಲನಿಗೆ ॥ ೩ ॥

ಮುದ್ರಕ:— ಶಂ. ರಾ. ಭಿಸೆ, ಕ. ಪ್ರಿಂ. ವರ್ಕ್ಸ, ಧಾರವಾಡ. ೧೧೧೩,೩೧,೨೦೦೨.